# ಕನ್ನಡದ ನೆಲೆ

ಶಂ. ಬಾ. ಜೋಶಿ





 ಸಮಾಜ ಪುಸ್ತಕಾಲಯ, ಧಾರವಾಡ.



# ಕನ್ನಡದ ನೆಲೆ

( Beginning of the History of Karnataka )



ಬರೆದವರು:

**ಶಂ. ಬಾ. ಜೋಶಿ**

ಕಣ್ಮರೆಯಾದ ಕನ್ನಡ, ಮಹಾರಾಷ್ಟ್ರದ ಮೂಲ,
ಕರ್ನಾಟಕದ ವೀರ ಕ್ಷತ್ರಿಯರು, ಶಿವರಹಸ್ಯ,
ಕನ್ನಡ ನುಡಿಯ ಹುಟ್ಟು, ಕಂನಾಡ ಕತೆ
ಇತ್ಯಾದಿ ಗ್ರಂಥಕರ್ತರು

ಪ್ರಕಾಶಕರು:

ಸಮಾಜ ಪುಸ್ತಕಾಲಯ
ಧಾರವಾಡ.



೧೯೫೭ ]

[ ಬೆಲೆ: ೩ ರೂ.

ನಾನಾ ಅನಿಮಿತ್ತ ಬಂಧುಗಳಿಂದ

ಪಡೆದ

ನೆರವಿನ ನೆನಹಿನಿಂದ ತಲೆವಾಗಿ

ಅವರಗೆ

**ಸಲ್ಲಿಸಿದ ಕಾಣಿಕೆ !**

# ಪರಿವಿಡಿ

ಪಲ್ಲಿರುವ ಆರೇಳು ಮತಮತಾಂತರಗಳು ; ಮೂಲ ಶಬ್ದವು ಕನ್ನಡ; ಸಂಸ್ಕೃತವಲ್ಲ. ‘ ಕರ್ಣಾಟ ’ ಎಂದು ಪ್ರತಿಪಾದಿಸುವ ಸಂಸ್ಕೃತ ಪಕ್ಷದಲ್ಲಿರುವ ಒಳಭೇದಗಳು; ಅವುಗಳ ಯುಕ್ತಾಯುಕ್ತತೆ; ಮನುಸ್ಮೃತಿ ಮತ್ತು ಮತ್ಸ್ಯಪುರಾಣಗಳಲ್ಲಿ ಅಡಕವಾಗಿರುವ ಪುರಾತನ ಪರಂಪರೆ; ಕರಣ ಅಥವಾ ಕರ್ಣ ಮತ್ತು ನಟ ಇಲ್ಲವೆ ನಾಟ ಈ ಪದಗಳ ಅರ್ಥವು ಸಂಸ್ಕೃತದಿಂದ ಸಮರ್ಪಕವಾಗಿ ಆಗುವುದಿಲ್ಲ. ಇವು ಯಾವುವಾದರೂ ಕನ್ನಡ ಶಬ್ದಗಳಿಂದಾಗಿರಬೇಕು. ಪುಟ ೪೭-೭೩

## ೪ ಕನ್ನಡದ ಹುಟ್ಟು ( ಮುಂದು ವರಿದುದು ) :

ಕರ್+ನಾಡು, ಕರಿಭೂಮಿ ಎಂಬ ಕಾಲ್ಡ್ವೆಲ್ಲ ಪಕ್ಷ ; ಅದರಲ್ಲಿರುವ ಕುಂದು; ಕರು+ನಾಡು, ಎತ್ತರದ ತಪ್ಪಲಿನ ಸೀಮೆ ಎಂದೆಂಬ ಶ್ರೀ. ಹ. ನಾರಾಯಣರಾಯರ ಮತ; ಶ್ರೀಯುತರೇ ಮಾಡಿಕೊಂಡಿರುವ ಸ್ವಮತಖಂಡನೆ; ಕರು+ನಾಡು= ಮಹಾರಾಷ್ಟ್ರ ಎಂಬ ಶ್ರೀ. ಗೋವಿಂದ ಪೈಗಳ ಅಭಿಪ್ರಾಯ. ಕರು+ನಾಡು ಎಂಬ ಪದವೇ ಮೂಲದಲ್ಲಿ ಸಂಸ್ಕೃತೋದ್ಭವ; ಆದುದರಿಂದ ಈ ಅಭಿಪ್ರಾಯವೂ ಅಸಮರ್ಥನೀಯ. ಕಮ್ಮಿತು+ನಾಡು, ಸು–ಗಂಧದ ದೇಶ, ಎಂಬ ಶ್ರೀ. ಆರ್. ನರಸಿಂಹಾಚಾರ್ಯರ ವಿಚಾರ, ಅಶಾಸ್ತ್ರೀಯ; ಕನ್+ಅಳ್, ಕನ್ನಡಿಯಂತೆ ಭಾವಗಳನ್ನು ಒಡಮೂಡಿಸುವ ನುಡಿ, ಎಂಬ ಶ್ರೀ. ಬೇಂದ್ರೆ–ಚೆಟಗೆರೆಯವರ ಸೂಚನೆ, ನಿರಾಧಾರ. ‘ ಕನ್ನಡ ’ ಶಬ್ದದ ಕೆಲವು ವಿಚಿತ್ರ ರೂಪಗಳು ಕರ್+ನಾಟ್+ ಅಕಂ ಎಂಬ ಶ್ರೀ. ಬಿ. ಎಂ. ಶ್ರೀಕಂಠಯ್ಯನವರ ಮಾತು ಕಾಲ್ಡ್ವೆಲ್ಲನ ಪುನರುಕ್ತಿ. ನಾಟ್+ಅಕಂ ಎಂದು ಹೇಳುವುದು ಅನವಶ್ಯಕ; ಅಸಮರ್ಪಕ; ಮೇಲಣ ಎಲ್ಲ ನಿರುಕ್ತಿಗಳಲ್ಲಿಯೂ ಕಂಡುಬರುವ ಸಾಮಾನ್ಯ ಕೊರತೆಗಳು; ನಾಡಿಗೆ ಹೆಸರು ಬರುವ ಬಗೆಗಳು; ‘ ಕನ್ನಡ ’ ಇದರಲ್ಲಿ ನಾಡು ಎಂಬುದು ಉತ್ತರಪದವೆಂಬ ಮಾತು ನಿಶ್ಚಿತ; ಕನ್ ಎಂಬ ಪೂರ್ವಪದವು ಜನಾಂಗವಾಚಕ; ಇದಕ್ಕೆ ಮನುಸ್ಮೃತಿ, ಮತ್ಸ್ಯಪುರಾಣಗಳ ಪ್ರಾಚೀನ ಪರಂಪರೆಯ ಬೆಂಬಲ ಪುಟ ೭೪ –೯೯

## ೫ ಕನ್ನರೂ ನಾಟರೂ :

ಕರಣರೂ ಮತ್ತು ನಾಟರೂ ಒಂದೇ ಜನಾಂಗ. ನಾಟರೆ ನಾಡವರು. ಕವಿರಾಜಮಾರ್ಗದೊಳಗಿನ ‘ ನಾಡವರು ’ ಒಂದು ವಿಶಿಷ್ಟ ಜಾತಿ. ನಾಡವರೇ ರಾಷ್ಟ್ರಿಕರು–ರಾಷ್ಟ್ರಕೂಟರು. ಅಂದು ಮತ್ತು ಇಂದಿನ ನಾಡವರ ವರ್ಣನೆಗಳಲ್ಲಿರುವ

ಆಶ್ಚರ್ಯಕಾರಕ ಸಾಮ್ಯ. ಕನ್ನರೆಂದರೆ ನಾಡವರು. ಕನ್ನರ ಪ್ರಾಚೀನ ಉಲ್ಲೇಖ ಹಿರಾಸರ ಶೋಧ. ಕನ್ನ ಅಥವಾ ಕಣ್ಣ ಇವುಗಳಲ್ಲಿ ನಿಜವಾದುದು ಅವುದು ? ನ ಮತ್ತು ಣ ಗಳ ಪ್ರಾಚೀನ ಪರಂಪರೆ. ಪ್ರಾಕೃತ ಕನ್ನಡಗಳಲ್ಲಿರುವ ಉಲ್ಲೇಖ ಗಳು. ನ ಮತ್ತು ಣ ಗಳ ಸಂದಿಗ್ಧತೆಗೆ ಕಾರಣವೇನು ? ತಮಿಳಿನಿಂದ ದೊರೆವ ಬೆಳಕು. ತಮಿಳಿನಲ್ಲಿರುವ ಅವರ್ಗೀಯ ನಕಾರದ ನಿಜವಾದ ಉಚ್ಚಾರವು ಅವುದು ? ಕನ್ನಡದಲ್ಲಿರುವ ( ೦ ) ಬಿಂದುವಿನಂತೆ. ಅದುದರಿಂದ ನ–ಣಗಳ ವಾದವು ವ್ಯರ್ಥ. ಪುಟ ೧೦೦–೧೨೦

೬ ಕರ್ಣಾರ ಪೂರ್ವ ಪೀಠಿಕೆ :

ಕನ್ನರು ಯಾರು ? ಈ ಶಬ್ದದ ಅರ್ಥವೇನು . ಪ್ರಾಚೀನ ತಮಿಳ ಸಾಹಿತ್ಯದಲ್ಲಿ 'ಕಳವ' ಜನಾಂಗದ ಉಲ್ಲೇಖಗಳು. ಕಳವರು ಎಂದರೆ ಹಾಲಿನವರು, ಗೋವಳರು, ತುರುಕಾರರು. ಇದುವೆ ಮೂಲದ್ರಾವಿಡಶಾಖೆ. ಇದಕ್ಕೆ ಕವಲ ಒಡೆದು ಕನ್ನ, ಕಮ್ಮ ಎಂದು ಮುಂತಾಗಿ ಇಂದಿನ ಕನ್ನಡ, ಆಂಧ್ರ ಮತು ತಮಿಳರ ಮೊದಲಿಗರು ತಲೆದೋರಿದರು. ಕಳವರು ಕನ್ನಡಿಗರೂ ಅಹುದು. ಕಳವರೇ ಕಳಭ್ರರು. ಕಳಭ್ರರು ಕನ್ನಡಿಗರೆಂದು ಶ್ರೀ. ವೆಂಕಯ್ಯನವರು. ಕನ್ನೇಶ್ವರ ಎಂಬ ಹೆಸರಿನ ಶಿವಾಲಯಗಳು. ಈ ಪದದ ಅರ್ಥವೇನು ? ಕನ್ನ= ಕೃಷ್ಣ ತಪ್ಪು. ಉಡರ್ಸರು ಹೇಳುವಂತೆ ಕರ್ಣ ಎಂಬುದೇ ನಿಜ. ಕನ್ನೇಶ್ವರನು ಕರ್ಣ ( ಕನ್ನ ) ಜನಾಂಗದ ದೈವತ. ವೇದದಲ್ಲಿ ಕಾಣುವ ಕಳವರ ಸುಳುಹು. ಅಂದಿನ ಮತ್ತು ಇಂದಿನ ಕಳವರಲ್ಲಿರುವ ಸಾಮ್ಯ. ಎದ್ರಾಧ್ಯಾಯದಲ್ಲಿರುವ 'ಸ್ತೇನಾನಾಂ ಪತಿ' ಇದರ ಅರ್ಥ. ಶಿವನು ಕಳವರ—ಕನ್ನರ ದೇವತೆ. ಅದುದರಿಂದ ಕನ್ನರು ಕನ್ನಡದ ಮೊದಲಿಗರು. ಪುಟ ೧೨೧—೧೫೨

೭ ಕನ್ನರ ನಾಡು :

ಸಿಂಧು–ಪಂಜಾಬಿನ ವರೆಗೆ ಹಬ್ಬಿದ್ದ 'ದ್ರಾವಿಡ'ರು ಆರ್ಯರೊಡನೆ ನಡೆದ ನುಗ್ಗಾಟದಲ್ಲಿ ದಕ್ಷಿಣಕ್ಕೆ ಸರಿದರು. ದಕ್ಷಿಣಾಪಥವು ದ್ರಾವಿಡಪಂಗಡದವರ ನೆಲೆವೀಡಾಗಿ ಉಳಿಯಿತು. ವಿಂಧ್ಯ–ಹಿಮಾಲಯಗಳ ನಡುವಣ ನಾಡು ಆರ್ಯಾವರ್ತವೆನಿಸಿತು. ಮುಂದೆ ಕ್ರಮವಾಗಿ ಆರ್ಯಾವರ್ತವು ದಕ್ಷಿಣಾಪಥ ದಲ್ಲಿ ಶರಾವತಿಯ ವರೆಗೂ ಬಂದು ಮುಟ್ಟಿತು; ದಕ್ಷಿಣದೊಳಗಿನ ಈ ಹೊಸ ಆರ್ಯಾವರ್ತವೆ ಅರಿಯರ ನಾಡು—ಮಹಾರಾಷ್ಟ್ರ. ಬಂಗಾಳ, ಮಹಾರಾಷ್ಟ್ರ, ಗುಜರಾತ ಮೊದಲಾದ ಕಡೆಗಳಲ್ಲಿರುವ ದ್ರಾವಿಡ ಅಂಶ.

ಲಾಟ—ಕರ್ಣಾಟ, ಬೃಹತ್ ಕರ್ಣಾಟಗಳ ಅರ್ಥ. ಕುಂತಲ=ಕರ್ಣಾಟ. ದ್ವಾರಕೆಯ ವರೆಗೆ ಕುಂತಲದೇಶ. ಕುಂತಲರು ದ್ರಾವಿಡರು. ಲಾಟ=ರಾಟ. ಕಠಿಕರು ರಾಷ್ಟ್ರಿಕರು. ರಾಷ್ಟ್ರಿಕರು=ಕುಟುಂಬಿ. ಕುಟುಂಬಿ ಎಂದರೆ ಕುಡುವ, ಒಕ್ಕಲಿಗ. ಮಹಾರಾಷ್ಟ್ರದೊಳಗಿನ ಕುಳುಬಿ, ಗುಜರಾತದ ಕಣಬಿ, ಕನ್ನಡ ಆಡುವ ಇವರೆಲ್ಲ ಮೂಲದಲ್ಲಿ ಒಂದು—ಕುಟುಂಬಿಗಳು, ಒಕ್ಕಲರು ಅಶೋಕನ ಶಾಸನದ ರಾಷ್ಟ್ರಿಕ ಭೋಜಕರೂ ರಾಮಾಯಣದೊಳಗಿನ ವಿದರ್ಭರೂ ರಾಷ್ಟ್ರಿಕರೂ ಒಂದೇ. ಭೋಜರು ವಿದರ್ಭದವರು. ಲಾಟವು ರಾಟ ಎಂಬುದಕ್ಕಿಂತ ನಾಟ ಎಂದರೆ ಲೇಸು. ನಾಟ ಎಂಬ ದೇಶ, ಮತ್ತು ಜನಾಂಗ. ಲಾಟದೊಳಗಿನ ಕನ್ನಡದ ಕುರುಹುಗಳು. ಡಾ. ಅಳತೇಕರರ ಸಂದೇಹ. ನಿವಾರಣೆ. ಕನ್ನಡಿಗರಲ್ಲಿ ಸ್ವಭಾಷೆ, ಸ್ವದೇಶಗಳ ಬಗ್ಗೆ ವಿಶೇಷ ಅಭಿಮಾನವಿಲ್ಲ. ಹೊರನಾಡಿಗೆ ಹೋದಾಗ ಕನ್ನಡಿಗರು ತಮ್ಮ ನುಡಿಗೆ ಅಂಟಿಕೊಂಡು ಉಳಿವ ವಿಶೇಷ ಪ್ರಯತ್ನಮಾಡಿಲ್ಲ. ಡಾ. ಗ್ರಿಯರಸನ್ನರ ಅನುಭವ. ಆದುದರಿಂದ ಲಾಟ ಮತ್ತು ವರಾಟಗಳಲ್ಲಿರುವ ಕನ್ನಡದ ವಿಶೇಷ ಅವಶೇಷಗಳ ಮೇಲಿಂದ ಆ ಪ್ರದೇಶವು ಮೊದಲು ಕನ್ನಡಿಗರದೇ. ವರಾಟದಲ್ಲಿ ಈಗಲೂ ಕನ್ನಡ ಮಾತಾಡುವ ಕುರುಬರುಂಟು, ಹೊಲೆಯರುಂಟು. 'ಕನ್ನಡು ಎಂಬ ಹೆಸರಿನ ಊರಿದೆ. ತಾಲ್ಲೂಕು ಇದೆ. ಈ ಭಾಗದಲ್ಲಿಯೇ ವೀರಗಲ್ಲುಗಳು ಇವೆ. ವೀರಗಲ್ಲು ಕನ್ನಡಿಗರ ವೈಶಿಷ್ಟ್ಯ. ನಾಶೀಕ, ಖಾನದೇಶ, ಅಹಮ್ಮದನಗರ ಜಿಲ್ಲೆಗಳಲ್ಲಿ 'ಕನ್ನಡ' ಎಂಬ ಹೆಸರಿನ ಗೋವಳರು. 'ಖಾನದೇಶ' ಎಂಬ ಹೆಸರೇಕೆ ಈ ನಾಡಿಗೆ? 'ಖಾನ' ಎಂಬುದು ಈ ಪ್ರದೇಶಕ್ಕೆ ಮುಸಲ್ಮಾನರು ಬರುವುದಕ್ಕೆ ಮೊದಲಿನಿಂದಲೂ ಇದ್ದ ಹೆಸರು, ಖಾನ ಎಂಬುದು ಮೊದಲು ಖಾಂಡವರ ದೇಶ. ಅಲ್ಲ ಕಣ್ಣ, ಕೃಷ್ಣದೇಶ ಎಂಬ ಅಭಿಪ್ರಾಯಗಳು. ಅವುಗಳ ಅಸಮರ್ಪಕತೆ. ಖಾನದೇಶವು ಕನ್ನದೇಶ. ಇಲ್ಲಿಯ ವರೆಗೂ ಲಾಟದ ವಿಸ್ತಾರ ವಿತ್ತು. ಆದುದರಿಂದ ಲಾಟ—ಕರ್ಣಾಟವೆಂಬ ಪ್ರಾಚೀನ ಪರಂಪರೆಯು ತುಂಬ ಸರಿಯಾದುದು. ಇದುವೆ ಕಣ್ಮರೆಯಾದ ಕನ್ನಡ. ಇದುವೆ ಕನ್ನರ ಮೊದಲ ನೆಲೆ.

# ಪ್ರಕಾಶಕರ ಮುನ್ನುಡಿ.

ಶ್ರೀ ಶಂ. ಬಾ. ಜೋಶಿಯವರ ಗ್ರಂಥಗಳು ಅವರ ಆಳವಾದ ಅಭ್ಯಾಸದ ಸಾಕ್ಷಿಯಾಗಿವೆ. ಅವರು ತಮ್ಮ ಗ್ರಂಥ ಹಾಗು ಲೇಖನಗಳ ಮುಖಾಂತರ ಹಲವು ಹೊಸ ಮತ್ತು ಜೀವಂತ ವಿಚಾರಗಳನ್ನು ಜನರೆದುರು ಮಂಡಿಸಿದ್ದಾರೆ. ಕಂನಾಡವರ ಭಾಷೆ ಮತ್ತು ಸಂಸ್ಕೃತಿಯ ಬಗೆಗೆ ಅವರ ಸಂಶೋಧನವು ಅವರ ಅಂತರಪ್ರಾಂತೀಯ ಕೀರ್ತಿಗೆ ಕಾರಣವಾಗಿದೆ. ಮೂಲಗ್ರಾಹಿಯಾದ ಅವರ ದೃಷ್ಟಿಕೋನವು ವಿಚಾರವಂತರನ್ನೂ ವಿಚಾರಕ್ಕೆ ಹಚ್ಚುವಂತಹದಾಗಿದೆ. ಅವರ ಸಂಶೋಧನಾತ್ಮಕ ಎಲ್ಲ ವಿಚಾರಗಳೂ ಎಲ್ಲರ ಮನ್ನಣೆಯನ್ನು ಹೊಂದಿವೆಯೆಂದು ಇದರ ಅರ್ಥವಲ್ಲ. ಸಮುದ್ರದ ಆಳದಿಂದ ಹೆಕ್ಕಿಕೊಂಡು ಬಂದ ಎಲ್ಲವೂ ಆಣೆಮುತ್ತುಗಳೇ ಆಗಿರುವುದು ಸಾಧ್ಯವಿಲ್ಲ. ಆದರೆ ಅವರ ಒಂದೊಂದು ಪುಸ್ತಕದಲ್ಲಿಯೂ ಪ್ರತಿಪಾದಿಸಿದ ಮುಖ್ಯ ಸಂಗತಿಯು ಸತ್ಯದ ಒರೆಗಲ್ಲಿಗೆ ನಿಂತು ಸಿದ್ಧಾಂತವೆಂದು ಸ್ವೀಕೃತವಾಗುತ್ತಿರುವುದು ಕಂಡು ಬರುತ್ತಿದೆ.

ಇವರ ಮೊದಲಿನ ಪ್ರಕಟಣೆಗಳೆಲ್ಲ ತೀರಿದ್ದು ಅವುಗಳನ್ನು ಅನುಕೂಲತೆಯಂತೆ ಬೇಗನೆ ಪುನರ್ಮುದ್ರಿಸಬೇಕೆಂಬ ವಿಚಾರವಿದೆ, ವಾಚಕರ ಸಾಕಷ್ಟು ಬೆಂಬಲ ದೊರೆತರೆ. ಇಷ್ಟೇ ಅಲ್ಲ, ಅವರು ಬೇಗನೆ ಆರೋಗ್ಯಭಾಗ್ಯವನ್ನು ಪಡೆದು ಪೂರ್ಣಗೊಳಿಸಲಿರುವ ಕೆಲವು ಹೊಸ ಪುಸ್ತಕಗಳನ್ನೂ ಪ್ರಕಟಿಸುವ ನಿರ್ಧಾರ ಮಾಡಿದ್ದೇವೆ.

ಶ್ರೀ. ಶಂ. ಬಾ. ಜೋಶಿಯವರು ಈ ಗ್ರಂಥದ ಎರಡನೆ ಮುದ್ರಣ ಮಾಡಿಕೊಳ್ಳಲು ನಮಗೆ ಅನುಮತಿಯನ್ನಿತ್ತುದಕ್ಕಾಗಿ ಅವರಿಗೆ ಚಿರಋಣಿಯಾಗಿದ್ದೇವೆ.

---

# ಅರಿಕೆ.

'ಕಣ್ಮರೆಯಾದ ಕನ್ನಡ'ವನ್ನು ಬರೆದಾಗ (೧೯೩೩) ಕನ್ನಡ ನಾಡವರ ಮೊದಲ ನೆಲೆವೀಡಾವುದೆಂಬ ಮಾತು ಸ್ಪಷ್ಟವಾಯಿತು.

'ಮಹಾರಾಷ್ಟ್ರದ ಮೂಲ'ದಿಂದ (೧೯೩೪) ಕನ್ನಡ ಮತ್ತು ಮರಹಟ್ಟಿಗಳೆರಡೂ ಪ್ರಾಚೀನಕಾಲದಲ್ಲಿ ಅಭಿನ್ನ ದೇಶಗಳಾಗಿದ್ದುವೆಂಬುದು ಗಮನಕ್ಕೆ ಬಂದಿತು.

'ಕರ್ಣಾಟದ ವೀರಕ್ಷತ್ರಿಯರು' ಎಂಬ ಪುಸ್ತಕದಲ್ಲಿ (೧೯೩೭) ಕನ್ನಡದ ಮೊದಲಿಗರು ಹಟ್ಟಿಕಾರವೃತ್ತಿಯವರೆಂಬ ಮಾತು ಬೆಳಕಿಗೆ ಬಂದು ಈ ಜನಗಳ ಋಗ್ವೇದಕಾಲದ ವರೆಗಿನ ಸುಳುಹುದೋರಿತು. ಮತ್ತು ಕರ್ಣಾಟ–ಮಹಾರಾಷ್ಟ್ರಗಳಲ್ಲಿ ಹಬ್ಬಿಕೊಂಡಿದ್ದ ಮೂಲ ಹಟ್ಟಿಕಾರ ಜನಾಂಗವು ಒಂದೇಯೆಂದೂ ಆಂಧ್ರರೂ ಇದೇ ಪಂಗಡದವರೆಂದೂ ಗೊತ್ತಾಯಿತು.

ಆದರೂ ಕನ್ನಡದ ಮೊದಲಿಗರು ಇನ್ನೂ ಅಷ್ಟು ನಿಚ್ಚಳವಾಗಿ ಒಡಮೂಡಿ ಕಂಡಿದ್ದಿಲ್ಲ. ಇತ್ತೀಚಿನ ಅಭ್ಯಾಸದಲ್ಲಿ ಈ ವಿಷಯವನ್ನು ಕುರಿತು ನನಗೆ ತಿಳಿದ ಮತ್ತು ಹೊಳೆದ ಸಂಗತಿಗಳನ್ನು ಪ್ರಸ್ತುತ ಪುಸ್ತಕದಲ್ಲಿ ಒಟ್ಟಿರಿಸಿದ್ದೇನೆ. ಇದುವೆ "ಕನ್ನಡದ ನೆಲೆ" ಕನ್ನಡರ ಇಷ್ಟದೇವತೆ 'ವಿಷ್ಣು–ಕೃಷ್ಣ' ನಾದರೂ, ಕುಲದೈವತವು 'ರುದ್ರ–ಶಿವ' ನು. ಆದುದರಿಂದ 'ಶಿವರಹಸ್ಯ'ವನ್ನರಿಯದೆ ಕನ್ನಡರ ಸಂಪೂರ್ಣ ನೆಲೆಯು ಹತ್ತಲಾರದೆಂದು ನನ್ನ ಮನವರಿಕೆಯಾಗಿ, ಈ ವಿಷಯದಲ್ಲಿಯೂ ಒಂದು ಸ್ವತಂತ್ರ ಪ್ರಬಂಧವು ಅವಶ್ಯವೆನಿಸಿ, ಅದನ್ನೂ ಪ್ರಕಟಿಸಿದ್ದಾಯ್ತು.

'ಕನ್ನಡದ ನೆಲೆ'ಯಲ್ಲಿ, ಈ ನಾಡನ್ನು ನಿಲ್ಲಿಸಲು ಮೊದಲು ಕಾರಣವಾದ ಮೂಲ ಜನಾಂಗವು ಆವುದು? ಎಂಬುದೆ ಮುಖ್ಯ ಪ್ರಶ್ನೆಯು. 'ಶಿವರಹಸ್ಯ'ವು ಇದಕ್ಕೆ ಪೋಷಕವಾದ ಒಂದು ಪ್ರಬಂಧವು.

ಕನ್ನಡದ ಮೊದಲಿಗರು ಯಾರು? ಅವರ ಗುಣ–ಸ್ವಭಾವಗಳು ಎಂತಹವು? ಎಂಬುದರ ಸ್ಪಷ್ಟ ಜ್ಞಾನವಿಲ್ಲದೆ ಕನ್ನಡ ಸಂಸ್ಕೃತಿಯ ಸರಿಯಾದ ಅರ್ಥವೇ ಆಗಲಾರದು. ಆದುದರಿಂದ ಈ ನಾಡಿನ ಏಳ್ಗೆಯನ್ನು ಬಯಸುವ ನಾಡು ಮತ್ತು ನುಡಿಯ ಸೇವಕರಿಗೆ ಕನ್ನಡ ಮೂಲಜನಾಂಗದ ಸಮಸ್ಯೆಯು, ಬಹಳ ಮಹತ್ತ್ವದ್ದಾಗಿದೆ. ಹಿಂದಿನ ತೊಡಕುಗಳು ತಿಳಿಯದೆ ಇಂದಿನ ತೊಂದರೆಗಳನ್ನು ನಿವಾರಿಸಿಕೊಳ್ಳಲಿಕ್ಕೆ ಆಗಲಾರದು. ಈ ದೃಷ್ಟಿಯಿಂದಲೂ ಕನ್ನಡದ ನೆಲೆಯನ್ನು ಕಂಡುಕೊಳ್ಳುವುದು ಒಂದು ಆವಶ್ಯಕ ಕರ್ತವ್ಯ.

ಪ್ರಸ್ತುತ ಗ್ರಂಥದಲ್ಲಿ ಕೊರತೆಗಳು ಏನೂ ಉಳಿದಿಲ್ಲವೆಂದು ಹೇಳುವ ಎದೆಗಾರಿಕೆಯು ನನ್ನಲ್ಲಿ ಇಲ್ಲವಾದರೂ ಕನ್ನಡಿಗರ ಹುಟ್ಟು ಮತ್ತು ಬೆಳಿಗೆ ಯನ್ನು ಕುರಿತು ಇಷ್ಟೊಂದು ವಿಶದವಾಗಿ ವಿವೇಚಿಸಿದ ಪುಸ್ತಕವು ಇದೆ ಮೊದ ಲನೆಯದೆಂದು ತಲೆವಾಗಿ ಹೇಳಬಯಸುತ್ತೇನೆ. ಕನ್ನಡದ ಮೂಲಜನಾಂಗ ವಾವುದು ಎಂಬುದು ಬೆಳಕಿಗೆ ಬರುವುದರಿಂದ ನಮ್ಮ ಇತಿಹಾಸದೊಳಗಿನ ಹಲವು ಸಂದಿಗ್ಧ ಸಮಸ್ಯೆಗಳೆಲ್ಲ ತನ್ನ ತಾನೆ ಬಿಟ್ಟು ಹೋಗುತ್ತಲಿವೆ. ಈ ನಾಡಿಗೆ 'ಕನ್ನಡ' ಎಂಬ ಹೆಸರು ಏಕೆ ಬಂದಿತು? ಕನ್ನಡ–ಮರಾಠಿಗಳ ಸಂಬಂಧವೇನು? ಕನ್ನಡ, ತಮಿಳ ಮತ್ತು ಆಂಧ್ರರು ಮೊದಲು ಒಂದೇ ಶಾಖೆಯವರೆಂದರೇನು? ಹೇಗೆ? ಮೂಲಕರ್ಣಾಟದ ವಿಸ್ತಾರವೆಷ್ಟು? ಹೇಗೆ ಕ್ಷೀಣವಾಯ್ತು? 'ದಕ್ಷಿಣಾಪಥದಲ್ಲೆಲ್ಲ ಕರ್ಣಾಟದ ವಿಜಯಧ್ವಜವನ್ನು ಮೆರೆಯಿಸಿ, ಉತ್ತರದವರೆಗೂ ತಮ್ಮ ಶೌರ್ಯ, ಧೈರ್ಯಗಳ ಮಾದರಿ ಯನ್ನು ತೋರಿದ ಈ ನಾಡಿನ ಆ ಗಂಡು ಕುಲವು (Martial race) ಳಾವುದು?' ಎಂಬಿವೆ ಮೊದಲಾದ ಮನದ ಕೊರೆಗೆ ನನ್ನ ಮಟ್ಟಿಗಾದರೂ ಸಮಾಧಾನಕರವಾದ ಉತ್ತರವು ದೊರೆಯುತ್ತಲಿವೆ. ನನ್ನ ಸಂದೇಹಗಳಿಗೆ ದೊರೆತ ಉತ್ತರವು ಇನ್ನುಳಿದವರಿಗೂ ಅಲ್ಪ ಸ್ವಲ್ಪ ಉಪಯುಕ್ತವಾಗಬಹು ದೆಂಬ ಆಸೆಯಿದೆ.

ಧಾರವಾಡ
(ಕಾರಹುಣ್ಣಿವೆ) ೨–೬–೧೯೩೯

೨

ಇದೇ ನಿಟ್ಟಿನಲ್ಲಿ ಮುಂದೆ ನಡಸಿದ ಅಭ್ಯಾಸದ ಫಲವಾಗಿ 'ಕಂನಾಡ ಕತೆ' (೧೯೪೭) ಯು ಬೆಳಕಿಗೆ ಬಂತು. ಅದರಲ್ಲಿ ನಮ್ಮ ನಾಡಿನ (ಕರ್ಣಾಟ–ಮರಹಟ್ಟದ) ಗ್ರಾಮನಾಮಗಳ ಅಭ್ಯಾಸದಿಂದ ಹೊರಬರುವ ಈ ಜನಾಂಗದ ಸಾಂಸ್ಕೃತಿಕ ಮತ್ತು ಐತಿಹಾಸಿಕ ಸಂಗತಿಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಕಂನಾಡ ಕತೆಯಲ್ಲಿ ನಮ್ಮ ಈಮೊದಲು ಉಲ್ಲೇಖಿಸಿದ ಮಹತ್ವದ ಸಂಶೋಧನೆಗಳಿಗೆಲ್ಲ ಪುಷ್ಟಿಕೊಡುವ ಅನೇಕ ಹೊಸ ಮಾತುಗಳು ಬೆಳಕಿಗೆ ಬಂದಿವೆ.

ಇಷ್ಟೆಲ್ಲ ಬೇರೆ ಬೇರೆ ದಿಕ್ಕಿನಿಂದ ತಾಳಮೇಳಗೂಡುವ ಆಧಾರಗಳು ದೊರೆತರೂ 'ನಮ್ಮದೀ ನಾಡು, ಕರಿದು ನಾಡು' ಎಂದೆಂಬ ಹಟ ಇನ್ನೂ

ಕೆಲರನ್ನು ತೊಲಗಿಲ್ಲ. ಆದರೂ ಪ್ರಾಂಜಲ ಮನಸ್ಸಿನ ತರುಣ ವಿದ್ವಾಂಸರು ತಮ್ಮ ಲೇಖನ ಮತ್ತು ಗ್ರಂಥಗಳಲ್ಲಿ ನಮ್ಮ 'ಕಂನಾಡ' ವಿಚಾರವನ್ನು ಎತ್ತಿ ಪುಷ್ಟೀಕರಿಸಿ ಬರೆಯಲಾರಂಭಿಸಿದುದು ಸಂತೋಷದ ಸಂಗತಿಯಾಗಿದೆ.

ಇತ್ತೀಚಿನ ಸಂಶೋಧನಗಳಿಂದ ಪುರಾಣ ಮತ್ತು ಸ್ಮೃತಿಗಳ ಲೇಖನ ಕಾಲವು ಸುಮಾರಾಗಿ ನಿಶ್ಚಿತವಾಗಿರುವುದರಿಂದ ಕಂನಾಡ–ಕರ್ಣಾಟ ಎಂಬ ಮಾತು ಎಂದು ಬಳಕೆಯಲ್ಲಿ ಬರಲು ಆರಂಭವಾಗಿರಬಹುದೆಂಬುದನ್ನು ಊಹಿಸಲು ಶಕ್ಯವಾಗಿದೆ. ಮಹಾಭಾರತಕ್ಕಿಂತಲೂ ವಾಯು ಮುಂತಾದ ಪುರಾಣಗಳು ಪ್ರಾಚೀನ. ಏಕೆಂದರೆ ಭಾರತದಲ್ಲಿ ವಾಯು ಪುರಾಣದ ಉಲ್ಲೇಖ ಬರುತ್ತದೆ. ಮತ್ಸ್ಯಪುರಾಣವು ವಾಯುವಿನಷ್ಟು ಪುರಾತನವಲ್ಲವೆಂದು ವಿದ್ವಾಂಸರ ಮತ. ವಾಯು ಪುರಾಣದಲ್ಲಿ ಕಲ್ಯಾಃ ( ಕಲ್ವಾ: ) ಕಳವರ ಉಲ್ಲೇಖವಿದೆ. ಮತ್ಸ್ಯದಲ್ಲಿ ಕರ್ಣ–ಕಣ್ಣರ ಹೆಸರು ಬರುತ್ತದೆ. ಇದು ನಮ್ಮ ಈ ಮೊದಲು ಈ ಗ್ರಂಥದಲ್ಲಿ ಮಾಡಿದ ಊಹೆಯನ್ನೇ ಪುಷ್ಟೀಕರಿಸುತ್ತದೆ. ಮೂಲ ವಾಯು ಪುರಾಣವು ಕ್ರಿಸ್ತ ಪೂರ್ವ ೬೦೦ ವರುಷಗಳಷ್ಟು ಹಳತು ಇರಬೇಕು. ಅದರ ಮೇಲೆ ಅದು ಪರಿವರ್ತನೆಗೊಳ್ಳುತ್ತ ಈವರೆಗೆ ಬಂದಿದೆ; ಎಂದು ಡಾ. ಪಾಟೀಲ ಅವರು ತಮ್ಮ ಪ್ರಬಂಧದಲ್ಲಿ ಮಂಡಿಸಿದ್ದಾರೆ.

ಮನುಸ್ಮೃತಿ ಮತ್ತು ಸಾಮಾನ್ಯವಾಗಿ ಹಳೆಯ ಪುರಾಣಗಳು ಕ್ರಿ. ಪೂ. ೩೦೦ ರಿಂದ ಕ್ರಿ. ಶ. ೩೦೦ ರ ವರೆಗೂ ವ್ಯೆಗೊಂಡಿವೆಯೆಂದು ಡಾ. ಕಾಣ, ಪಾರ್ಜಿಟರ ಮೊದಲಾದ ಸಂಶೋಧಕರ ಅಭಿಪ್ರಾಯವಾಗಿದೆ. ಆದಕಾರಣ ಕಳವರ್—ಕಣ್ಣರ್ ಆಗಿ ಕಂನಾಡರೆಂದು ಹೆಸರು ಪಡೆದುದು ಕ್ರಿ. ಶ. ಮೂರುನೂರರ ಮುಂಚೆಯೇ ಇರಬೇಕೆಂದು ಹೇಳಬೇಕಾಗುತ್ತದೆ.

ಅಶೋಕನ ಶಾಸನಗಳಲ್ಲಿ ರಿಷ್ಟಿಕ ಭೋಜಕರು ಬರುತ್ತಾರೆ. ಆ ಸುಮಾರಿನ ಶಾಸನ, ಗ್ರಂಥ ಮೊದಲಾದವುಗಳಲ್ಲಿ ವನವಾಸಿಕರು, ಮಹಿಷಕರು ಕೇಳಬರುತ್ತಾರೆ. ಆದಕಾರಣ ಕರ್ಣಾಟವೆಂಬ ಹೆಸರು ಕ್ರಿ. ಶ. ೩೦೦ ರಿಂದ ಮುಂಚೆ ಇನ್ನೂ ಬಳಕೆಗೆ ಬಂದಿರಲಿಲ್ಲವೆಂಬುದು ನಿಶ್ಚಿತ. ಆರ್ಯೀಕರಣದಿಂದ ಮರಹಟ್ಟವು ಮಹಾರಾಷ್ಟ್ರವಾಗಿ ಸಿಡಿದು ಬಲಿಯುತ್ತಿದ್ದ ಹಾಗೆ ಕರ್ಣಾಟದ ಬೇರೆ ಅಸ್ತಿತ್ವವೂ ಅವಶ್ಯಕವಾಯಿತು. ಇವೆರಡೂ ಪ್ರಾಂತಗಳು ಮೊದಲು ದಕ್ಷಿಣಾಪದ, ದಕ್ಷಿಣಾಪಥ, ಕುಂತಲಾದಿ ( ಎರಡನ್ನೂ ಒಳ

ಗೊಳ್ಳುವ ) ಸಾಮಾನ್ಯ ಹೆಸರಿನಿಂದಲೇ ಕರೆಯಲ್ಪಡುತ್ತಿದ್ದುವು.

ಈ ಒಂದೆರಡು ಹೊಸ ವಿಚಾರಗಳನ್ನುಳಿದರೆ ಇದು ಹಿಂದಣ ಬಾರಿಯ ಪುನರ್ಮುದ್ರಣವೇ ಆಗಿದೆ. ಮೊದಲ ಆವೃತ್ತಿಯು ಹೊರಟು ಹದಿಮೂರು ವರುಷಗಳಾದುವು.

ಮುಂಬೈ ಸರಕಾರದ ಪಬ್ಲಿಕೇಶನ್ ಗ್ರ್ಯಾಂಟಿನ ತಜ್ಞಸಮಿತಿಯ ಶಿಫಾರಸಿನಿಂದ ಆ ಧನಸಹಾಯದಿಂದ ಪ್ರಥಮ ಮುದ್ರಣವಾಯ್ತು. ಪ್ರಕಟನೆಯ ನಂತರ ಅನೇಕ ಬಲ್ಲಿದರ ಹಾಗೂ ವಿದ್ವಾಂಸರ ಚಿತ್ತವನ್ನು ಈ ಗ್ರಂಥವು ಸೆಳೆಯಿತು. ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು ತುಂಬ ಹೊಸ ವಿಚಾರಗಳನ್ನು ಬೆಳಕಿಗೆ ತಂದಿರಿಸಿದ ಬಗೆಗೆ ತಮ್ಮ ಮೆಚ್ಚುಗೆಯನ್ನು ತಿಳಿಸಿದರು. ಪ್ರೊ. ಕುಂದಣಗಾರರು ಪುಣೆಯ ಓರಿಯಂಟಾಲಿಸ್ಟಿನಲ್ಲಿ ಒಳ್ಳೆಯ ವಿಮರ್ಶೆಯನ್ನು ಪ್ರಕಟಿಸಿದರು. ಮೈಸೂರ ಸರಕಾರದ ಆ ವರುಷದ ದೇವರಾಜ ಬಹದ್ದೂರ ಬಹುಮಾನವೂ ಈ ಗ್ರಂಥಕ್ಕೆ ಬಂತು. ಮುಂಬೈ ವಿಶ್ವವಿದ್ಯಾನಿಲಯದ ಎಂ. ಎ. (ಕಂನಡ) ಪರೀಕ್ಷೆಗೆ ಓದಬೇಕಾದ ಗ್ರಂಥಗಳಲ್ಲಿ ಇದು ಸ್ಥಾನವನ್ನು ಪಡೆದಿತು.

ನಮ್ಮ ನಾಡುನುಡಿಗಳಲ್ಲಿ, ವಿಚಾರದಲ್ಲಿ ಜನರಿಗೆ ಆಸ್ಥೆ ಹೆಚ್ಚುತ್ತಿದೆ. ಅಭಿಮಾನ ಬೆಳೆಯುತ್ತಿದೆಯೆಂದು ಭಾವಿಸಿರುವ ಈ ಕಾಲದಲ್ಲಿ ಇದರ ಮೊದಲ ಮುದ್ರಣದ ಪ್ರತಿಗಳು ತೀರಲು ೧೩ ವರುಷಗಳು ಸಂದುವು! ಇದೇನು ಕಂನಾಡವರ ಜ್ಞಾನಜಿಜ್ಞಾಸೆಯ ದ್ಯೋತಕವೊ, ಒಣಹೆಮ್ಮೆಯ ಸೂಚಕವೊ ಎಂದು ನನ್ನ ಹೊರನಾಡ ಸ್ನೇಹಿತರು ಕೆಲರು ಕೇಳಿದರು. ಹಾಗಲ್ಲ ' ಕುರಿತೋದದೆಯುಂ ಪರಿಣತ ಮತಿಗಳ್ ' ನಮ್ಮ ಜನ, ಎಂದು ಅಂದು ಪುರಾತನರು ಹೇಳಿದ್ದನ್ನು ಹುಸಿಯಾಗಿಸುವ ಅಪೇಕ್ಷೆ ನಮ್ಮ ನಾಡಿಗರಿಗೆ ಇಲ್ಲ ಎಂಬುದು ನನ್ನ ಹೇಳಿಕೆ.

ಹೀಗಿದ್ದರೂ ಇದರ ದ್ವಿತೀಯ ಮುದ್ರಣಕ್ಕೆ ಮುಂದೆ ಬಂದ ಶ್ರೀ. ಘಾಣೇಕರ ಭಾಲಚಂದ್ರರಾಯರ ಸಾಹಸವನ್ನು ಹೊಗಳದೆ ಇರಲಾದೀತೆ ?

ಮುಂಬೈ,
ಅನಂತನ ಹುಣ್ಣಿವೆ ೮-೯-೫೨

ಶಂ. ಬಾ. ಜೋಶಿ.

# ಕನ್ನಡದ ನೆಲೆ

## ೧. ಮೊದಲ ಮಾತು

To understand the present age, therefore, it is necessary to go back to a considerably earlier time.

—*Bertrand Russell.*

ಮನೆಕಟ್ಟಬೇಕೆನ್ನುವವರು ಮೊದಲು ಅದನ್ನು ಕಟ್ಟತಕ್ಕ ನೆಲದಲ್ಲಿ ಪೊಳ್ಳು–ಗಟ್ಟಿಗಳು ಎಲ್ಲೆಲ್ಲಿವೆಯೆಂಬುದನ್ನು ಚೆನ್ನಾಗಿ ಅರಿತವರಾಗಿರಬೇಕು. ಡೊಗರಿದ್ದಲ್ಲಿ ಅದನ್ನು ಅಗಿದುನೋಡಿ ತುಂಬಿಕೊಳ್ಳದೆ ಕಟ್ಟಿದ ಗೋಡೆಗಳು ಕುಸಿದು, ಕಟ್ಟಡವು ನೆಲಕ್ಕುರುಳುವುದು ಕಂಡಿತ. ಮನೆಯಂತೆ ನಾಡು ಕಟ್ಟುವ ವಿಷಯದಲ್ಲಿಯೂ ಈ ಮಾತು ಅಕ್ಷರಶಃ ನಿಜವಿದೆ.

ಆದುದರಿಂದಲೆ ಕನ್ನಡದ ನೆಲೆಯನ್ನು ಅರಿಯದವರಿಂದ ಈ ನಾಡನ್ನು ಕಟ್ಟಲಿಕ್ಕಾಗಲಾರದೆಂದು ಹೇಳಬಹುದಾಗಿದೆ. ಕನ್ನಡದ ಐತಿಹ್ಯವನ್ನು ಅರಿತುಕೊಳ್ಳದೆ ನಡೆದ ಈ ನಾಡಿನ ಏಳಿಗೆಯ ಪ್ರಯತ್ನಗಳು ವಿಶೇಷ ಫಲಕಾರಿಯಾಗಲಾರವು. ನದಿಯ ಉಪಮೆಯಿಂದ ಈ ಮಾತು ಇನ್ನೂ ಸ್ಪಷ್ಟವಾಗಬಹುದು: ಕರ್ಣಾಟಕ-ನದೀಪ್ರವಾಹವು ಯಾವ ಯಾವ ದಿಕ್ಕಿನಿಂದ ಹೇಗೆ ಹರಿದುಬಂದಿದೆ? ಇದರ ಗತಿಯು ರೀತಿ ಯಾವದು? ಆಳವೆಷ್ಟು? ಪ್ರವಾಹದ ವೇಗವೇನು? ಇದಕ್ಕೆ ಬಂದುಸೇರಿದ ನದಿ, ಉಪನದಿಗಳಾವುವು? ಎಂಬಿವೆ ಮೊದಲಾದ ಸಂಗತಿಗಳ ಸ್ಪಷ್ಟಜ್ಞಾನವಿಲ್ಲದೆ,ಎಲ್ಲಿ ಆಣೆಕಟ್ಟು ಕಟ್ಟಿದರೆ ಜನಶಕ್ತಿಯು ನೀರನ್ನು ಸರಿಯಾಗಿ ತಿರುಗಿಸಿಕೊಂಡು ನಾಡಿನ ಬೆಳವಣಿಗೆಯು ಹೆಚ್ಚು ಹೆಚ್ಚಿನ ಕೆಲಸಗಳನ್ನು ಕೈಕೊಳ್ಳಲಿಕ್ಕಾದೀತು ಎಂಬುದು ಗೊತ್ತಾಗಲಾರದು. ನಾಡಿನ ನೆಲೆಯನ್ನರಿಯದೆ ಮಾಡಿದ ದೇಶೋದ್ಧಾರದ ಪರಿಶ್ರಮಗಳು

ಅಷ್ಟು ಯಶಸ್ವಿಯಾಗಲಾರವೆಂಬುದು ನಿಶ್ಚಿತ. ಆದಕಾರಣ ದೇಶದ ಪೂರ್ವ ಇತಿಹಾಸವನ್ನು ದುರ್ಲಕ್ಷಿಸುವುದು ಎಂದೂ ಜಾಣತನವೆನಿಸಲಾರದು.

ನಾಡಿನ ಏಳಿಗೆಗಾಗಿ ಹೆಣಗುವವರಿಗೆ ತಮ್ಮ ಇತಿಹಾಸ, ಸಂಸ್ಕೃತಿಗಳ ಸಾಮಾನ್ಯಜ್ಞಾನವಾದರೂ ಇರಲೇಬೇಕು. ರೋಗಿಗೆ ಔಷಧಕೊಟ್ಟು ಅವನನ್ನು ನಿರೋಗಿಯಾದ ಬಲವಂತನನ್ನು ಮಾಡಬೇಕೆಂದು ಹಂಬಲಿಸುವ ವೈದ್ಯರು (ಡಾಕ್ಟರರು) ಆತನಿಗೆ ಆದ ಬೇನೆಯ ಇತಿಹಾಸವನ್ನೆ ಕಿವಿಯ ಮೇಲೆ ಹಾಕಿಕೊಳ್ಳದೆ ಸುಮ್ಮನೆ ಆ ಸೊಪ್ಪು, ಈ ಬೇರು ತಂದು ಅರೆದರೆದು ಕುಡಿಸುವ ಗಡಿಬಿಡಿಯನ್ನು ನಡೆಸಿದರೆ ಆ ರೋಗಿಯ ಗತಿಯೇನಾಗಬೇಕು !

ಸರಿ; ಬರಿ ಹಿಂದಿನ ಇತಿಹಾಸವನ್ನೆ ಕೆದರುತ್ತ ಕುಳ್ಳಿರುವದು ಹೆಡ್ಡತನವೆನಿಸುವದು. ಆದರೆ ತನ್ನ ನಿಜಸ್ಥಿತಿಯ ಅರಿವನ್ನುಂಟುಮಾಡಿಕೊಡುವ ಇತಿಹಾಸವನ್ನು ದುರ್ಲಕ್ಷಿಸುವುದೂ ಆತ್ಮಘಾತವಾಗದೆ ಇರಲಾರದು. ಈ ಗಳಿಗೆಯಲ್ಲಿ ಉಪಯುಕ್ತವಾದ ಕೆಲಸವೇ ಕೆಲಸ; ಉಳಿದುದೆಲ್ಲವೂ ಅಲ್ಲದ ಕೆಲಸ ಎಂಬ ಕಿರುಗಣ್ಣಿನವರ ಸಂಖ್ಯೆಯು ನಮ್ಮಲ್ಲಿ ಹೆಚ್ಚಾಗುತ್ತಲಿದ್ದುದು ಒಳ್ಳೆಯ ಲಕ್ಷಣವಲ್ಲ. 'ಇದರ ಉಪಯೋಗವೇನು ಈಗ ?' ಎಂದು ಕೇಳಿ ತಟ್ಟನೆ ಉತ್ತರವನ್ನು ಅಪೇಕ್ಷಿಸುವವರು ಕೆಲವರುಂಟು. 'ಈಗ ಈ ಸಂಶೋಧನೆಯಿಂದ ಏನು ಬಡವರ ಹೊಟ್ಟೆಯ ಚಿಂತೆ ತಪ್ಪುವದೆ ?' 'ಸಾಕ್ಷರತಾ ಪ್ರಸಾರವಾದಂತಾಯಿತೆ ?' ಎಂದು ಮುಂತಾಗಿ ಪ್ರಶ್ನಿಸುವವರುಂಟು. ಈ ಪ್ರಶ್ನೆಗಳು ಕೇಳುವವರ ದೇಶಹಿತಬುದ್ಧಿಯ ನಿದರ್ಶಕಗಳಾಗಿದ್ದರೂ ಅವರ ಕಿರುನೋಟವನ್ನು ಹೊರಗೆಡುಹುತ್ತಲಿವೆ. ನಮ್ಮ ನಾಡಿನ ಆರ್ಥಿಕ ಸಮಸ್ಯೆಯನ್ನು ಬಿಡಿಸುವುದು, ಜನಸಾಮಾನ್ಯರನ್ನೆಲ್ಲ ಅಕ್ಷರಸ್ಥರನ್ನಾಗಿ ಮಾಡುವುದು ಇವೆಲ್ಲವೂ ಅತ್ಯಂತ ಸ್ತುತ್ಯಕಾರ್ಯಗಳಾಗಿವೆ. ನಮ್ಮ ನಾಡಿನ ಏಳ್ಗಿಗೆ ಈ ಕಾರ್ಯಗಳು ನಡೆಯಲೇಬೇಕು. ಆದರೆ ಜನರಿಗೆ ಬರಿ ಊಟದ ಚಿಂತೆ ತಪ್ಪಿ ಓದುಬರೆಹಗಳು ಬಂದರೆ ಆಗಲಿಲ್ಲ. ತಿಳುವಳಿಕೆ ಬರಬೇಕು; ಮೂಢಭಾವನೆಗಳು ತೊಲಗಬೇಕು; ದೃಷ್ಟಿಯು ವಿಶಾಲವಾಗಬೇಕು. ಜನರಿಗೆ 'ಸುಧಾರಿಸಿರಿ, ಮೇಲೆ ಏಳಿರಿ' ಎಂದು ಆವೇಶದಿಂದ ಉಪನ್ಯಾಸ ಕೊಡುತ್ತ ಅಲೆವ ನೂರಾರು ಗಡಿಬಿಡಿ ಗಂಗರಿಂದ ಆಗದಷ್ಟು ಮತಪರಿವರ್ತನದಕಾರ್ಯವು, ಪ್ರಶಾಂತವಾದ ಏಕಾಂತದಲ್ಲಿ, ಆಳವಾದ ಸಂಶೋಧನೆಯ ಕೊನೆಯಲ್ಲಿ ಸ್ಫುರಿಸಿದ ಸತ್ಯದ

ಜ್ಯೋತಿಯ ಒಂದಂಶವನ್ನು ಕಾಣಲು ಸಮರ್ಥವಾದ ಒಂದು ವ್ಯಕ್ತಿಯಿಂದಲೂ ಸಹಜವಾಗಿ ಜರುಗುವುದು. ಡಾರ್ವಿನನ ವಿಕಾಸವಾದವು, ಕಾರ್ಲಮಾರ್ಕ್ಸನ ಸಮಾಜ ಸಮತಾವಾದವು, ಫ್ರಾಯಿಡನ ಲಿಂಗಮಹಾತ್ಮ್ಯವು ಜಗತ್ತಿನಲ್ಲಿ ಮಾಡಿರುವ, ಮತ್ತು ಮಾಡುತ್ತಲಿರುವ ಕ್ರಾಂತಿಯು ಹಿಂದೆ ಆಗಿಹೋದ ಎಲ್ಲ ರಾಜ್ಯಕ್ರಾಂತಿ, ಸಾಮಾಜಿಕ ಕ್ರಾಂತಿಗಳನ್ನೂ ಮೀರಿದೆ. ಇಜಿಪ್ತ, ಬಾಬಿಲೋನ, ಊರ್, ಮೊಹೆಂಜೋದಾರೊಗಳಲ್ಲಿ ದೊರೆತ ಪ್ರಾಚೀನ ಅವಶೇಷಗಳು ಜಗತ್ತಿನ ವಿಚಾರಪ್ರವಾಹವನ್ನೆ ಬದಲಿಸುತ್ತಲಿವೆ. ಆದರೆ ಇಂದಿನ ಕೆಲಸಗಳ ಬರಿ ಜಂಜಾಲದಲ್ಲಿ ಸಿಕ್ಕುಬಿದ್ದ ಮುಂಗಾಣದವರಾದ ಅದೂರದರ್ಶಿಗಳು ಆವುದೆ ಬಗೆಯ ಶುದ್ಧ ಜ್ಞಾನೋಪಾಸನೆಯನ್ನು ತಿರಸ್ಕರಿಸುವದುಂಟು. ಇಂತಹರು, ಕೇವಲ ಉಪಯುಕ್ತತಾವಾದಿಗಳು (Utilitarians) ಎಂದೆನಿಸುವ ಯುರೋಪ ಮತ್ತು ಅಮೇರಿಕೆಯವರು ಸಂಶೋಧನಕ್ಕೆ ಕೊಡುತ್ತಿರುವ ಮನ್ನಣೆ-ಮಹತ್ವಗಳನ್ನು ನೋಡಿಕೊಂಡಾದರೂ ತಮ್ಮ ಬುದ್ಧಿಯನ್ನು ತಿದ್ದಿಕೊಳ್ಳುವುದು ಅವಶ್ಯವಿದೆ.

ರಾಷ್ಟ್ರ-ನಿರ್ಮಾಣ-ಕಾರ್ಯದಲ್ಲಿ ತೊಡಗಿದ ಕಾರ್ಯಕರ್ತರಿಗೆ ಭವಿಷ್ಯದ ಕಗ್ಗತ್ತಲೆಯಲ್ಲಿ ಆಗಾಗ ದಾರಿತೋರುವ ತಿಳಿಬೆಳಕು ದೊರೆಯುತ್ತಿರುವದು ಒಂದೊಂದು ಜ್ಞಾನಶಾಖೆಯ ತಪಸ್ವಿಗಳಿಂದಲೇ. ಆದುದರಿಂದ ಜ್ಞಾನಸಾಗರದ ನೆಲೆಯನ್ನು ಕಂಡುಹಿಡಿಯುವುದಕ್ಕಾಗಿ ನಡೆದ ಹಾಗೂ ನಡೆಯುತ್ತಲಿರುವ ಪ್ರತಿಯೊಂದು ಬಗೆಯ ಸಂಶೋಧನ ಕಾರ್ಯವೂ ಉಪಯುಕ್ತವೆಂದೇ ಹೇಳಬಹುದು.

'ತನ್ನ ತಾನು ಅರಿತೊಡೆ ತನ್ನ ಅರಿವೆ ಗುರು' ಎಂಬುದೊಂದು ಅನುಭಾವದ ವಚನ. ಸ್ವ-ಸ್ವರೂಪದ ಜ್ಞಾನವಾದವನಿಗೆ ಅವನ ಏಳಿಗೆಗಾಗಿ ಹೊರಗಿನ ಗುರುವಿನ ಅವಶ್ಯಕತೆಯಿಲ್ಲ. ವೇದಾಂತವು ವ್ಯಕ್ತಿಯ ಆತ್ಮ-ದರ್ಶನವನ್ನು ಮಾಡಿಕೊಡುವದಾದರೆ ಇತಿಹಾಸವು ರಾಷ್ಟ್ರ-ಪುರುಷನ ನಿಜಸ್ವರೂಪವನ್ನು ಕಣ್ಣೆದುರು ನಿಲ್ಲಿಸಬಲ್ಲುದು. ನಿಜವಾದ ಇತಿಹಾಸವನ್ನು ದುರ್ಲಕ್ಷಿಸಿದುದರಿಂದಲೆ ನಾವಿಂದು ಈ ಕೀಳುಸ್ಥಿತಿಗೆ ಬಂದಿದ್ದೇವೆ.

ಅನಾದಿ, ಅನಂತ ಅವ್ಯಕ್ತವಾಗಿರುವ ವಿಶ್ವಚಾಲಕ ಶಕ್ತಿಯ ಸಾಕಾರ ಸಗುಣಮೂರ್ತಿಯ ಸಮ್ಯಗ್ದರ್ಶನವನ್ನು ಮಾಡಿಸುವ ಸಾಮರ್ಥ್ಯವು

ಇತಿಹಾಸದಲ್ಲಿದೆ. ಜಗದ್ರಂಗದ ಮೇಲೆ ಬೇರೆ ಬೇರೆ ಕಾಲ-ಪರಿಸ್ಥಿತಿಗಳ ಸನ್ನಿವೇಶಗಳಲ್ಲಿ ವಿಶ್ವಶಕ್ತಿಯು ನಡೆಯಿಸಿದ ಬಗೆಬಗೆಯ ಲೀಲಾವಿಲಾಸಗಳೆ ಇತಿಹಾಸ. ಆ ನಾಟ್ಯಲೀಲೆಯ ಗುಟ್ಟು ಗೊತ್ತಾಗಿ ಆ ಆನಂದಾನುಭಾವದಲ್ಲಿ ನಾವೂ ಪಾಲಗಾರರಾಗಬೇಕಿದ್ದರೆ ಇತಿಹಾಸದ ಸರಿಯಾದ ಅಭ್ಯಾಸವು ಒಂದು ಮಹತ್ವದ ಸಾಧನವಾಗಿದೆ. ಇತಿಹಾಸವು ಮನುಷ್ಯನ ದೃಷ್ಟಿಯನ್ನು ವಿಶಾಲಮಾಡಿಸಬಲ್ಲದು; ಇತಿಹಾಸದ ಅರಿವಿಲ್ಲದ 'ಕುನ್ನಿ ಮಾನವರು' ತಮ್ಮಿಂದ ಹೊರಗೆ ಏನಾದರೂ ಜಗತ್ತಿದೆಯೆಂಬುದನ್ನೆ ಅರಿಯರು. ಬೆಕ್ಕಿನಂತೆ ಕಣ್ಣು ಮುಚ್ಚಿ ಹಾಲು ಕುಡಿಯಬಂದರೂ ಕಾಲಪುರುಷನು ತಲೆಯ ಮೇಲೆ ಏಟು ಹಾಕದೆ ಬಿಡನು. ಸುತ್ತಲಿನ ಜಾಗತಿಕ ಪರಿಸ್ಥಿತಿಯ ಆಗು-ಹೋಗುಗಳನ್ನು ನಿರೀಕ್ಷಿಸದೆ ತಮ್ಮ ಉಬ್ಬಿನಲ್ಲಿ, ತಮ್ಮ ಮಬ್ಬಿನಲ್ಲಿ ಮೈಮರೆತವರಾದುದರಿಂದಲೆ ಹಿಂದೂ ದೇಶದವರು ಹಿಂದೆ ಪೆಟ್ಟು ತಿಂದುದುಂಟು. ಇಂದು ಮತ್ತೆ ಅದೇ ಬಗೆಯ ತಪ್ಪನ್ನು ಮಾಡಿ ಕೇಡಿಗೆ ಈಡಾಗುವದು ಜಾಣ್ಮೆಯಾದೀತೇ ?

ಸತ್ಯವೇ ದೇವರು. ಸತ್ಯದ ಸಾಕ್ಷಾತ್ಕಾರವಾಗುವುದಕ್ಕೆ ಇತಿಹಾಸ-ಶಾಸ್ತ್ರವೂ ಒಂದು ದಿವ್ಯವಾದ ಕೈದೀಪ. ನಮ್ಮ ಇತಿಹಾಸದ ವಿದ್ಯುದ್ದೀಪವು ನಮ್ಮ ನಾಡಿನಲ್ಲಿ ತೊಳಗಿ ಬೆಳಗುತ್ತಿಲ್ಲವಾದುದರಿಂದಲೆ ಜಾತಿ, ಕುಲ, ಧರ್ಮ, ಮತ, ಪಂಥಗಳ ದುರಭಿಮಾನದ ಕಗ್ಗತ್ತಲೆಯಲ್ಲಿ ನಮ್ಮ ಜನಗಳು ಮುಗ್ಗರಿಸುತ್ತಲಿದ್ದುದು ಕಂಡುಬರುತ್ತಲಿದೆ. ಧರ್ಮದ ಹೆಸರಿನಲ್ಲಿ ಅಧರ್ಮವು ನಡೆದಿದೆ. ನಮ್ಮ ನಾಡಿನ ಏಳಿಗೆಗೆ ಅಡ್ಡಬರುತ್ತಲಿರುವ ಜಾತಿ,ಕುಲ,ಧರ್ಮ, ಮತ, ಪಂಥಗಳ ದುರಭಿಮಾನಗಳನ್ನು ತೊಡೆದುಹಾಕುವುದಕ್ಕೆ ಸತ್ಯ-ಇತಿಹಾಸದಂಥ ಅಮೋಘವಾದ ಸಾಧನವು ಬೇರೊಂದಿಲ್ಲ. ನಮ್ಮ ನಾಡಿನಲ್ಲಿ ಹಿಂದಕ್ಕೆ ಆದ ಅನುಲೋಮ, ಪ್ರತಿಲೋಮ ವಿವಾಹಗಳ ಇತಿಹಾಸವು ಬೆಳಕಿಗೆ ಬಂದರೆ ನಮ್ಮ ಜನಗಳ ಜಾತಿಯ ಹೆಮ್ಮೆ, ಕುಲದ ಬಿಂಕಗಳೆಲ್ಲವೂ ಸಡಿಲದೆ ಇರಲಾರವು.ನಮ್ಮ ದೇವತೆಗಳು ಒಡಮೂಡಿದುದು,ಮಾಯವಾದುದು ಇವುಗಳ ಗುಟ್ಟು ಗೊತ್ತಾದರೆ ಧರ್ಮ–ಧರ್ಮಗಳ ಎಷ್ಟೋ ಹೊಡೆದಾಟಗಳು ಕಡಿಮೆಯಾಗುವುದು ನಿಶ್ಚಿತ. 'ಶಿವಸರ್ವೋತ್ತಮ' ಅಥವಾ 'ವಿಷ್ಣು ಸರ್ವೋತ್ತಮ' ನೆಂದು ಕೂಗಿ, ಕಿರಿಚಿ ಕಾದಾಡುವ ಹುಂಬರ ಮೈತುಂಬಿದ

ಗಾಳಿಯನ್ನು ಬಿಡಿಸುವುದಕ್ಕೆ ಇತಿಹಾಸವೊಂದೇ ಉತ್ತಮವಾದ ಉಪಾಯವು. ನಿಜವಾಗಿ ನೋಡಿದರೆ ವೇದದಲ್ಲಿ ಇಂದ್ರನಿಗೆ ಇರುವ ಇಂಬು ಮತ್ತಾರಿಗೂ ಇಲ್ಲ. ವೈದಿಕ ಧರ್ಮಾಭಿಮಾನಿಗಳೆಂದು ಹೆಮ್ಮೆ ಬಡುವವರು ಇಂದ್ರನನ್ನು ಆರಾಧಿಸಬೇಕು. ಇಂದ್ರನಿಗೇ ಹಿರಿಯಪಟ್ಟವನ್ನು ಕೊಡಬೇಕು. ವಿಷ್ಣುವು ಉಪೇಂದ್ರನು! ಉಪ-ಇಂದ್ರನು ಇಂದ್ರನಿಗೆ ಸಮಾನನೆಂತು? ಶಿವ(ರುದ್ರ)ನು ಆರ್ಯರ ದೇವತೆಯೇ? ಎಂಬುದು ಮೊದಲು ಸಂದೇಹಾಸ್ಪದವಾಗಿದೆ.* ಆದುದರಿಂದ 'ಶಿವಸರ್ವೋತ್ತಮ', 'ವಿಷ್ಣುಸರ್ವೋತ್ತಮ' ವೆಂಬ ಮಾತು ಅವೈದಿಕ. ಲಿಂಗಪೂಜೆಯು ವೇದಕಾಲದ ಆರ್ಯರಿಗೆ ಸಮ್ಮತ ವಿರಲಿಲ್ಲ. ಇಷ್ಟೇ ಅಲ್ಲ' ಲಿಂಗಪೂಜೆಯು ದ್ರಾವಿಡರದೂ ಅಲ್ಲ, 'ಲಿಂಗ' ವೆಂಬುದು ದ್ರಾವಿಡರಿಗಿಂತಲೂ ಮೊದಲು ಹಿಂದೂದೇಶದಲ್ಲಿ ನೆಲಸಿದ್ದ ಕೋಲ (Austro-Asiatic) ಜನಾಂಗದ ಭಾಷಾವರ್ಗಕ್ಕೆ ಸೇರಿದ ಶಬ್ದವೆಂದು ಪ್ರಿಲಸ್ಕಿಯವರು ಪ್ರತಿಪಾದಿಸುತ್ತಾರೆ.* ನಮ್ಮವರು ಲಿಂಗ ಮತ್ತು ಯೋನಿ ಪೂಜೆಗಳಿಗೆ ಬಹಳ ಉದಾತ್ತ ಸ್ವರೂಪವನ್ನು ಕೊಟ್ಟು ಅದರ ವಿಶಿಷ್ಟ ತತ್ವ ಜ್ಞಾನವನ್ನೇ ನಿರ್ಮಿಸಿದ್ದುದು ನಿಜ. ಮೂಲದಲ್ಲಿ ರುದ್ರ ಮತ್ತು ಲಿಂಗಗಳು ಭಿನ್ನವಾಗಿದ್ದರೂ † ಇವೆರಡನ್ನೂ ಒಂದುಗೂಡಿಸಿ ಅದ್ವೈತಭಾವದಿಂದ ಭಜಿಸುವುದು ಸೋಜಿಗವನ್ನುಂಟುಮಾಡುವಂತಹದಾಗಿದೆ. ಇಂತಿವೆಲ್ಲ ಮಾತುಗಳ ಮನವರಿಕೆಯಾದರೆ ನಮ್ಮ ಧರ್ಮ, ದೇವತೆಗಳ ಬಗೆಗೆ ಇರುವ ದುರಭಿಮಾನವು ಎಷ್ಟೋ ಮಟ್ಟಿಗೆ ಕಡಿಮೆಯಾಗುವದರಲ್ಲಿ ಸಂದೇಹವಿಲ್ಲ. ಧರ್ಮ, ಸಂಸ್ಕೃತಿಗಳ ಬಾಹ್ಯಸ್ವರೂಪದಲ್ಲಿ ಕಾಲಕಾಲಕ್ಕೆ ಮಾರ್ಪಾಟಗಳಾ-ಗುತ್ತಿರುತ್ತವೆಂಬ ಅರಿವು ಸ್ವಲ್ಪ ತಲೆದೋರಿದರೂ ಸಾಕು; ಅದರಿಂದ ಜಾತಿ-ಮತಗಳ ಜಗಳಗಳೊಳಗಿನ ತೀವ್ರತೆಯೂ ತೀಕ್ಷ್ಣತೆಯೂ ಹೋಗಿಬಿಡುವುದು.

ಆರ್ಯರು—ಅನಾರ್ಯರು (ದಸ್ಯುಗಳು, ರಾಕ್ಷಸರು)ಎಂಬ ತಂಡಗಳ ಕಾಲವೊಂದು ಹಿಂದಾಯ್ತು. ವೈದಿಕರು—ಅವೈದಿಕರು ( ಬೌದ್ಧ, ಜೈನ ) ಎಂಬ ಮತಗಳ ಯುಗವು ಉರುಳಿಹೋಯ್ತು; ಹಿಂದೂ—ಮುಸಲ್ಮಾನವೆಂಬ ಧರ್ಮಕಲಹಗಳ ಅವಧಿಯೂ ಮುಗಿಯುತ್ತಬಂತು. ಇದೀಗ ದೇಶಾಭಿಮಾನದ

* ಶಿರ. ಪುಟ ೧೩–೨೨.

* PAPD. p. 8.

† ಶಿರ. ಪುಟ ೨೮–೩೭.

ಮೆಟ್ಟಿಲನ್ನೇರಿ ಮಾನವ ಕುಟುಂಬದ ಐಕ್ಯದ ಹಿರಿಗುರಿಯ ಕಡೆಗೆ ವೇಗದಿಂದ ಸಾಗಿದ್ದೇವೆ. ಯುಗ-ಧರ್ಮವನ್ನರಿತುಕೊಂಡು ಕಾಲಕ್ಕೆ ತಕ್ಕಂತೆ ತಮ್ಮನ್ನು ಮಾರ್ಪಡಿಸಿಕೊಳ್ಳುವುದರಲ್ಲಿಯೆ ಜಾಣ್ಮೆಯಿದೆ. ಮೊದಲು ನಾವು ಯಾರೆ ಇರಲಿ, ಎಲ್ಲಿಯವರೆ ಇರಲಿ, ನಾವು ಈಗ ನೆಲೆಸಿರುವ ನಾಡು ನಮ್ಮದು. ಅದರೊಡನೆ ಸಮರಸವಾಗಿ ಆ ನಾಡಿನ ಏಳ್ಗೆಗಾಗಿ, ಆನಾಡಿನ ಮುಖಾಂತರ-ವಾಗಿ ಮಾನವಕೋಟಿಯ ಕಲ್ಯಾಣಕ್ಕಾಗಿ ದುಡಿಯುವದರಲ್ಲಿಯೆ ನಮ್ಮ ಮೇಲ್ಮೆಯೂ ಇದೆ. ಇದುವೆ ಇಂದಿನ ಧರ್ಮ. ಇದಕ್ಕೆ ವಿಪರೀತವಾಗಿ ನಡೆವುದೆ ಅಧರ್ಮ.

ಕರ್ಣಾಟಕದಲ್ಲಿ ನೆಲೆಸಿರುವ ಹಲವು ಪಂಗಡಗಳಲ್ಲಿ ಈ ಭಾವನೆಯು ಸಾಕಷ್ಟು ಜಾಜ್ವಲ್ಯವಾಗಿಲ್ಲವಾದುದರಿಂದಲೇ ನಾವು ಹಿಂದುಳಿದಿರುವುದು. ಹಿಂದೂ ದೇಶದ ಉಳಿದ ಪ್ರಾಂತಗಳಲ್ಲಿ ಕಾಲೂರಿ ನಿಂತ ಜನಾಂಗಗಳು ಆಯಾ ನಾಡಿನೊಂದಿಗೆ ಒಂದುಗೂಡಿ, ಆ ನಾಡಿನ ಅಭಿಮಾನ ತಾಳಿ ಕೆಲಸ ಮಾಡುತ್ತಿರಲು ಕರ್ಣಾಟಕದೊಳಗಿನ ಜನಗಳು ಮಾತ್ರ ಇದರೊಡನೆ ಸಮರಸವಾಗುವದಕ್ಕೆ ಇನ್ನೂ ಮೀನ-ಮೇಷಮಾಡುತ್ತಿದ್ದುದರಕಾರಣವೇನು? ಇದರ ಕಾರಣ ಮೀಮಾಂಸೆಯನ್ನು ಅರಿತುಕೊಂಡು ಜನಗಳಲ್ಲಿ ಸರಿಯಾದ ತಿಳುವಳಿಕೆಯನ್ನುಂಟುಮಾಡುವ ವರೆಗೆ ಕನ್ನಡದ ಮುನ್ನಡೆಯು ಹೀಗೆಯೆ ಮುಗ್ಗರಿಸುತ್ತ ಸಾಗತಕ್ಕುದೇ ಸರಿ. ಕನ್ನಡವನ್ನು ಮರಳಿ ಕಟ್ಟಬೇಕೆನ್ನು-ವವರು ಮಾಡಬೇಕಾದ ಹಿರಿಗೆಲಸಗಳಲ್ಲಿ ಇದೊಂದು.

ಕನ್ನಡದೊಡನೆ ಹೊಂದಿಕೊಳ್ಳಲು ಅಸಿಮಿಸಿಗೊಳ್ಳುತ್ತಿದ್ದವರು ಅರೆಯ ಮಾತಿನವರು ಮಾತ್ರ, ಎಂದು ಭಾವಿಸುವುದು ಸರಿಯಾಗಲಾರದು; ಅಥವಾ ಕೇವಲ ಬ್ರಾಹ್ಮಣರು ಎಂದು ಹೇಳುವುದೂ ತಪ್ಪು. ಒಂದು ಕಾಲದಲ್ಲಿ 'ತಾವು ಕನ್ನಡಿಗರು,' ಎಂದು ಹೇಳಿಕೊಳ್ಳಲು ಸಿದ್ಧರಿದ್ದವರು ದೊರೆಯುವದೇ ಅಪರೂಪವಾಗಿದ್ದಿತು. ಈ ಮಾತಿನ ವಿಶೇಷ ವಿಸ್ತಾರವು ಇಲ್ಲಿ ಅಪ್ರಸ್ತುತ. ಒಂದು ಕಾಲವು ಹಾಗಿದ್ದರೂ ಇಂದು 'ನಾವೇ ಕನ್ನಡಿಗರು,' 'ನಾವೂ ಕನ್ನಡಿಗರು' ಎಂಬೀ ಬಗೆಯ ಸೆಣಸಾಟವು ಸ್ವಲ್ಪ ಆರಂಭವಾಗುತ್ತಲಿದೆ. ಆದರೆ, ಕನ್ನಡ ಜನಾಂಗದ ಇತಿಹಾಸವು ಸರಿಯಾಗಿ ಗೊತ್ತಾಗದೆ ಇದ್ದರೆ ಈ ತಿಕ್ಕಾಟಕ್ಕೆ ವಿಪರೀತ ಸ್ವರೂಪವು ಪ್ರಾಪ್ತವಾಗುವ ಹೆದರಿಕೆಯುಂಟು.

ಆದುದರಿಂದ ಕನ್ನಡಿಗನೆಂಬ ಅಭಿಮಾನವಿರುವ ಪ್ರತಿಯೊಬ್ಬನಿಗೂ ಕನ್ನಡದ ಸಾಂಸ್ಕೃತಿಕ ಪರಿವರ್ತನಗಳ ಐತಿಹ್ಯವು ಚೆನ್ನಾಗಿ ಗೊತ್ತಿರುವುದು ಅತ್ಯವಶ್ಯವು. ಕನ್ನಡದ ಸಾಂಸ್ಕೃತಿಕ ಪರಿವರ್ತನಗಳ ಐತಿಹ್ಯವನ್ನು ಅರಿತು ಕೊಳ್ಳಲು ಕನ್ನಡದ ನೆಲೆಯನ್ನು ಕಂಡುಕೊಳ್ಳುವುದೇ ಮಿಗಿಲಾದ ಹಾದಿ. ಕನ್ನಡದ ನೆಲೆಯನ್ನು ಅರಿತು ಕೊಳ್ಳಲು ಬೇರೆ ಬೇರೆ ದಿಕ್ಕಿನಿಂದ ಹಲವು ಪ್ರಯತ್ನಗಳು ನಡೆಯುವುದು ಅವಶ್ಯಕವು. ಅಂತಹ ಒಂದು ಅಲ್ಪ ಪ್ರಯತ್ನದಲ್ಲಿ ಕಂಡುಬಂದ ಕೆಲ ಸಂಗತಿಗಳನ್ನು ಮುಂದಿನ ಪ್ರಕರಣಗಳಲ್ಲಿ ವಿವರಿಸಲಾಗಿದೆ.

---

# ೨. ‘ಕನ್ನಡಿಗ’ ಎಂಬ ಮಾತು ತಲೆಯೆತ್ತಿದ ಪರಿಸ್ಥಿತಿ

ಮನುಷ್ಯನು ತನ್ನ ಹೆಸರನ್ನು ತಾನೇ ಇಟ್ಟುಕೊಳ್ಳುವ ಅಥವಾ ಹೇಳಿಕೊಳ್ಳುವ ಪರಿಪಾಠವು ಕಡಿಮೆ. ತನ್ನ ಹೆಸರನ್ನು ಎತ್ತಿ ಹೇಳಬೇಕಾಗುವ ಹೊತ್ತು ಬರುವ ವರೆಗೂ ಸಾಮಾನ್ಯವಾಗಿ ಯಾವನೂ ತನ್ನ ಹೆಸರನ್ನು ಉಸಿರುವದಿಲ್ಲ. ತಾನೂ ಹೊರನಾಡಿಗೆ ಹೋದಾಗ ಅಥವಾ ಹೆರವರು ತಮ್ಮಲ್ಲಿ ಬಂದಾಗ ಇಲ್ಲವೆ ಯಾರೊಬ್ಬರಿಂದ ತಾನು ಬೇರೆ-ಯೆಂಬುದನ್ನು ತೋರಿಸಿಕೊಂಬಾಗ ತನ್ನ ಹೆಸರನ್ನು ಒಡನುಡಿಯಬೇಕಾಗುತ್ತದೆ.

ಇನ್ನೂ ಒಂದಿಷ್ಟು ಬಿಚ್ಚಿ ಹೇಳಬಹುದಾದರೆ, ಹೆಸರಿಡುವವರು ಹೆರವರು. ತನಗೆ ತಾನೆ ಹೆಸರಿಟ್ಟುಕೊಳ್ಳುವಾಗಲು ಕೂಡ ಆ ಮನುಷ್ಯನು ಒಂದರಗಳಿಗೆ ತನ್ನಿಂದ ಭಿನ್ನನಾಗಬೇಕಾಗುತ್ತದೆ. ತನ್ನಿಂದ ತಾನು ಬೇರೆಯಾಗಲು ಬಾರದವನು ತನಗೆ ತಾನೇ ಹೆಸರಿಟ್ಟುಕೊಳ್ಳಲಾರನು. ತಾನೇ ತಾನಾಗಿರು-ವಾಗ ಯಾರು ಯಾರಿಗೆ ಹೆಸರಿಡಬೇಕು? ಆದುದರಿಂದಲೆ ಹೆಸರು ಬರುವುದು ಹೆರವರಿಂದ; ಹೆರವರ ಕಾರಣದಿಂದ.

ಕರ್ಣಾಟಕದ ಹೆಸರಿನ ಪ್ರಾಚೀನತಮ ಉಲ್ಲೇಖವೆಂದರೆ ಮಹಾಭಾರತದೊಳಗಿನದೆ. ಈಗಿನ ಮಹಾಭಾರತದ ರಚನಾಕಾಲವು ಕ್ರಿ. ಶ. ಕ್ಕೆ ಮೊದಲು ೨–೩ನೆಯ ಶತಮಾನವೆಂದು ವಿದ್ವಾಂಸರ ಮತವಿದೆ. * ಈ ಮಹಾಭಾರತದ ಮೂಲಗ್ರಂಥವೊಂದು ಬೇರೆಯಿದ್ದಿತೆಂದೂ ಅದು ಸಣ್ಣದಿದ್ದು ಈಗಿನ ಸ್ವರೂಪದಲ್ಲಿ ಮುಂದೆ ರಚಿಸಲ್ಪಟ್ಟಿತೆಂದೂ ಬಲ್ಲಿದರ ಅಭಿಪ್ರಾಯವಿದೆ.

---

* ಚಿ. ವಿ. ವೈದ್ಯ : ಶ್ರೀಮನ್ಮಹಾಭಾರತ, ಉಪಸಂಹಾರ ಪು. ೩೩, ೩೭, ೭೪, ಲೋಕಮಾನ್ಯ ತಿಲಕರ ಅಭಿಪ್ರಾಯ ಗೀತಾರಹಸ್ಯ ಪರಿಶಿಷ್ಟದಲ್ಲಿ, ಕ್ರಿಸ್ತಪೂರ್ವ ೩೨೦—೨೦೦.

ಈಗ ಪ್ರಚಾರದಲ್ಲಿರುವ ಮಹಾಭಾರತದ ಬೇರೆ ಬೇರೆ ಪ್ರತಿಗಳಲ್ಲಿ ಒಂದರಿಂದೊಂದು ಭಿನ್ನವಾದ ಎಷ್ಟೋ ಪಾಠಾಂತರಗಳಿದ್ದರೂ 'ಕರ್ಣಾಟಕ'ದ ಹೆಸರಿಲ್ಲದ ಪ್ರತಿಯೇ ಇಲ್ಲ. ಆದುದರಿಂದ ಕರ್ಣಾಟಕವು, ಕ್ರಿಸ್ತಶಕದ ಮುಂದೆ ೨-೩ ಶತಮಾನದಲ್ಲಿ ಬರೆಯಲ್ಪಟ್ಟ ಈಗ ದೊರೆವ ಮಹಾಭಾರತದ ರಚನಾಕಾಲದಲ್ಲಂತೂ ಸರಿಯೆ, ಅದಕ್ಕೂ ಮೊದಲಿನ ಮೂಲಭಾರತವು ಆದ ಕಾಲದಲ್ಲಿಯೇ ಅಸ್ತಿತ್ವದಲ್ಲಿದ್ದಿತೆಂದು ಊಹಿಸಬಹುದಾಗಿದೆ. ಅದು ಹೇಗಿದ್ದರೂ ಕ್ರಿ. ಶ. ದ ಮೊದಲು ೨೦೦-೩೦೦ ರ ಸುಮಾರಿಗೆ ಕರ್ಣಾಟಕವು ತಲೆಯೆತ್ತಿಕೊಂಡಿತ್ತೆಂಬುದನ್ನು ಅಲ್ಲಗಳೆಯುವುದು ಯಾರಿಂದಲೂ ಸಾಧ್ಯವಿಲ್ಲ.

ಕ್ರಿ. ಶ. ೨ನೆಯ ಶತಮಾನದ ಸುಮಾರಿಗೆ ಬರೆಯಲ್ಪಟ್ಟದೆಂದು ಹೇಳುವ ಮೃಚ್ಛಕಟಿಕ ನಾಟಕದಲ್ಲಿ ಕರ್ಣಾಟಕರ ಕಲಹದ ಒಂದು ವಿಶಿಷ್ಟ ರೀತಿಯ ಉಲ್ಲೇಖವು ಬಂದಿದೆ. ಇದು ನಿಜವಿದ್ದರೆ, ಕ್ರಿಸ್ತಶಕದ ಆದಿಭಾಗದಲ್ಲಿ ಕರ್ಣಾಟಕರ ಗುಣ-ಸ್ವಭಾವಾದಿಗಳ ವಿಶೇಷ ಪರಿಚಯವು ಭರತಖಂಡದ ಎಲ್ಲ ಭಾಗದವರಿಗೂ ಆಗಿದ್ದಿತೆಂದು ಕಂಡುಬರುತ್ತದೆ.

ಇದೇ ಸುಮಾರಿಗೆ ಬರೆಯಲ್ಪಟ್ಟ ಒಂದು ಗ್ರೀಕ ನಗೆಯಾಟದಲ್ಲಿರುವ ಕನ್ನಡ ಮಾತುಗಳ ವಿಚಾರವೂ ಬಹಳ ಮಹತ್ವದ್ದಾಗಿದೆ. ಈ ಮಾತುಗಳು ಕನ್ನಡವೆಂದು ಡಾ. ಹಲ್ಟ, ಡಾ. ಶಾಮಾಶಾಸ್ತ್ರಿ, ಶ್ರೀ ಆರ್. ನರಸಿಂಹಾಚಾರ್ಯ ಶ್ರೀ. ಗೋವಿಂದ ಪೈ ಮೊದಲಾದ ವಿದ್ವಾಂಸರು ನಿರ್ಧರಿಸಿದ್ದಾರೆ. ಇಜಿಪ್ತಿನಲ್ಲಿ ದೊರೆತ ಗ್ರೀಕ ನಾಟಕದಲ್ಲಿ ಕನ್ನಡ ಮಾತುಗಳು ಬಂದುದನ್ನು ನೋಡಿದರೆ ಕ್ರಿ. ಶ. ೨ನೆಯ ಶತಕದ ಸುಮಾರಿಗೆ ಕನ್ನಡರಿಗೂ ಗ್ರೀಕರಿಗೂ ಬಳಕೆಯಿದ್ದಿತೆಂದು ವ್ಯಕ್ತವಾಗುತ್ತಿದೆ. ಚಂದ್ರವಳ್ಳಿಯ ಅಗೆತದಲ್ಲಿ ಶ್ರೀ ಆರ್. ನರಸಿಂಹಾಚಾರ್ಯರಿಗೆ ದೊರೆತ ರೋಮನ್ ನಾಣ್ಯಗಳಿಂದ ಪ್ರಾಚೀನ ಕಾಲಕ್ಕೆ ಗ್ರೀಕ ರೋಮನರೊಡನೆ ಕರ್ಣಾಟಕರ ವ್ಯಾಪಾರ ವ್ಯವಹಾರಗಳು ನಡೆಯುತ್ತಿದ್ದುದು ಬೆಳಕಿಗೆ ಬಂದಿದೆ.* ಕ್ರಿಸ್ತಶಕದ ಮೊದಲು ಒಂದೆರಡು ಶತಮಾನಗಳಿಂದ ಕ್ರಿ. ಶ. ದ ೨-೩ನೆಯ ಶತಮಾನದ ವರೆಗೆ ಶಾಣೆ, ಚೌಲ

* MAR. 1908

ಈ ಭಾಗದಪಶ್ಚಿಮಕರಾವಳಿಯಲ್ಲಿ ಗ್ರೀಕರು ವ್ಯಾಪಾರಕ್ಕಾಗಿ ನೆಲಸಿದ್ದಂದರೊ ಕಂಡುಬಂದಿದೆ.†

ಇಂತಿವೆಲ್ಲ ಕಾರಣಗಳಿಂದ ಕ್ರಿಸ್ತಿಶಕಕ್ಕೆ ಮೊದಲಿನಿಂದಲೂ-ಕೊನೆಗೆ ಕ್ರಿಸ್ತಿಶಕದ ಆರಂಭಕಾಲದಲ್ಲಂತು ನಿಶ್ಚಿತವಾಗಿ ಕರ್ಣಾಟಕವು ಸುಪ್ರಸಿದ್ಧವಾಗಿ ಇದ್ದಿತೆಂಬಲ್ಲಿ ಸಂದೇಹವೆ ಇಲ್ಲ.

ಹೀಗಿದ್ದರೂ ಕರ್ಣಾಟಕದ ಅಸ್ತಿತ್ವದ ಬಗ್ಗೆ ಸಂದೇಹಪಟ್ಟುಕೊಳ್ಳು-ವಂತಹ ಹಲವು ಪ್ರಮಾಣಗಳೂ ಉಂಟು. ಕರ್ಣಾಟಕದ ಇತಿಹಾಸವೆಂದರೆ ವಿರೋಧಾಭಾಸಗಳ ಆಗರ. ಮಹಾಭಾರತದಲ್ಲಿ ( ಕ್ರಿ. ಪೂ. ೩೨೦–೨೦೦ ) ಕರ್ಣಾಟಕದ ಹೆಸರಿದೆ.* ಆದರೆ ಅಶೋಕನ ಶಾಸನಗಳಲ್ಲಿ ( ಕ್ರಿಸ್ತಪೂರ್ವ ೨೫೦) ಒಂದರಲ್ಲಿಯೂ ಕರ್ಣಾಟಕದ ಉಲ್ಲೇಖವಿಲ್ಲ. ಕರ್ಣಾಟಕಕ್ಕೆ ಅಶೋಕನ ಸಂದೇಶವಾಹಕರು ಬಂದುದುಂಟು. 'ತಿರುಗನ್ನಡದ ಕೋಪಣ ನಗರ' (ಕೊಪ್ಪಳ) ಮಾಸ್ಕಿಗಳಲ್ಲಿ ಅಶೋಕನ ಶಾಸನಗಳು ದೊರೆತಿವೆ; ಅಲ್ಲದೆ ಸಿದ್ದಪುರ (ಮೈಸೂರು ಸಂಸ್ಥಾನ) ದಲ್ಲಿದೆ. ರಕ್ಷಿತನೆಂಬ ಬುದ್ಧ ಬಿಕ್ಷುವು ಆಶೋಕನ ಕಾಲಕ್ಕೆ ಬನವಾಸಿಗೂ ಇನ್ನೊಬ್ಬನು ಮಹಿಷ ಮಂಡಲಕ್ಕೂ ಹೋಗಿದ್ದನೆಂದೂ ಮಹಾವಂಶವೆಂಬ ಗ್ರಂಥವು ಹೇಳುತ್ತದೆ.‡ ಈ ನಾಡೆಲ್ಲವೂ ಅಶೋಕನ ಸಾಮ್ರಾಜ್ಯಕ್ಕೆ ಒಳಪಟ್ಟಿತ್ತು. ಆದರೆ ಅಶೋಕನು ಕಣಾಟಕದ ಹೆಸರನ್ನೆ ಎತ್ತಿಲ್ಲ.

ಸುಮಾರು ಕ್ರಿಸ್ತಶಕದ ಎರಡನೆಯ ಶತಮಾನದಲ್ಲಿ ರಚಿತವಾದ ಮೃಚ್ಛಕಟಿಕದಲ್ಲಿ ಕರ್ಣಾಟಕದ ಹೆಸರಿದೆ.† ಆದರೆ ಈ ಕಾಲದಲ್ಲಿ

* ಸಭಾ. ೭೮-೯೮. ಭೀಷ್ಮ. ೯–೫೯. ‡ KK. p- 5. ಕಚ. II ಪುಟ ೩.

† ಈ ನಾಟಕದ ರಚನಾಕಾಲವನ್ನು ಕುರಿತು ತುಂಬ ಭಿನ್ನಾಭಿಪ್ರಾಯಗಳಿವೆ. ಕ್ರಿಸ್ತಿಶಕಕ್ಕೆ ಮೊದಲು ೧ನೆಯ ಶತಮಾನದಿಂದ ಕ್ರಿ. ಶ. ದ. ೫೫೦ರ ವರೆಗೆ ಬೇರೆಬೇರೆ ಕಾಲಗಳನ್ನು ಬೇರೆಬೇರೆ ವಿದ್ವಾಂಸರು ಹೇಳುತ್ತಲಿದ್ದಾರೆ. ಶ್ರೀ. ಎ. ಆರ್. ಕೃಷ್ಣಶಾಸ್ತ್ರಿಗಳು 'ಸಂಸ್ಕೃತ ನಾಟಕಗಳು' ಎಂಬ ಗ್ರಂಥದಲ್ಲಿ ಹಲವು ಮತಗಳನ್ನು ಹೇಳಿ ಕ್ರಿ. ಶ. ೪೦೦, ಎಂದು ತಮ್ಮ ಮಧ್ಯಮ ಮಾರ್ಗವೊಂದನ್ನು ಸೂಚಿಸಿದ್ದಾರೆ. ಆದರೆ ಕ್ರಿ. ಶ. ೨ನೆಯ ಶತಮಾನ ಎಂಬ ಪಕ್ಷವೇ ಬಲವಾಗಿದೆ. ಆದರೂ ಕ್ರಿ. ಶ. ೪ನೆಯ ಶತಮಾನವೆಂದರೂ ಮೇಲಣ ವಿಚಾರಸರಣಿಗೆ ಬಾಧೆಬರುವದಿಲ್ಲ.

ಕರ್ಣಾಟಕದಲ್ಲಿ ಆಳುತ್ತಿದ್ದ ಸಾತವಾಹನರ (ಕ್ರಿ. ಪೂ. ೨೦೮–೨೪೯) ಒಂದು ಗ್ರಂಥದಲ್ಲಾಗಲಿ, ಯಾವ ಶಾಸನಗಳಲ್ಲಾಗಲಿ ಕರ್ಣಾಟಕದ ಹೆಸರು ಬಂದಿದ್ದರೆ ಆಣೆ! ಹಾಲನೆಂಬ ಸಾತವಾಹನರಾಜನು ಬರೆದ 'ಗಾಥಾಸಪ್ತಶತಿ' ಯಲ್ಲಿ 'ತುಪ್ಪ, ಪೊಡೆ (ಹೊಡೆ), ತೀರ್ (ಸಮರ್ಥನಾಗು)' ಎಂದು ಮುಂತಾದ ಅಚ್ಚಕನ್ನಡದ ಮಾತುಗಳು ದೊರೆಯಬಹುದು; § ಸಾತ-ವಾಹನರಲ್ಲಿ 'ಹಾಲ', 'ಪುಲಿಮಾಯಿ' ಎಂಬ ಹೆಸರುಗಳಲ್ಲಿ ಕನ್ನಡದ ಅಂದವು ಕಾಣಬರುತ್ತಿರಬಹುದು. ಆದರೆ ಅವರು ತಮಗೆ ಕರ್ಣಾಟಕರೆಂದುಕೊಂಡುದು ಎಲ್ಲಿಯೂ ದೊರೆಯದು. ಬಳ್ಳಾರಿಜಿಲ್ಲೆಯ ಹಿರೆಹಡಗಲಿ ಮತ್ತು ಮ್ಯಾಕೊಂಡಗಳಲ್ಲಿ ದೊರೆತ ಪ್ರಾಚೀನ ಶಾಸನಗಳಿಂದ ಈ ಭಾಗಕ್ಕೆ 'ಸಾತವಾಹನಿಹಾರ' ಎಂಬ ಹೆಸರಿದ್ದುದು ಬೆಳಕಿಗೆ ಬಂದಿದೆ. ಆದುದರಿಂದ ಸಾತವಾಹನರು ಕನ್ನಡಿಗರೇ ಆಗಿರಬೇಕೆಂದು ಶ್ರೀ ತಿರುಮಲೆ ತಾತಾಚಾರ್ಯರು ನಿರ್ಧರಿಸಿದ್ದಾರೆ.* ಸಾತವಾಹನರಿಗೆ ಆಂಧ್ರರು ಅಥವಾ ಆಂಧ್ರಭೃತ್ಯರೆಂದು ಪುರಾಣಗಳಲ್ಲಿರುವ ಉಲ್ಲೇಖಗಳು ಅಸಂಬದ್ಧ, ಎಂದು ಡಾ. ಸುಕತನಕರರ ಅಭಿಪ್ರಾಯವಿದೆ.‡ ಸಾತವಾಹನರಿಗೆ 'ಕುಂತಲಸ್ವಾಮಿ' ಗಳು ಎಂದು ವಾತ್ಸ್ಯಾಯನನು ಹೇಳುತ್ತಾನೆ. ಸಾಮಾನ್ಯವಾಗಿ ಕುಂತಲ ಮತ್ತು ಕರ್ಣಾಟಕಗಳು ಅಭಿನ್ನವೆಂದು ಆಧುನಿಕ ಸಂಶೋಧಕರಿಗೆ ಕಂಡು ಬರುತ್ತಲಿದೆ. † ಆದರೂ ಸಾತವಾಹನರು ಇದರ ಬಗೆಗೆ ಸಂಪೂರ್ಣ ಮೌನಿಗಳು.

೬ನೆಯ ಶತಮಾನದಿಂದ ಚಲುಕ್ಯರು ದಕ್ಷಿಣಾಪಥದ ಸಾಮ್ರಾಟರಾದರು. ಇವರ ರಾಜಧಾನಿ ಬಾದಾಮಿ. ಕೆಚ್ಚಕನ್ನಡದ ಊರು. ಬಾದಾಮಿ (ಕಿಸುವೊಳಲು) ಕರ್ಣಾಟಕದ ಹೃದಯ–ಚೊಕ್ಕಟವಾದ ಕನ್ನಡ ಊರು,

§ ಉದಯಭಾರತ ೧೯೨೮, ಶ್ರೀ ಗೋ. ಪೈಗಳ ಲೇಖ.

* ಜಕ. I, ಪುಟ ೨೯೮. ‡ BORI. 1922. † ಡಾ. ಬುಲ್ಹರು, ಬಿಲ್ಹಣನ (೧೧ನೆಯ ಶತಮಾನ) ವಿಕ್ರಮಾಂಕದೇವಚರಿತದ ಮುನ್ನುಡಿಯಲ್ಲಿ: Kuntala and Karnat are used as synonyms p. 27, note 7. ಡಾ. ಬಿ. ಸಿ. ಲಾ. Kuntal occupies a region almost conterminous with the Kanarese Districts. —BORI. XVII, p. 324.

ಎಂದು ಪ್ರಾಚೀನಕಾಲದಿಂದಲೂ ವಿಖ್ಯಾತಿಯುಂಟು. ಇವರಿಗೆ ತಾವು 'ವಾತಾಪೀಪುರುವರಾಧೀಶ್ವರ' ರೆಂಬ ಅಭಿಮಾನವೂ ಇಲ್ಲದಿಲ್ಲ. ಇವರ ದಂಡು **'ಅನಂತಂ, ಅಜೇಯಂ ಕರ್ಣಾಟಕ ಬಲಂ'** ಎಂದು ವಿಖ್ಯಾತ-ವಾಗಿದ್ದಿತೆಂದು ರಾಷ್ಟ್ರಕೂಟರ ಶಾಸನಗಳಿಂದ ಗೊತ್ತಾಗುತ್ತದೆ.+ ಆದರೆ ಇವರು ತಾವಾಗಿ ಹೆಮ್ಮೆಯಿಂದ ತಮ್ಮನ್ನು ' ಕನ್ನಡಿಗರು ' ಎಂದುಕೊಂಡುದು ಎಲ್ಲಿಯೂ ಕಾಣಬರುವದಿಲ್ಲ. ಆದರೂ ಇವರು ಕನ್ನಡಿಗರೆಂಬುದು ಸುಳ್ಳಲ್ಲ. 'ಚಲುಕ್ಯರು ಕನ್ನಡಿಗರು' ಎಂಬ ಬಗ್ಗೆ ಶ್ರೀ. ಗೋವಿಂದ ಪೈ ಮತ್ತು ಶ್ರೀ. ಪಂಚಮುಖಿಯವರು ಇನ್ನೂ ಕೆಲವು ಕಾರಣಗಳನ್ನು ಕೊಟ್ಟು ಲೇಖನಗಳನ್ನು ಬರೆದಿದ್ದಾರೆ.§ ಹುವೆನ್‌ತ್ಸಾಂಗನೆಂಬ ಚೀನೀ ಪ್ರವಾಸಿಯು (ಕ್ರಿ. ಶ. ೬೪೦) ಬಾದಾಮಿಯಲ್ಲಿ ಆಳುತ್ತಿದ್ದ ೨ನೆಯ ಪುಲಿಕೇಶಿರಾಜನನ್ನು 'ಮಹಾರಾಷ್ಟ್ರ'ದ ಅರಸನೆಂದೂ ವರ್ಣಿಸಿದ್ದಾನೆ.

ಆದರೆ ಆಗ ಕರ್ಣಾಟಕವು ಇನ್ನೂ ಜೀವಂತವಾಗಿದ್ದಿತೆಂದು ಸುಮಾರು ಆ ಕಾಲಾವಧಿಯೊಳಗಾಗಿ ಬರೆಯಲ್ಪಟ್ಟ ಎಷ್ಟೋ ಸಂಸ್ಕೃತ ಗ್ರಂಥಗಳಲ್ಲಿ ಬಂದಿರುವ ಕರ್ಣಾಟಕದ ಹೆಸರಿನ ಉಲ್ಲೇಖಗಳಿಂದ ಗೊತ್ತಾಗುತ್ತಿದೆ. ಮಾರ್ಕಾಂಡೇಯ ಪುರಾಣ, ವರಾಹಮಿಹಿರನ ಬೃಹತ್‌ಸಂಹಿತೆ ( ಸುಮಾರು ೬ನೆಯ ಶತಮಾನ ), ಭಾಗವತ* (ಕ್ರಿ. ಶ. ೫೫೦–೬೫೦) ಈ ಗ್ರಂಥಗಳು

+ EI, XXIII, ಪುಟ ೧೪. § ಕ. ದ. ೧೯೩೭, ಪುಟ ೫೨. ಶ್ರೀ ಪಂಚಮುಖಿಯವರ ಲೇಖನವು KHJ. ದಲ್ಲಿ ಬೇಗನೆ ಬರಲಿದೆ. ಪಶ್ಚಿಮ ಚಲುಕ್ಯರಿಗೆ ಸಾಮಾನ್ಯ-ವಾಗಿ ಕುಂತಲರೆಂದೂ ಅವರು ಆಳುವ ನಾಡಿಗೆ ಕುಂತಲದೇಶವೆಂದೂ ಹೆಸರಿದ್ದುದು ಶಾಸನಗಳಿಂದ ಗೊತ್ತಾಗುತ್ತದೆ. ( EI. IV p. 88, V p. 9, XII. p. 145). ಅಲ್ಲದೆ ತಮಿಳು ಮಹಾಕೋಶ(Lexicon) ದಲ್ಲಿ ತಮಿಳು ಸಾಹಿತ್ಯದ ಉಲ್ಲೇಖಗಳಿಂದ ಕುಂತಳರ್ ಎಂದರೆ ಚಲುಕ್ಯರು ಎಂದು ಕೊಟ್ಟಿರುವರು. ಕುಂತಲನಾಡನ್ನಾಳುವವರೂ ಕುಂತಲರೆಂದು ವಿಖ್ಯಾತರೂ ಆದ ಚಲುಕ್ಯರ ದಂಡಿಗೆ 'ಕುಂತಲಬಲಂ' ಎಂಬ ಹೆಸರು ಇರಬೇಕಾಯಿತಲ್ಲವೆ? ಆದರೆ ಅದು 'ಕರ್ಣಾಟಕಬಲಂ' ಎಂಬ ಹೆಸರಿನಿಂದ ಪ್ರಖ್ಯಾತವಾಗಿದ್ದುದನ್ನು ನೋಡಿದರೆ ಆ ಪ್ರಾಚೀನಕಾಲದಲ್ಲಿ ಕುಂತಲ ಮತ್ತು ಕರ್ಣಾಟಕಗಳೆರಡೂ ಸಮಾನಾರ್ಥಕ ಶಬ್ದಗಳಾಗಿದ್ದುವೆಂದೇ ಸಿದ್ಧವಾಗುವದಲ್ಲವೆ ?

* ARSJ. Oct. 1934.

ಕರ್ಣಾಟಕರ ಅಸ್ತಿತ್ವದ ಬಗ್ಗೆ ಸಾಕ್ಷಿ ಹೇಳುತ್ತಲಿವೆ.

೮ನೆಯ ಶತಮಾನದ ಮಧ್ಯದ ಸುಮಾರಿಗೆ ರಾಷ್ಟ್ರಕೂಟರು ಬಾದಾಮಿಯ ಚಲುಕ್ಯರನ್ನು ತಳ್ಳಿ ಆಳಲಾರಂಭಿಸಿದರು. 'ರಾಷ್ಟ್ರಿಕ' ಎಂದರೆ ಗೌಡ ಮತ್ತು ನಾಡಿನವ ಎಂಬ ಎರಡರ್ಥಗಳಿವೆಯೆಂದೂ ನಮ್ಮ 'ನಾಡವರೇ' ರಾಷ್ಟ್ರಿಕರೆಂದೂ ಬೇರೊಂದೆಡೆಯಲ್ಲಿ ಪ್ರತಿಪಾದಿಸಿದ್ದಾಗಿದೆ.† ಪಾಲೀಕೋಶದಲ್ಲಿ ರಠಿಕೋ, ರಠಿಯೋ 'an inhabitant' ಎಂದು ಅರ್ಥ ಕೊಟ್ಟಿದೆ. ‡ ಆದುದರಿಂದ 'ಲಟ್ಟಲೂರುಪುರವರಾಧೀಶ್ವರ' ರೆಂದು ಹೇಳಿಕೊಳ್ಳುವವರೂ ಮಾನ್ಯಖೇಟವು ರಾಜಧಾನಿಯಾಗಿ ಉಳ್ಳವರೂ (ಇವೆರಡೂ ಕನ್ನಡ ಊರುಗಳು) ಆದ ರಾಷ್ಟ್ರಕೂಟರು ಕನ್ನಡಿಗರೆಂಬ ಬಗೆಗೆ ಸಂದೇಹಪಟ್ಟುಕೊಳ್ಳಬೇಕಾದುದಿಲ್ಲ. ಡಾ. ಆಳತೇಕರರೆಂಬ ಮಹಾರಾಷ್ಟ್ರೀಯ ಸಂಶೋಧಕರು ರಾಷ್ಟ್ರಕೂಟರು ಕನ್ನಡಿಗರೆಂದೇ ಪ್ರತಿವಾದಿಸಿದ್ದಾರೆ.§ ಕಾಶ್ಮೀರದೇಶದ ಪ್ರಾಚೀನ ಇತಿಹಾಸ ಗ್ರಂಥವಾದ ರಾಜತರಂಗಿಣಿಯಲ್ಲಿ ' ರಟ್ಟರು ಕರ್ಣಾಟಕರು ' ಎಂಬುದುಂಟು. || ರಟ್ಟರು ಮತ್ತು ರಾಷ್ಟ್ರಕೂಟರು ಒಂದೇ ಎಂದು ಶಾಸನಗಳಿಂದ ಸಿದ್ಧವಾಗಿದೆ. +

ಇಷ್ಟೆ ಅಲ್ಲ, ರಾಷ್ಟ್ರಕೂಟರ ದಂಡಿಗೂ 'ಕರ್ಣಾಟಕ ಸೈನ್ಯ' ಎಂಬುದಾಗಿ ಹೊರನಾಡುಗಳಲ್ಲಿ ಕರೆವ ವಾಡಿಕೆಯಿದ್ದಿತೆಂದು ಕಂಡುಬರುತ್ತದೆ! ಡಾ. ಕಿಲಹಾರ್ನರು "ಮಹೇಂದ್ರಪಾಲನ ಕಾಲದ ಎರಡು ಶಾಸನ" ಗಳನ್ನು ಕುರಿತು ಬರೆದ ಟಿಪ್ಪಣಿಯಲ್ಲಿ ಅಭಿಪ್ರಾಯಪಟ್ಟಿರುವದೇನೆಂದರೆ: ಈ ಅರಸನು ತಾನು ಸೋಲಿಸಿದೆನೆಂದು ಹೇಳುವ 'ಕರ್ಣಾಟಕ ಸೈನ್ಯ'ವು ರಾಷ್ಟ್ರಕೂಟರದೇ ಆಗಿರಬೇಕೆಂದು ನನ್ನ ಅಭಿಪ್ರಾಯವು. In my opinion the 'Karnatak army' which is said to have been defeated by him can only have been an army of the Rashtrakutas.)*

ಈ ರಾಜರ ಕನ್ನಡದ ಅಬಿಮಾನದ ಬಗ್ಗೆ ಸಂದೇಹಕ್ಕೆ ಎಡೆಯಿಲ್ಲ.

† ಮಮೂ. ಪುಟ ೮-೧೦.; ಕವೀಕ್ಷ, ಪುಟ ೧೩೩; ‡ Childern's Pali Dictionary. RK. p. 21-22. || ರಟ್ಟಾಖ್ಯಾ ಕರ್ಣಾಟೀ ಚಟುಲೇಕ್ಷಣಾ (ಆಸೀತ್). + RK. p. 17-19. *EI. IX p. 3.

ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗದೇವನನ್ನು (೮೧೫) 'ನಿನ್ನಂನ್ನಂನೀನೆ ನೀನೆ' ಎಂದು ಕೃತಜ್ಞತೆಯಿಂದ ಎದೆ ಉಕ್ಕಿ ಕನ್ನಡ ಕವಿಗಳು ಬಾಯ್ತುಂಬ ಹೊಗಳಿದ್ದಾರೆ. ಕನ್ನಡ ಸಾಹಿತ್ಯಕ್ಕೆ — ಕವಿಗಳಿಗೆ ರಾಜಮಾರ್ಗವನ್ನು ಮಾಡಿಕೊಟ್ಟ ಮಹಾರಾಜನೆ ಇವನು. ಇದೇ ವಂಶದ ಇನೆಯ ಕೃಷ್ಣನು (೯೪೦-೯೬೮) ಭರತಖಂಡದಲ್ಲಿ ಮಹಾಸಾಮ್ರಾಟನೆನಿಸಿ ವಿಖ್ಯಾತನಾದನು. ವಿಂಧ್ಯದಿಂದ ರಾಮೇಶ್ವರದ ವರೆಗೆ ಏಕಛತ್ರಾಧಿಪನೆನಿಸಿದ್ದನು. ಸಿಂಹಳರಿಂದ ಕಪ್ಪಕಾಣಿಕೆಗಳನ್ನು ಪಡೆದನು. ಇಂತಹ ರಾಜಾಧಿರಾಜನಾದ ಇನೆ ಕೃಷ್ಣನಿಗೆ ತನ್ನ ಭಾಷಾಭಿಮಾನವಿಲ್ಲದೆ ಇದ್ದರೆ ಆತನು ಪೊನ್ನನೆಂಬ ಕನ್ನಡ ಕವಿಗೆ ತನ್ನ ಓಲಗದಲ್ಲಿ ಕವಿಚಕ್ರವರ್ತಿಯೆಂಬ ಬಿರುದನ್ನಿತ್ತು ಮನ್ನಣೆಮಾಡುತ್ತಿದ್ದನೆ?+ ಇದೆ ಇನೆಯ ಕೃಷ್ಣನ ಒಂದು ಶಾಸನವು ಉತ್ತರ ಹಿಂದುಸ್ತಾನದಲ್ಲಿ ಜೂರಾ ಎಂಬಲ್ಲಿ ದೊರೆತಿದೆ.‡ ಅದು ಆ ಕಾಲದ ತಿಳಿಗನ್ನಡನುಡಿಯಲ್ಲಿದೆ! ಈ ರಾಷ್ಟ್ರಕೂಟರ ಒಂದು ಶಾಖೆಯು ಗುಜರಾತದಲ್ಲಿ ಆಳುತ್ತಿದ್ದಿತು. ನವಸರಿ ಬಡೋದೆ ಭಾಗದಲ್ಲಿ ಸಿಕ್ಕಿರುವ ಪ್ರಾಚೀನ ತಾಮ್ರಪಟಗಳಲ್ಲಿ ಸಂಸ್ಕೃತಭಾಷೆಯಿದ್ದು, ಅವು ನಾಗರಿಲಿಪಿಯಲ್ಲಿ ಬರೆಯಲ್ಪಟ್ಟಿದ್ದರೂ ಕೊನೆಗೆ ಈ ರಾಷ್ಟ್ರಕೂಟ ರಾಜರು ಕನ್ನಡದಿಂದ ಒಪ್ಪ (ಸಹಿ) ಹಾಕಿದುದು ಬೆಳಕಿಗೆ ಬಂದಿವೆ!§

ಇನಿತೊಂದು ಕನ್ನಡದ ಹೆಮ್ಮೆಯಿರುವ ರಾಷ್ಟ್ರಕೂಟರೂ ತಮ್ಮನ್ನು 'ಕನ್ನಡಿಗರು', 'ಕರ್ಣಾಟಕರು' ಎಂದು ಏಕೆ ಹೇಳಿಕೊಂಡಿರಲಿಕ್ಕಿಲ್ಲ?

ಈ ಸುಮಾರಿಗೂ 'ಕರ್ಣಾಟಕ' ದ ಹೆಸರು ಮೂಲೆಗುಂಪಾಗಿದ್ದಿತೆಂದು ಭಾವಿಸುವ ಕಾರಣವಿಲ್ಲ. ಏಕೆಂದರೆ ರಾಜಶೇಖರನೆಂಬ ೧೦ನೆಯ ಶತಮಾನದ ಕವಿಯು "**ಕರ್ನಾಟೀೋ** ಯುದ್ಧ ತಂತ್ರೇ ಚತುರಮತಿಃ, ಸಮರ ಕರ್ಮಣಿ ನಿಸರ್ಗೋದ್ಭವಾ ಏವ **ಕರ್ಣಾಟಾಃ**" ಎಂದೂ 'ಕಿಂಬ್ರೂಥ!.......ಅಖಂಡಿತ

---

+ ಕಚ. ಪುಟ ೪೧. ಈ ಇನೆಯ ಕೃಷ್ಣನನ್ನು ಆದಿಪಂಪನು 'ವಿಕ್ರಮಾರ್ಜುನವಿಜಯ ದಲ್ಲಿ ಶ್ರೀಕೃಷ್ಣನಿಗೆ ಹೋಲಿಸಿ ವರ್ಣಿಸಿದ್ದುದನ್ನು ನಾಡೋಜಪಂಪ ಎಂಬ ಗ್ರಂಥದಲ್ಲಿ ಪಂಡಿತ ಮುಳಿಯ ತಿಮ್ಮಪ್ಪಯ್ಯನವರು ಸಿದ್ಧಮಾಡಿದ್ದಾರೆ. ಪಂಪನು ಹೀಗೆ ಆ ಸಾಮ್ರಾಟನನ್ನು ಶ್ರೀಕೃಷ್ಣನಿಗೆ ಹೋಲಿಸಿದ್ದುದರಲ್ಲಿ ಈ ಕನ್ನಡ ಮಹಾಕವಿಯ ಹೃದಯದಲ್ಲಿ ಆ ರಾಷ್ಟ್ರಕೂಟರಾಜನ ವಿಷಯಕ್ಕೆ ಎಷ್ಟೊಂದು ಆದರ—ಪ್ರೀತಿಯಿದ್ದಿತೆಂಬುದು ಚೆನ್ನಾಗಿ ವ್ಯಕ್ತವಾಗುತ್ತದೆ. ‡ EI, XIX, P. 287. §RK. p.21

ಪುರುಷಾಕಾರಾಃ ಹಿ ಕರ್ಣಾಟಾಃ" ಎಂದು ಕನ್ನಡಿಗರ ಶೌರ್ಯ, ಧೈರ್ಯಗಳನ್ನು ಮುಕ್ತಕಂಠದಿಂದ ಸ್ತುತಿಸಿದ್ದಾನೆ! ಈ ಕವಿಯ ಕಣ್ಣೆದುರು ಆಗಿನ ಮಹಾಸಾಮ್ರಾಟರಾದ ರಾಷ್ಟ್ರಕೂಟರು ಹಾಗೂ ಅವರ ವೀರ ಸೈನಿಕರಲ್ಲದೆ ಬೇರಿನ್ನಾರೂ ಇರಲಾರರೆಂಬುದು ಸ್ಪಷ್ಟ. ಏಕೆಂದರೆ ಸಾಧಾರಣವಾಗಿ ಈತನು ರಾಷ್ಟ್ರಕೂಟ ೩ನೆಯ ಕೃಷ್ಣನ ಸಮಕಾಲೀನನು.

ರಾಷ್ಟ್ರಕೂಟರ ಕಾಲದ ವರೆಗೂ ನೆರೆಹೊರೆಯ ನಾಡಿನವರು ಕರ್ಣಾಟಕದ ಹೆಸರನ್ನು ಹೇಳುವರು; ಆದರೆ ಕರ್ಣಾಟಕದ ರಾಜರು ಮಾತ್ರ ತಮ್ಮ ನಾಡಿನ ಹೆಸರಿನಿಂದ ಹೆಮ್ಮೆಗೊಟ್ಟುಕೊಳ್ಳುವದು ಕಂಡುಬರುವದಿಲ್ಲ. ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ; ಆದುದರಿಂದ ಈ ನಾಡಿನ ಜನಗಳಲ್ಲಿಯೂ ತಾವು ಕರ್ಣಾಟಕರೆಂಬ ವಿಶೇಷವಾದ ಅಭಿಮಾನವು ಆ ಕಾಲಕ್ಕೆ ಕಾಣಿಸಿಕೊಳ್ಳದಿದ್ದಲ್ಲಿ ಸೋಜಿಗವಿಲ್ಲ. ಆದರೆ ಇದಕ್ಕೆ ಕೆಲವೊಂದು ಅಪವಾದಗಳೂ ಇಲ್ಲದಿಲ್ಲ. ಕದಂಬರ ಒಂದು ಪ್ರಾಚೀನ ಶಾಸನದಲ್ಲಿ ಸಮಸ್ತ ಕರ್ಣಾಟ ಭೂವರ್ಗ ಭರ್ತಾರ' ನೆಂದು ಅರಸನ ವರ್ಣನೆಯಿದೆ.* ಆದರೆ ಇದು ಕೃತ್ರಿಮವಾದ (spurious) ತಾಮ್ರಪಟವೆಂದು ಕಂಡುಬಂದಿದೆ. ಇದು ತಾನು ತೋರಿಸಿಕೊಳ್ಳುವಂತೆ ಕ್ರಿ. ಶ. ೪೫೦ನೆಯ ವರುಷದ ಶಾಸನವಲ್ಲದಿದ್ದರೂ ಕನಿಷ್ಠ ೭-೮ ನೆಯ ಶತಮಾನದಲ್ಲಾದರೂ ಬರೆಯಲ್ಪಟ್ಟಿದೆಂದು ಅದರ ಅಕ್ಷರಗಳಿಂದ ಊಹಿಸಬಹುದಾಗಿದೆ. ಆದುದರಿಂದ ಸುಮಾರು ೭-೮ನೆಯ ಶತಕದಲ್ಲಿ ಆ ತಾಮ್ರ ಪಟವನ್ನು ಕೆತ್ತಿಸಿದವನಿಗಾದರೂ 'ಸಮಸ್ತ ಕರ್ನಾಟಕ'ದ—ಅಖಂಡ ಕರ್ಣಾಟಕದ ಸ್ಪಷ್ಟವಾದ ಕಲ್ಪನೆಯು ಬಂದಿದ್ದಿತೆಂಬುದು ಸ್ಪಷ್ಟವಿದೆ. ೨ನೆಯ ಪುಲಿಕೇಶಿಯನ್ನು ಮಹಾರಾಷ್ಟ್ರದ ರಾಜನೆಂದು ಹುವೆನ್‌ತ್ಸಾಂಗನು ಹೇಳಿದರೂ ಈ ರಾಜಾಧಿರಾಜ ಪರಮೇಶ್ವರನ ಸೊಸೆಯು ತಾನು 'ಕರ್ಣಾಟ ರಾಜಪ್ರಿಯೆ' ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾಳೆ. ಈ ಕರ್ಣಾಟ ಮಹಾರಾಣಿಯು ಭೂಲೋಕದ ಮೇಲಣ ಪ್ರತ್ಯಕ್ಷ ಸರಸ್ವತಿಯೇ ಸರಿ, ಎಂದು ಮುಂತಾಗಿ ಸಂಸ್ಕೃತಭಾಷೆಯೊಳಗಿನ ದಂಡಿ, ರಾಜಶೇಖರಾದಿ ಉದ್ದಾಮ ಕವಿಗಳೇ ಹೊಗಳಿದ್ದಾರೆ.* ಇಂತಹ ಅಸಾಮಾನ್ಯ ಕವಿತಾಸಾಮರ್ಥ್ಯವುಳ್ಳ ಮಹಾರಾಜ್ಞಿಯು ತಾನು ಆ ಉಚ್ಚ

EC. VI. KD. 162. *MSJ. § IX. HT. 12

ಸ್ಥಿತಿಗೆ ಏರಿದ ಮೇಲೆ ಕರ್ಣಾಟದವಳು ತಾನು ಎಂಬುದನ್ನು ಆಗಲೂ ನೆನಪಿಟ್ಟುದು ಸೋಜಿಗದ ಸಂಗತಿಯು!

ಸಾತವಾಹನರು, ಬಾದಾಮಿಯ ಚಲುಕ್ಯರು ರಾಷ್ಟ್ರಕೂಟರು, 'ತಾವು ಕರ್ಣಾಟದ ರಾಜರು', 'ಕರ್ಣಾಟಕರು' ಎಂದು ಅಭಿಮಾನದಿಂದ ಹೇಳಿ-ಕೊಳ್ಳದಿರಲು ಕಾರಣಗಳೇನು? ಇದಕ್ಕೆ ಒಂದು ಕಾರಣವಂತೂ ಸ್ಪಷ್ಟವಿದೆ. ಅದೇನಂದರೆ; ಸಾತವಾಹನರಿಂದ ರಾಷ್ಟ್ರಕೂಟರ ವರೆಗೂ ಎಂದರೆ ಸುಮಾರು ೧೧ನೆಯ ಶತಮಾನದ ಕೊನೆಯ ವರೆಗೆ ವಿಂಧ್ಯ-ನೀಲಗಿರಿಗಳ ನಡುವಣ ನಾಡಿನಲ್ಲಿ ಕನ್ನಡಕ್ಕೆ ಎದುರಾಳಿಯಾಗಿ ಮುಂದೆ ಬರಲು ತೆಲುಗು ಇಲ್ಲವೆ ಮರಾಠಿ ಅವುದೊಂದೂ ತಲೆಯೆತ್ತಿ ತನ್ನ ಕಾಲಮೇಲೆ ತಾನು ನಿಲ್ಲುವಷ್ಟು ಸಾಮರ್ಥ್ಯವನ್ನು ಇನ್ನೂ ಸಂಪಾದಿಸಿರಲಿಲ್ಲ. ಆದುದರಿಂದ ದಕ್ಷಿಣಾಪಥ-ದಲ್ಲಿ ತಾವೇ ತಾವಾಗಿ ಮೆರೆಯುತ್ತಿದ್ದ ಕನ್ನಡಿಗರಿಗೆ, ತಮ್ಮ ಮನೆಯಲ್ಲಿ 'ತಾವು ಕನ್ನಡಿಗರು' ಎಂದು ಹೇಳಿಕೊಳ್ಳುವ ಅವಶ್ಯಕತೆಯಾದರೂ ಏನು?

೧೧ನೆಯ ಶತಮಾನದಿಂದ ಮುಂದೆ ಇದೆಲ್ಲ ಪರಿಸ್ಥಿತಿಯೂ ಕ್ರಮವಾಗಿ ಬದಲಾಗಲಾರಂಭಿಸಿತು. ಹೊಯ್ಸಳರ ಕಾಲಕ್ಕೆ ಎಂದರೆ ಸುಮಾರು ೧೨-೧೩ನೆಯ ಶತಮಾನಕ್ಕೆ ಈ ನಾಡಿನವರಲ್ಲಿ 'ತಾವು ಕನ್ನಡಿಗರು' ಎಂಬ ಅಭಿಮಾನದ ಜ್ಯೋತಿಯು ಅಮಂದವಾಗಿ ಬೆಳಗತೊಡಗಿದುದು ಕಂಡುಬರುತ್ತದೆ.

ಕ್ರಿ. ಶ. ೯೦೦ನೆಯ ವರುಷದ ರಾಷ್ಟ್ರಕೂಟರ ಕಾಲದ ಒಂದು ಶಾಸನವು ದೊರೆತಿದ್ದು ಅದರಲ್ಲಿ "ಕಣ್ಣಡಿ ಅರಸರ್ ....ಕೊಟ್ಟೋರ್" ಎಂದು ಬರೆದಿದೆ.§ ಇಲ್ಲಿ 'ಕಣ್ಣಡಿ' ಅರಸರೆಂದರೆ ಕನ್ನಡಿ(ಗ) ರಾಜರು, ಎಂದು ಅರ್ಥಮಾಡಲು ಅವಕಾಶವಿದೆ. ತಮಿಳರ ದಾಳಿಗಳ ತೊಂದರೆ-ಯನ್ನು ಆಗಾಗ ಅನುಭವಿಸ ಬೇಕಾಗುತ್ತಿದ್ದ ಕರ್ಣಾಟದ ದಕ್ಷಿಣ ಭಾಗದಲ್ಲಿ ಈ ಶಾಸನವು ದೊರೆತಿದೆ. ಇನ್ನೊಂದು ಭಾಷೆಯವರ ಆಘಾತದ ಅನುಭ-ವವು ಬಂದಾಗಲೇ ಮನುಷ್ಯನಿಗೆ ತನ್ನ ಭಾಷೆಯ ಎಚ್ಚರವುಂಟಾಗುವ ಸಂಭವವಿದೆ. ಆದುದರಿಂದಲೆ ಈ ಶಾಸನದಲ್ಲಿ ಆ ರಾಷ್ಟ್ರಕೂಟರಾಜನನ್ನು 'ಕಣ್ಣಡಿ' ಅರಸನೆಂದು ಹೇಳಿರಬಹುದಾಗಿ ತೋರುತ್ತದೆ. ಈ ಶಾಸನದಲ್ಲಿ ಹಳಗನ್ನಡ ಭಾಷೆಯಿದ್ದರೂ ಅದರಲ್ಲಿ ತಮಿಳ ಪದಗಳು ಬಹಳವಾಗಿ ಬೆರೆತುಕೊಂಡಿವೆ.|'It contains several Tamil words' ಎಂದು ಇದನ್ನು

ಓದಿದ ಸಂಶೋಧಕರು ಬರೆದಿಟ್ಟಿದ್ದಾರೆ.

ಆದರೆ ಈ ಶಾಸನದಲ್ಲಿರುವ 'ಕಣ್ಣಡಿ ಅರಸರ್ ಎಂಬುದಕ್ಕೆ ಇದನ್ನು ಓದಿ ಸಂಗ್ರಹಿಸಿದ ಸಂಶೋಧಕರು ಬೇರೆ ಅರ್ಥವನ್ನು ಮಾಡಿದ್ದಾರೆ.* ಕ್ರಿ. ಶ. ೯೦೦ರಲ್ಲಿ ರಾಷ್ಟ್ರಕೂಟ ೨ನೆಯ ಕೃಷ್ಣನು ಆಳುತ್ತಿದ್ದನು. ಕೃಷ್ಣ ಶಬ್ದವೆ ಮಾರ್ಪಟ್ಟು ಈ ಶಾಸನದಲ್ಲಿ 'ಕಣ್ಣಡಿ' ಎಂತಾಗಿರಬೇಕು, ಎಂದು ಸಂಪಾದಕರ ಅಭಿಪ್ರಾಯ. ಕೃಷ್ಣ ಶಬ್ದವು ಕನ್ಹಃ, ಕನ್ನರ ಅಥವಾ ಕನ್ನಡ ಆಗಬಹುದು; ಅದು 'ಕಣ್ಣಡಿ' ಎಂದು ಏಕೆ ಮತ್ತು ಹೇಗೆ ಮಾರ್ಪಟ್ಟಿತೊ ತಿಳಿಯದಾಗಿದೆ! ಆದುದರಿಂದ 'ಕಣ್ಣಡಿ' ಎಂಬುದು ಕನ್ನಡಿ (ಗ) ಶಬ್ದದ ಪ್ರಾಥಮಿಕರೂಪವಾಗಿರಬಹುದೇನೊ ಎಂದು ಸಂದೇಹ.

ಕ್ರಿ. ಶ. ೧೧೫೨ ರ ಸುಮಾರಿನ ಒಂದು ಶಾಸನದಲ್ಲಿ '**ಕಣ್ಣಡಿ**'ಯ ಕೇತಯ್ಯನಾಯಕನ ಎಂಬ ಒಂದು ಹೆಸರು ಕಾಣಿಸಿಕೊಳ್ಳುವದು.|| ಇಲ್ಲಿ 'ಕಣ್ಣಡಿ' ಎಂಬುದು ಪ್ರದೇಶವಾಚಕವಾಗಿದ್ದು ಅದರ ಅರ್ಥ ಕನ್ನಡಿಗನು ಎಂದು ಮಾಡಲಾಗಿದೆ.§

ಶ್ರೀ. ಪಿ. ಶಂಕರನಾರಾಯಣ, ಎಂ. ಎ. ಇವರು ಬರೆದ ತೆಲಗು-ಕೋಶದಲ್ಲಿ '**ಕನ್ನಡಿ** a native or inhabitant of Karnatac' ಎಂದು ದೊರೆಯತ್ತದೆ. ತೆಲಗರಂತೆ ತಮಿಳರಲ್ಲಿಯೂ ಕನ್ನಡಿಗರಿಗೆ '**ಕಣ್ಣಡಿ**' ಯವರೆಂದು ಕರೆವ ವಾಡಿಕೆಯು ಇದ್ದಿತೆಂದು ಶಾಸನಗಳಿಂದ ವ್ಯಕ್ತವಾಗುತ್ತದೆ. 'ಕನ್ನಡಿಯನ' ಕಾಲುವೆ' 'ಕನ್ನಡಿ'ಯ ರಾವುತರು, ಕನ್ನಡಿಯ ನಾಯಕರ್ ಎಂದು ಮುಂತಾದ ಪ್ರಾಚೀನ ಪ್ರಯೋಗಗಳು ದೊರೆಯುತ್ತವೆ.† ಮಾರವಾಡಿ, ಗುಜರಾತಿ; ಹಿಂದುಸ್ತಾನಿ ಭಾಷೆಗಳಲ್ಲಿ 'ಕನಡಿ' ಭಾಷಾ 'ಕನಡಿ' ಲೋಕ ಎಂದು ಹೇಳುವ ರೂಢಿಯು ಈಗಲೂಉಂಟು.

ಮರಾಠಿಯಲ್ಲಿ'ಕಾನಡಿ'ಎನ್ನುವರು.ಸಂಸ್ಕೃತೋದ್ಭವ(ಆರ್ಯವರ್ಗದ) ಈ ಭಾಷೆಗಳಲ್ಲಿ ದ್ವಿತ್ವದ ಹಿಂದಿನ ಹ್ರಸ್ವಾಕ್ಷರವನ್ನು ಹಲವೆಡೆಗಳಲ್ಲಿ ತಟ್ಟನೆ ಉಚ್ಚರಿಸಲಿಕ್ಕೆ ಆಗದಿರುವದರಿಂದ ಹಿಂದಿ, ಮಾರವಾಡಿ ಭಾಷೆಗಳಲ್ಲಿ ಕನ್ನಡಿಯೊಳಗಿನ ನಕಾರದ ದ್ವಿತ್ವವು ಲೋಪಹೊಂದಿತು; ಮರಾಠಿಯವರು

* EC. IX, Introduction, p. 12. || EC. VIII, Sb. 525. § EC. XIII, Index. † MP.I ರಾಮನಾಥ ೨೭೨; ಉತ್ತರ ಅರ್ಕಾಟ ೧೫೩; ಮುಂತಾದವು.

ತಮ್ಮ ಪದ್ಧತಿಯಂತೆ ದ್ವಿತ್ವಾಕ್ಷರದ ಹಿಂದಿನ ಹ್ರಸ್ವಾಕ್ಷರವನ್ನು ದೀರ್ಘ ಮಾಡಿಕೊಂಡಿದ್ದಾರೆ. ಕಕ್ಕ—ಕಾಕಾ, ಕಪ್ಪಡ—ಕಾಪಡ ಆದಂತೆ ಕನ್ನಡಿ—ಕಾನಡಿ ಆಯಿತು.

ಗುಜರಾತಿನಲ್ಲಿರುವವನು ಗುಜರಾತಿ; ಬಂಗಾಲದಲ್ಲಿರುವವನು ಬಂಗಾಲಿ. ಹಾಗೆ ಕನ್ನಡ(ದೇಶ) ದಲ್ಲಿರುವವನು ಕನ್ನಡಿ. ಒಂದು ಪ್ರದೇಶದಲ್ಲಿ ವಾಸಿಸುವವನು ಎಂಬರ್ಥದಲ್ಲಿ(ಕೆಲವು) ದೇಶವಾಚಕಗಳ ಕೊನೆಗೆ 'ಇ' ಎಂಬ ತದ್ಧಿತ ಪ್ರತ್ಯಯವು ಸೇರುವದನ್ನು ಗುಜರಾತಿ, ಕೊಂಕಣಿ, ಮಲೆಯಾಳಿ ಮೊದಲಾದ ಪದಗಳ ಪ್ರಯೋಗಗಳಲ್ಲಿ ಕಂಡುಕೊಳ್ಳಬಹುದು. 'ಗುಜರಾತಿ', 'ಮಲೆಯಾಳಿ' ಇವುಗಳಂತೆ 'ಕನ್ನಡಿ' ಎಂಬ ಪ್ರಯೋಗವೂ ಒಂದು ಕಾಲಕ್ಕೆ ರೂಢವಾಗಿರಬೇಕು. ಆದರೆ ೧೨ನೆಯ ಶತಮಾನದ ಮುಂದಿನ ಕಾಲದಲ್ಲಿ 'ಇ' ಪ್ರತ್ಯಯವು 'ಇಗ' ಎಂಬುದಾಗಿ ಪರಿಣಮಿಸಿದ್ದುದು ಕಂಡುಬರುತ್ತದೆ.* ಒಂದಾನೊಂದು ಕಾಲದಲ್ಲಿ ಇ ಅಥವಾ ಇಗ ಎಂಬ ಯಾವ ಪ್ರತ್ಯಯವನ್ನು ಸೇರಿಸದೆ ಕನ್ನಡನ್, ಕನ್ನಡರ್ ಎಂದು ಹೇಳುವ ರೂಢಿಯೂ ಇದ್ದುದು ತಮಿಳ ಸಾಹಿತ್ಯದಿಂದ ಬೆಳಕಿಗೆ ಬಂದಿದೆ.†

ಅಂತು ಸಾತವಾಹನರಿಗಿಂತ (ಬಾದಾಮಿ) ಚಲುಕ್ಯರಲ್ಲಿ, ಈ ಚಲುಕ್ಯರಿಗಿಂತ ರಾಷ್ಟ್ರಕೂಟರಲ್ಲಿ ಕನ್ನಡದಅಭಿಮಾನವು ಹೆಚ್ಚು ಹೆಚ್ಚಿನ ಪ್ರಮಾಣದಲ್ಲಿ ಕಾಣಿಸಿಕೊಳ್ಳಲಾರಂಭಿಸಿದುದು ಸುಳ್ಳಲ್ಲ.

ರಾಷ್ಟ್ರಕೂಟರ ತರುವಾಯ ಅವರ ಸ್ಥಳದಲ್ಲಿ ಬಂದ ಕಲ್ಯಾಣ ಚಲುಕ್ಯರಲ್ಲಿ (೯೭೩-೧೧೯೦ )ಇವರೆಲ್ಲರಿಗಿಂತಲೂ ಈ ನಾಡಿನ ಸ್ವಲ್ಪ ಹೆಚ್ಚಿನ ಅಭಿಮಾನವು ಅವರ ಶಾಸನಾದಿಗಳಿಂದ ಕಂಡುಬರುತ್ತಲಿದೆ.‡ ಕಲ್ಯಾಣ ಚಲುಕ್ಯರ ಮನೆತನವನ್ನು ಮೇಲ್ಮೆಗೆ ತಂದ ನೂರ್ಮಡಿ ತೈಲಪನೇ ಕನ್ನಡ

* ಶಮದ ಸೂತ್ರ ೧೯೭: 'ಮೂಲದ ನರನಂ ಪೇಳ್ವಲ್ಲಿ.......ಇಗ ಪ್ರತ್ಯಯಂ' |

† Tamil Lexicon see ಕನ್ನಡರ್.

‡ ಆದರೂ ಇವರ ಅಭಿಮಾನವು ಇದೇ ಸುಮಾರಿಗೆ ಹೊರನಾಡಿನಲ್ಲಿ(ಬಂಗಾಲ, ಮಿಥಿಲೆಗಳಲ್ಲಿ) ಹೋಗಿನೆಲಸಿ, ರಾಜ್ಯವನ್ನು ಸ್ಥಾಪಿಸಿದ (೧೦೭೦–೧೧೧೯) ಬಲ್ಲಾಳ ಸೇನ ಮತ್ತು ನಾನ್ಯದೇವ ಇವರ ಕರ್ಣಾಟದ ಹಿರಿದಾದ ಹೆಮ್ಮೆಗೆ ಸರಿದೊರೆಯಾಗಲಾರದು. ಇವರು ತಾವು 'ಕರ್ಣಾಟ ಕ್ಷತ್ರಿಯ ಕುಲಸಿರೋಮಣಿ',

ಕವಿ ರನ್ನನ ಆಶ್ರಯದಾತನು. ಬಿಲ್ಹಣನು ವಿಕ್ರಮಾಂಕದೇವಚರಿತೆಯಲ್ಲಿ ೬ನೆಯ ವಿಕ್ರಮನನ್ನು 'ಕರ್ಣಾಟೇಂದು' ವೆಂದು ವಿಶೇಷಿಸಿದ್ದಾನೆ. ಕೇತಯ್ಯ ಮತ್ತು ಕಾವೆಯ ನಾಯಕಾದಿ ಜನಸಾಮಾನ್ಯರ ಹೆಸರುಗಳ ಮುಂದೆಯೂ ಕನ್ನಡಿಯವರು ಎಂದರೆ ಕನ್ನಡಿಗರು ಎಂಬ ಉಪಪದವು ಸೇರಿಕೊಂಡುದು ಇವರ ಆಳಿಕೆಯಲ್ಲಿಯೆ (೧೧೫೨) ಕಣ್ಣಿಗೆ ಬೀಳುತ್ತದೆ!

ಕ್ರಿ. ಶ. ೧೧೦೮ರ ಒಂದು ಶಾಸನದಲ್ಲಿ ಅತ್ಯಂತ ವಿಚಾರಾರ್ಹವಾದ ಒಂದು ತೊಡಕು ಅಡಕವಾಗಿದೆ. ಶ್ರೀರಂಗಪಟ್ಟಣ ತಾಲ್ಲೂಕಿನ ಶಾಸನವು ಅದು. ಆ ಶಾಸನಕ್ಕೆ ಸಾಕ್ಷಿಹಾಕಿದ ಒಬ್ಬ ಕುಲಕರಣಿಯು '**ಕನ್ನಡಿಗ** ಸೇನಬೋವನು ಸಾಕ್ಷಿ' ಎಂದು ಬರೆದುಕೊಂಡಿದ್ದಾನೆ!* ಈತನು ಹೀಗೆ ಬರೆದುಕೊಳ್ಳಲು ಕಾರಣವೇನು? ಕರ್ಣಾಟದಲ್ಲಿ ಹಳ್ಳಿಹಳ್ಳಿಗೆ ಕೆಲಸಮಾಡುವ ಕರಣಿಕರು (ಸೇನಬೋವರು) ಆಗಂತು ಕನ್ನಡಿಗರೆ ಇರಬಹುದಲ್ಲವೆ? ಹಾಗಿದ್ದರೆ ಈತನಿಗೆ ತಾನು 'ಕನ್ನಡಿಗನು' ಎಂದು ಪೃತ್ಯೇಕಿಸಿ ಹೇಳಿಕೊಳ್ಳುವ ಕಾರಣವೇನು? ಇದು ಮತ್ತೆ ಎಲ್ಲಿ? ಉತ್ತರಕರ್ಣಾಟಕದಲ್ಲಿ ಅಲ್ಲ; ಮೈಸೂರ ಹೃದಯಾಂತರಾಳದಲ್ಲಿ—ಶ್ರೀರಂಗಪಟ್ಟಣ ತಾಲ್ಲೂಕಿನಲ್ಲಿ! ಇದರ ಕಾರಣ ಮಿಮಾಂಸೆಯೇನು?

(ಕಲ್ಯಾಣ) ಚಲುಕ್ಯರಿಗಿಂತಲೂ ಹೊಯ್ಸಳರ ಕಾಲದ ಕನ್ನಡದ ಅಭಿಮಾನದ ಬಣ್ಣವು ಇನ್ನೂ ಒಂದು ಕೈಹೆಚ್ಚು. ೧೦-೧೧ನೆಯ ಶತಮಾನಕ್ಕಿಂತ ೧೨ ಮತ್ತು ೧೩ನೆಯ ಶತಮಾನಗಳ ಕನ್ನಡಿಗರಲ್ಲಿ ತಮ್ಮ ತನದ ಭಾವನೆಯು ಹೆಚ್ಚು ಹೆಚ್ಚು ಸುಸ್ಪಷ್ಟವಾಗಿ ವ್ಯಗೊಳ್ಳಲಾರಂಭಿಸಿದುದನ್ನು ಆ ಕಾಲದ ಶಾಸನಗಳಿಂದ ಕಂಡುಕೊಳ್ಳಬಹುದಾಗಿದೆ.

ಮಂತ್ರಿಗಳು, ದಂಡನಾಯಕರು, ಪಂಡಿತರು ಪಾಮರರು, ತಾವು ಕನ್ನಡಿಗರೆಂದುಕೊಳ್ಳುವದಕ್ಕೆ ನಾಮು ತಾನೆಂದು ಹೆಮ್ಮೆಯಿಂದ ಮುಂದೆ ಬಂದುದು ಈ ಕಾಲದಲ್ಲಿಯೇ. 'ಕರ್ಣಾಟ' ಕುಳಮುಳ ಮಾರ್ತಾಂಡ ಹೆಗ್ಗಡೆ

---

'ಕರ್ಣಾಟ ಕುಲಭೂಷಣ' ರು ಎಂದು ಹೇಳಿ ತಮ್ಮ ಶಾಸನಗಳಲ್ಲಿ ತೋರ್ಪಡಿಸಿದ ಹುಮ್ಮಸವು ಹೊಚ್ಚಹೊಸದು. ಅಷ್ಟೊಂದು ಅಭಿಮಾನವು ಸ್ಫುರಿಸುವುದಕ್ಕೆ ಪರ ಪ್ರಾಂತವೆ ಕಾರಣವಿರಬೇಕಲ್ಲವೆ? ಇವರ ಬಗ್ಗೆ ಹೆಚ್ಚಿನಸಂಗತಿಗಳಿಗಾಗಿ IH. Sept. 31, p. 455. ನೋಡಬಹುದು.

ಗೋವಿಂದಮಯ್ಯ.*....(೧೧೬೦); 'ಕರ್ಣಾಟವಂಶೋದ್ಭವಂ ಕರಂ ಒಪ್ಪಂ ಬಡೆದಿರ್ಪನ್ ಊರ್ಜಿತಯಶಂ ಶ್ರೀವಿಷ್ಣುದಂಡಾಧಿಪಂ† (೧೧೬೨); 'ಕರ್ಣಾಟ ಕುಲಕಮಳ ಷಂಡಮಂಡನ ಪ್ರಚಂಡ ಮಾರ್ತಂಡ ಗೋವಿಂದ ರಾಜಾನುಜಂ ‡ . . . .(೧೧೬೮); ಈ ಬಗೆಯಾಗಿ ರಾಜಾಧಿಕಾರಿಗಳು ತಮ್ಮನ್ನು ಕರ್ಣಾಟರೆಂದು ವಿಶೇಷಿಸಿ ಹೇಳಿಕೊಂಡ ಉದಾಹರಣೆಗಳು ಈ ಕಾಲದಷ್ಟು ಹಿಂದಣ ಶತಮಾನಗಳಲ್ಲಿ ದೊರೆತಿಲ್ಲ.

ಬ್ರಾಹ್ಮಣರಲ್ಲಿಯೂ ಕರ್ಣಾಟಕರೆಂಬ ವರ್ಗವು ವಿಶೇಷವಾಗಿ ಮುಂದೆ ಬಂದುದು ಈ ಕಾಲದಲ್ಲಿಯೇ ಎಂದು ಊಹಿಸಲು ಅವಕಾಶವಿದೆ. ಹಳೆಯ ಕರ್ಣಾಟಕರು'. ಎಂಬ ಬ್ರಾಹ್ಮಣರನ್ನು ಮೈಸೂರ ಸುತ್ತಲೂ ಮಾತ್ರ ಕಾಣಬಹುದಾಗಿದೆ. ಹಿಂದಕ್ಕೆ ಕನ್ನಡ ಬ್ರಾಹ್ಮಣರು ಉತ್ತರಕರ್ಣಾಟಕ-ದಲ್ಲಿಯೂ ಕೆಲವರಿದ್ದರೆಂದು ತೋರುತ್ತದೆ. ಧಾರವಾಡ ಇತಿಹಾಸಮಂಡಳ-ದವರಿಗೆ ಚಲುಕ್ಯ ವಿನಯಾದಿತ್ಯನ ಕಾಲದ ಒಂದು ತಾಮ್ರಪಟವು ದೊರೆ-ತಿದ್ದು ಆದರಲ್ಲಿ 'ಕನ್ನಡಾನ್ವಯ ಕಾಶವಕೌವೇರಭಟ್ಟ'ನು ಎಂಬೀ ಬಗೆಯ ಹೆಸರಿದೆ. ಈ ತಾಮ್ರಪಟದಲ್ಲಿ ಬರೆದಿರುವ ಮೇರೆಗೆ ಇದರ ಕಾಲವು ಸುಮಾರು ಕ್ರಿ. ಶ. ೬೯೮ ಆಗುತ್ತದೆ. ಈ ತಾಮ್ರಪಟದ ಮೇಲಿಂದ ನೋಡಿದರೆ ಬ್ರಾಹ್ಮಣರು ತಮ್ಮನ್ನು 'ಕನ್ನಡಿಗರು' ಎಂದು ಬಹಳ ಪ್ರಾಚೀನ ಕಾಲದಿಂದಲೇ ಕರೆದುಕೊಳ್ಳಲಾರಂಭಿಸಿದರೆಂದು ನಿರ್ಧರಿಸಬಹುದಾಗಿತ್ತು. ಆದರೆ ಹಿಂದೆ ಹೇಳಿದ (ಸಮಸ್ತ ಕರ್ಣಾಟಕ ಭೂವರ್ಗಭರ್ತಾರಂ, ಎಂಬ ಕದಂಬರ ಶಾಸನದಂತೆ ಇದೂ ಟೊಳ್ಳು (spurious)ಎಂದು ಶಾಸನ ಇಲಾಖೆಯವರೇ ನಿರ್ಧರಿಸಿದ್ದಾರೆ! § ಕ್ರಿ. ಶ. ೬೦೮ರಲ್ಲಿ ಇಲ್ಲದಿದ್ದರೂ ಆದರ ಮುಂದಿನ ೨೦೦–೩೦೦ ವರುಷಗಳಲ್ಲಿ (ಈ ಕೃತ್ರಿಮ ಶಾಸನವು ಬರೆಯಲ್ಪಟ್ಟ ಕಾಲದಲ್ಲಂತು) ಬ್ರಾಹ್ಮಣರಲ್ಲಿ ಕನ್ನಡರೆಂಬ ಒಂದು ವರ್ಗವು ಸಿದ್ಧವಾಗಿ ತ್ತೆಂಬುದು ನಿಶ್ಚಿತ.

ಕರ್ಣಾಟಕರಲ್ಲಿ ಹೊಯ್ಸಳರೆಂಬ ಒಂದು ಪಂಗಡವಿದೆ. ಈ ವರ್ಗದವರಿಗೆ ಹೊಯ್ಸಳರ ಕಾಲದಲ್ಲಿಯೇ ಈ ಹೆಸರು ಪ್ರಾಪ್ತವಾಗಿರಲಿಕ್ಕೆ

* EC. III, Sr. 119. * EC, IV, Hs. 137. † EC. V, Hn. 72.
‡ ಅದೇ 76. § SIE.1934, p. 30.

ಬೇಕೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿದೆ. ಹೊಯ್ಸಳ ಕರ್ಣಾಟಕರು ಮುಖ್ಯವಾಗಿ ಮೈಸೂರ ಸಂಸ್ಥಾನದಲ್ಲಿಯೆ ಈಗಲೂ ಇರುವರು.

ಈ ನಾಡಿನ ಊರುಊರಿಗೆ ಇದ್ದ ಆ ಕಾಲದ ಸಾಮಾನ್ಯ ಬಂಟ (ವೀರ) ರು ಕೂಡ ತಮಗೆ 'ಕನ್ನಡಿಗ ಮೊನೆಯಾಳು' ಗಳು ಎಂದು ಹೇಳಿ ಕೊಳ್ಳುತ್ತಿದ್ದುದನ್ನು ಕಾಣಬಹುದು. ಕ್ರಿ. ಶ. ೧೨೦೦, ೧೨೨೪, ೧೨೪೨, ೧೨೫೭, ಈ ಬೇರೆ ಬೇರೆ ಅವಧಿಯ ಬೇರೆ ಬೇರೆ ಶಾಸನಗಳಲ್ಲಿ 'ಕನ್ನಡಿಗ ಮೊನೆಯಾಳು'ಗಳ ಉಲ್ಲೇಖಗಳು ಕಾಣಿಸಿಕೊಳ್ಳುತ್ತವೆ.* ಶ್ರೇಷ್ಠರು ಆಚರಿಸಿ ದುದನ್ನೆ ಇತರೇ ಜನರು ಅನುಸರಿಸುತ್ತಿದ್ದಾರೆ'ಎಂಬ ಗಾದೆಯ ಸತ್ಯತೆಯನ್ನು ಇಲ್ಲಿ ಮನಗಾಣಬಹುದು. ಮಂತ್ರಿಗಳು, ದಂಡನಾಯಕರು, ಪಂಡಿತರು ತಮಗೆ ಕನ್ನಡಕುಲ ತಿಲಕರೆಂದುಕೊಂಡರು; ಪಾಮರರೂ ಜನಸಾಮಾನ್ಯರೂ ಅದನ್ನೆ ನುಡಿಯಲಾರಂಭಿಸಿದರು, ಇಂತು ಹೊಯ್ಸಳರ ಕಾಲದ ಮೈಸೂರ ಸೀಮೆಯ ವಾತಾವರಣದಲ್ಲಿ 'ಕನ್ನಡ ಕನ್ನಡ 'ವೆಂಬ ಘನಗರ್ಜನೆಯು ತುಂಬಿ ಕೊಂಡುದೆ ಕೇಳಬರುತ್ತಲಿದೆ.

ಇದಕ್ಕೂ ಮೊದಲು ಇಷ್ಟು ಅರ್ಭಟೆಯಿಂದ ಕಿವಿಗೆ ಬೀಳದೆ ಇದ್ದ 'ಕನ್ನಡ', 'ಕನ್ನಡ' ಎಂಬ ಸೊಲ್ಲು ಈಗ ೧೨-೧೩ ನೆಯ ಶತಮಾನದಲ್ಲಿ ವಿಶೇಷ ತೀವ್ರಸ್ವರೂಪದಿಂದ ಕೇಳಿಬರಲಾರಂಭಿಸಿದುದಕ್ಕೆ ಕಾರಣವೇನು? ಹೊಯ್ಸಳರ ಕಾಲಕ್ಕೆ ಇಂತಹ ಆದಾವ ವಿಶೇಷ ಬದಲಾವಣೆಗಳಾದುದರಿಂದ ಜನರಲ್ಲಿ 'ತಾವು ಕನ್ನಡಿಗರು ' ಎಂಬ ಅಭಿಮಾನವು ಇಷ್ಟೊಂದು ಸ್ಫುರಣ ಗೊಂಡಿತು?

ಕಾರಣವಿಲ್ಲದೆ ಕಾರ್ಯವಿಲ್ಲ. ಹೊಯ್ಸಳರ ಕಾಲದಲ್ಲಿ ಅವುದೊ ಒಂದು ಹೊಸ ಗಾಳಿಯು ಬೀಸಿದುದರಿಂದಲೆ ಇಲ್ಲಿಯ ಜನಗಳಲ್ಲಿ ಅಲ್ಲಿಯ ವರೆಗೆ ಸೂಕ್ಷ್ಮರೂಪದಲ್ಲಿದ್ದ ಕನ್ನಡ ಅಭಿಮಾನದ ಕಿಡಿಯು ಪುಟಗೊಂಡು ಹೊತ್ತಿ ಬೆಳಗಲಾರಂಭಿಸಿತೆಂಬುದು ನಿಶ್ಚಿತ. ಹಾಗಾದರೆ ಆ ಗಾಳಿಯು ಆವುದು ? ತಮಿಳರ ಗಾಳಿಯೆ ? ಅಲ್ಲ. ಏಕೆಂದರೆ ಹೊಯ್ಸಳರ ಕಾಲಕ್ಕೆ ಚೋಳ ರಾಜ್ಯವು ತೀರ ಇಳಿತರಕ್ಕೆ ಬಂದಿತ್ತು. ಹೊಯ್ಸಳರೇ ತಮಿಳರ ನಾಡಿನಲ್ಲಿ ನಿಂತು, ಅಲ್ಲಿ ಒಂದು ರಾಜಧಾನಿಯನ್ನು ಸ್ಥಾಪಿಸಿ ಆಳುತ್ತಿದ್ದರು; ಚೋಳ

* EC. IV, Kr. 7, 8, 9, 48.

ರಾಜಪ್ರತಿಷ್ಠಾಪನಾಚಾರ್ಯರೆಂದು ಹೊಯ್ಸಳರಲ್ಲಿ ಕೆಲವು ಅರಸರಿಗೆ ಬಿರುದು-ಗಳು ಮತ್ತೆ! ಆದುದರಿಂದ ತಮಿಳರ ಆಕ್ರಮಣದ ಮೂಲಕ ಇಲ್ಲಿಯ ಜನಗಳಲ್ಲಿ ಕನ್ನಡದ ಅಭಿಮಾನವು ಚೇತರಿಸಿಕೊಂಡಿತೆಂಬ ಮಾತಿಗೆ ಅವಕಾಶವೆ ಇಲ್ಲ.

ಹಾಗಾದರೆ ಇನ್ನಾರು ? ಆ ಕಾಲದ ಶಾಸನಗಳು ಏನು ಹೇಳುತ್ತಿವೆ ? ಕ್ರಿ. ಶ. ೧೨೫೮ರ ಶಾಸನ; ಸೊರಬ ತಾಲ್ಲೂಕಿನದು. ಅದರಲ್ಲಿ ಹೀಗಿದೆ : '**ಆರಿಯ ನಾಯಕರ್** ಮುನಿದು........ತುರುವಂ ಕೊಳುವಲ್ಲಿ (ಎದುರಿಸಿ) ಮಲ್ಲಿಶೆಟ್ಟಿ ಮಡಿದ ' * ಇನ್ನೊಂದು ಶಾಸನ; ಕಾಲ ೧೩೦೪; "ವೀರಬಲ್ಲಾಳ ದೇವರಸರ್ **ವಡುಕ್ಕು ಅರಿಯರ್** ಮೇಲ್ ಎಡುತ್ತುವಿಟ್ಟು."† ಇದರ ಭಾಷೆ ತಮಿಳು. ಆರಿಯರನ್ನು ತಮಿಳ ಸಾಹಿತ್ಯದಲ್ಲಿ ವಡುಕರೆಂದು ಹೇಳುವ ವಾಡಿಕೆಯುಂಟು. ಈ ಕಾಲದ ಶಾಸನಗಳನ್ನು ನೋಡಿದರೆ ಹೊಯ್ಸಳರ ನಾಡಿನಲ್ಲಿ 'ಆರಿಯರ' ಪುಂಡಾಟಿಕೆಯು ಮಿತಿಮೀರಿ ನಡೆದಂತೆ ಕಂಡುಬರುತ್ತದೆ. ದಾವಣಗೆರೆ ತಾಲ್ಲೂಕಿನ ಒಂದು ಶಾಸನ; "ಬಿನ್ನಲಗೆರೆಯ ದನವ ಕೊಂಡ ಹೋಹಳಿ ( ಊರಿನ ) **ಆರೆಯರೊಡನೆ** ಕಾದಿ ಮಡಿದನು." ‡ ಇನ್ನೊಂದು ಬೇರೆ ಸ್ಥಳದ ಶಾಸನ: "**ಆರಿಯರ** ದಳುವಾಯಿ ಕುಚರಸನು ಸೆರೆಸುರಿಗೊಂಡು ಹೋಹಲ್ಲಿ ಹಡಪದ ಮಲ್ಲಯ್ಯನು ಒದಗಿ ಸ್ವರ್ಗವ ಸೂರೆಗೊಂಡನು." (ಕ್ರಿ. ಶ. ೧೨೮೫).+

ಆದುದರಿಂದ ಆ ಕಾಲದಲ್ಲಿ ಕನ್ನಡಿಗರ ಸ್ವಾಭಿಮಾನ ಜಾಗೃತಿಗೆ ಆರಿಯರ ದಾಳಿಗಳೆ ಮುಖ್ಯ ಕಾರಣವೆಂದು ನಿರ್ಧರಿಸಬಹುದಾಗಿದೆ.

ಈ ಆರಿಯರು ಹೊಯ್ಸಳರ ಕಾಲದ (ಎಂದರೆ ೧೧ನೆಯ ಶತಮಾನದ) ಮೊದಲು ಇರಲಿಲ್ಲವೆ? ಈಗ ಥೋಂಕನೆ ಎಲ್ಲಿಂದ ಬಂದರು? ಎಂಬ ಪ್ರಶ್ನೆಯು ತಲೆದೋರುವದು. ಆದರೆ ಈ ಪ್ರಶ್ನೆಗೆ ತಿರುಗಿ ಒಂದು ಹೀಗೆ ಪ್ರಶ್ನೆ ಕೇಳಬಹುದು: ಇವರು ಮೊದಲಿನಿಂದಲೂ ಇದ್ದುದಾದರೆ ಆಗಿನ ಇವರ ಪುಂಡಾಟಿಕೆ ದಾಳಿಗಳ ಉಲ್ಲೇಖಗಳೇಕೆ ಇಲ್ಲ?

ಆರಿಯರೆಂದು ಮರಾಠರಿಗೆ ಹೆಸರು. 'ಮರಾಠ' ಎಂಬುದು ಈಗಣ

* EC. VIII, Sb. 174. † EC. IX, Bn. 53. ‡ EC. XI, Dg. 125.
+ EC. XII, Pg. 48.

ರೂಢಿ. ಆದರೆ ಜ್ಞಾನೇಶ್ವರಿ ಮತ್ತು ಅದಕ್ಕೂ ಪ್ರಾಚೀನ ಪ್ರಾಕೃತ ಗ್ರಂಥಗಳನ್ನು ನೋಡಿದರೆ ಮರಾಠರ ನಿಜವಾದ ಹೆಸರು 'ಮರಹಟ್ಟರು' ಎಂದು ಕಂಡುಬರುವುದು. ಮರಹಟ್ಟರ ಭಾಷೆಯೆ ಮರಹಾಟಿ ಅಥವಾ ಮರ್ಹಾಟಿ. ಈ ಮರ್ಹಾಟಿ ಭಾಷೆಯು ೧೧ನೆಯ ಶತಮಾನದಿಂದ ಮುಂದೆ ತಲೆಯೆತ್ತಲಾರಂಭಿಸಿತೆಂದು ಮಹಾರಾಷ್ಟ್ರದೇಶದ ಸಂಶೋಧಕರೇ ಹೇಳುತ್ತಲಿದ್ದಾರೆ.*

ಶ್ರೀ. ವಿಶ್ವನಾಥ ಕಾಶೀನಾಥ ರಾಜವಾಡೆಯವರು ಮಹಾರಾಷ್ಟ್ರದ ಇತಿಹಾಸ ಸಂಶೋಧನೆಗಾಗಿ ತಮ್ಮ ಬಾಳನ್ನೇ ಮೀಸಲಾಗಿರಿಸಿದವರು. ಅತುಲ ತ್ಯಾಗಿಗಳು. ಮರ್ಹಾಟದೇಶ ಮತ್ತು ಭಾಷೆಗಳನ್ನು ಕುರಿತು ಇವರಲ್ಲಿದ್ದ ಉತ್ಕಟ ಅಭಿಮಾನವನ್ನು ಮೀರಿಸಿದವರು ಸಿಕ್ಕುವುದು ದುರ್ಲಭ. ಇತಿಹಾಸಾಚಾರ್ಯ' ರೆಂದು ಮಹಾರಾಷ್ಟ್ರದಲ್ಲಿ ಇವರ ಖ್ಯಾತಿ. ಇಂತಹರು ಮರಾಠರ ಆರಂಭದ ಸ್ಥಿತಿಯ ಚಿತ್ರವನ್ನು ತಮ್ಮ ಸಂಶೋಧನೆಯಲ್ಲಿ ಸಂಪೂರ್ಣವಾಗಿ ಕಂಡುಕೊಂಡ ಬಳಿಕ, ಅವರ ಎದೆಯ ಕಳವಳದಿಂದ ಹೊರಟ ಉದ್ಗಾರಗಳು ವಿಚಾರಾರ್ಹವಾಗಿವೆ. 'ರಾಧಾಮಾಧವವಿಲಾಸ ಚಂಪೂ' ಎಂಬ ಗ್ರಂಥಕ್ಕೆ ಅವರು ಬರೆದ ವಿಸ್ತಾರವಾದ ಮುನ್ನುಡಿಯು ಬಹಳ ಪ್ರಸಿದ್ಧಿಯನ್ನು ಪಡೆದಿದ್ದು ಅನೇಕ ದೃಷ್ಟಿಯಿಂದ ಓದಲರ್ಹವಾಗಿದೆ. ಸುಮಾರು ೧೨೦೦ಕ್ಕೆ ಮೊದಲು ಮರಾಠರು ಎಲ್ಲಿದ್ದರು? ಎಂಬುದೆ ಅವರ ಹಿರಿದಾದ ಕೊರೆ—ಮುಖ್ಯ ಪ್ರಶ್ನೆ. ಎಷ್ಟು ಪಾತಾಳಗರುಡ ಹಾಕಿ ಹುಡುಕಿದರೂ ಮರಾಠರ ಪೂರ್ವಚರಿತ್ರೆಯು ಒಳ್ಳೆಯ ಸ್ಥಿತಿಯಲ್ಲಿದ್ದುದು ಎಲ್ಲಿಯೂ ಕಾಣ

* ವಿ. ಲ. ಭಾವೆ: ಶಾಲಿವಾಹನ ಶಕದ ಒಂಬತ್ತು ಅಥವಾ ಹತ್ತನೆಯ ಶತಮಾನದ ವರೆಗೆ ಕೇವಲ ಮರಾಠಿಯಲ್ಲಿಯೇ ಬರೆದ ಒಂದು ಲೇಖವೂ ನಮಗೆ ಉಪಲಬ್ಧವಿಲ್ಲ.
—ಮಸಾ. ಪು. ೧೧.

ಪಾಂಗಾರಕರ: ಶಕೆ ೧೨೧೨ರ ವರೆಗೆ ಬೆಳೆದ ಬಳಿಕ ಪ್ರೌಢಸ್ಥಿತಿಯು ಪ್ರಾಪ್ತವಾಗಿ ಜ್ಞಾನೇಶ್ವರಿಯಂತಹ ಸರ್ವಾಂಗಸುಂದರವಾದ ಗ್ರಂಥವು ನಿರ್ಮಾಣವಾಯಿತು.
—ಮವಾಇ. ಪು.೨೪೮.

ರಾ. ಭಿ. ಜೋಶಿ: ವ್ಯವಸ್ಥಿತ ಗ್ರಂಥರಚನೆಗೆ ಆರಂಭವಾದುದು ೧೩ನೆಯ ಶತಕದಲ್ಲಿ.
—ಮಭಾಘ. ಪು. ೩೩.

ಕೃ. ಪಾ. ಕುಲಕರ್ಣಿ: ಆದರಣೀಯ ಗ್ರಂಥರಚನಾಕಾಲವು ೧೨೯೦ ಕ್ರಿ. ಶ.
—ಮಭಾ. ಪು. ೧೪೦.

ಬರದ್ದರಿಂದ ಇತಿಹಾಸಾಚಾರ್ಯ ರಾಜವಾಡೆಯವರು ತೀರ ನಿರಾಶರಾದು ದನ್ನು ಅಲ್ಲಿ ಕಾಣಬಹುದು. ೧೨-೧೩ನೆಯ ಶತಮಾನದ ವರೆಗೆ ಮರಾಠರು ಪೆರವರ ತೊತ್ತಾಗಿ, 'ಎಂದುದನೆ ಎಂದು ಬಾಳಿದರು' ಹಾಯ್ ಮಹಾರಾಷ್ಟ್ರ ! ಎಂಬೀ ಬಗೆಯಾಗಿ ನಿಡಿದಾಗಿ ಉಸುರುಗರೆದಿರುವರು.

ನುಡಿಯ ಮೇಲಿಂದ ನಾಡಿನ ಸ್ಥಿತಿಯನ್ನೂ ನಾಡಿನ ಮೇಲಿಂದ ನುಡಿಯ ಸ್ಥಿತಿಯನ್ನೂ ಸರಿಯಾಗಿ ಅರಿತುಕೊಳ್ಳಬಹುದಾಗಿದೆ. ಅಷ್ಟು ಅವು ಒಂದಕ್ಕೊಂದು ಹೊಂದಿಕೊಂಡಿವೆ. ನಾಡು ಮತ್ತು ಆ ನಾಡಿನ ನುಡಿ ಇವುಗಳಲ್ಲಿ ಒಂದು ಏರಿಕೆಯಲ್ಲಿದ್ದಾಗ ಇನ್ನೊಂದು ಇಳಿಕೆಯಲ್ಲಿರುವುದು ಅಸಂಭವವು. ಇತಿಹಾಸದಲ್ಲಿ ಇವುಗಳ ವ್ಯತ್ಕ್ರಮಸ್ಥಿತಿಯ ಉದಾಹರಣೆಗಳು ಈ ವರೆಗೂ ಬೆಳಕಿಗೆ ಬಂದಿಲ್ಲ.

ಮರಾಠಿಭಾಷೆಯು ತಲೆಯೆತ್ತಿ ಮುಂದೆ ಬರಲಾರಂಭಿಸಿದ್ದುದು ೧೨-೧೩ನೆಯ ಶತಮಾನಗಳಲ್ಲಿ, ಎಂದು ಆ ಭಾಷೆಯ ಅಭಿಮಾನಿಗಳೇ ಒಪ್ಪಿಕೊಳ್ಳುತ್ತಲಿದ್ದಾರೆ. ಆದುದರಿಂದ ೧೨-೧೩ನೆಯ ಶತಮಾನವೇ ಮರಾಠರ ಉದಯ ಕಾಲವೆಂದು ನಿಶ್ಚಿತವಾಗಿ ಹೇಳಬಹುದಾಗಿದೆ.

ಹೊಯ್ಸಳರ ಕಾಲಕ್ಕೆ ಹೊಸ ಪರಿಸ್ಥಿತಿಯು ನಿರ್ಮಾಣವಾಯ್ತು. ಸಾತವಾಹನರು, ಚಲುಕ್ಯರು (ಬದಾಮಿ), ಮತ್ತು ರಾಷ್ಟ್ರಕೂಟರ ಕಾಲಕ್ಕೆ ಇಲ್ಲದೆ ಇದ್ದ ಹೊಸ ತೊಡಕುಗಳು ತಲೆದೋರಿದುವು. ಮರಾಠಿಯಂತೆ ತೆಲಗು ಭಾಷೆಯೂ ಚಿಗಿತು ಕಣ್ಣಿಗೆ ಬೀಳಲಾರಂಭಿಸಿದುದು ಈ ಸುಮಾರಿಗೇ. ಕ್ರಿ. ಶ. ೧೨-೧೩ನೆಯ ಶತಮಾನದ ವರೆಗೆ ಮರಾಠಿ ಅಥವಾ ತೆಲುಗು ನುಡಿಗಳು ಇನ್ನೂ ಬಾಲ್ಯಾವಸ್ಥೆಯಲ್ಲಿದ್ದುದರಿಂದ ಅವು ಇದಕ್ಕೂ ಹಿಂದಿನ ಕಾಲದಲ್ಲಿ ಕನ್ನಡವನ್ನು ಸರಿಗಟ್ಟಿ ನಿಲ್ಲುವ ಮಾತೇ ಇದ್ದಿಲ್ಲ. ಆಗ ದಕ್ಷಿಣಾಪಥದಲ್ಲಿ (ಎಂದರೆ ವಿಂಧ್ಯ-ನೀಲಗಿರಿಗಳ ನಡುವಣ ನಾಡಿನಲ್ಲಿ) ಕನ್ನಡವೇ ಪ್ರಮುಖ ಜನಸಾಮಾನ್ಯರ ಮುಖ್ಯ ಭಾಷೆಯಾಗಿದ್ದಿತು. ಸಂಸ್ಕೃತ ಅಥವಾ ಪ್ರಾಕೃತಗಳು ಮೇಲಿನ ವರ್ಗದ ಜನರ ತಲೆಯ ಮೇಲೆ ಕುಳಿತು ಕೊಂಡಿದ್ದರೂ ಜನಸಾಮಾನ್ಯರ ಮೇಲೆ ಆದರ ವಿಶೇಷ ಪರಿಣಾಮವಾಗಿರಲಿಲ್ಲ. ಆದುದರಿಂದ ೧೨-೧೩ನೆಯ ಶತಕದಲ್ಲಿ ಮರಾಠಿ ಮತ್ತು ತೆಲುಗುಗಳು ತಲೆಯೆತ್ತಿದಾಗ ಕನ್ನಡಕ್ಕೆ ಬಂದಂತಹ ಪ್ರತ್ಯಕ್ಷವಾದ ಗಂಡಾಂತರವು ಅದಕ್ಕೂ ಮೊದಲು

ಉಂಟಾಗಿರಲಿಲ್ಲ.

ಚಲುಕ್ಯರು ಮತ್ತು ರಾಷ್ಟ್ರಕೂಟರ ಕಾಲಕ್ಕೆ ಕನ್ನಡಿಗರ ಕಡುಹಗೆಗಳೆಂದರೆ ತಮಿಳರು. ನಮ್ಮಲ್ಲಿ ಪ್ರಚಾರದಲ್ಲಿರುವ ತಮಿಳ (ತಿಗುಳ) ರ ವಿಷಯಕ ಗಾದೆಯ ಮಾತುಗಳ ಮೇಲಿಂದ ಹಿಂದಕ್ಕೆ ಇವೆರಡೂ ಜನಾಂಗಗಳಲ್ಲಿದ್ದ ಮನಸ್ಥಿತಿಯ ಕೆಲವೊಂದು ಕಲ್ಪನೆಯಾದರೂ ಉಂಟಾಗದೆ ಇರದು. ಕನ್ನಡಿಗರಲ್ಲಿ ಇಂತಹ ವೈಷಮ್ಯವು ತೆಲುಗರ ಬಗೆಗೆ ಅಷ್ಟು ಕಂಡುಬರುವದಿಲ್ಲ; ಮರಾಠರ ವಿಷಯಕ್ಕಂತೂ ಅನೇಕ ದಿನಗಳವರೆಗೆ ಕೇವಲ ಆತ್ಮೀಯ ಭಾವವಿದ್ದುದೇ ಕಾಣಬರುತ್ತದೆ. 'ಕನ್ನಡ ಕಸ್ತೂರಿ' ಎಂಬ ನಾಣ್ಣುಡಿಯು ಸ್ವಭಾಷಾಭಿಮಾನವನ್ನು ವ್ಯಕ್ತಪಡಿಸುತ್ತಲಿದೆ; 'ಅರವು ಅಧ್ವಾನ' ಎಂಬುದು ತಮಿಳರ ವಿಷಯದಲ್ಲಿರುವ ಅನಾದರವನ್ನು ಸೂಚಿಸುವುದು; 'ಆರೆ ಅರಸು;' ತೆಲುಗು ತೇಟ (ಜೇನು; ಸವಿ); ಎಂಬ ಈ ಗಾದೆಗಳು ಕನ್ನಡಿಗರಿಗೆ ಮರಾಠಿ ಮತ್ತು ತೆಲುಗಿನ ವಿಷಯಕ್ಕಿರುವ ಪಕ್ಷಪಾತವನ್ನೇ ಹೊರಗೆಡಹುವುದಿಲ್ಲವೆ?

ಚಲುಕ್ಯರು ಮತ್ತು ರಾಷ್ಟ್ರಕೂಟರ ಕಾಲದ ಸ್ಥಿತಿಯೂ ಹಾಗೆ ಇತ್ತು. ತಮಿಳರು ಕಾವೇರಿಯ ಉತ್ತರಕ್ಕೆ ತಲೆಯೆತ್ತದಂತೆ ಅವರನ್ನು ಬಗ್ಗು ಬಡೆಯುವದೇ ತಮ್ಮ ಹಿರಿಗುರಿಯೆಂದು ಈ ರಾಜರ ನಂಬುಗೆಯಾಗಿತ್ತು. ತೆಲುಗಿನಿಂದ—ಅದರಲ್ಲಿಯೂ ಮರಾಠಿಯಿಂದ ಅವರು ಎಂದೂ ವಿರೋಧವನ್ನು ನಿರೀಕ್ಷಿಸಿರಲಿಲ್ಲ. ಆದುದರಿಂದ ಹೊಯ್ಸಳರ ಕಾಲಕ್ಕೆ ಫಕ್ಕನೆ ಉಂಟಾದ ಅನಪೇಕ್ಷಿತ ಗಂಡಾಂತರವಿದು. ಆದಕಾರಣ ಚಲುಕ್ಯರ ಮತ್ತು ರಾಷ್ಟ್ರಕೂಟರ ಕಾಲಕ್ಕೆ ಇದ್ದ ತಮಿಳರ ಕುತ್ತಿಗಿಂತ ಹೊಯ್ಸಳರ ಕಾಲದಿಂದ ಉಂಟಾದ ಮರಾಠಿ ಮತ್ತು ತೆಲುಗರ ತೊಡಕಿನಸ್ವರೂಪವು ತೀರಭಿನ್ನವಾಗಿದೆ. ಕನ್ನಡಿಗರು ತಮಿಳರನ್ನು ತಮ್ಮವರೆಂದು ಎಂದೂ ಭಾವಿಸಿರಲಿಲ್ಲ.* ಆದುದರಿಂದ ಅವರನ್ನು ಎದುರಿಸುವದು ಅಷ್ಟು ಕಠಿಣವಾಗಲಿಲ್ಲ. ಆದರೆ ಯಾರನ್ನು ಎದುರಾಳಿಗಳೆಂದು ಭಾವಿಸದೆ, ತಮ್ಮ ಊಳಿಗದವರು, ತಮ್ಮವರು ಎಂದು ಎಣಿಸಿ ಕನ್ನಡಿಗರು ಯಾರಿಗೆ ಮನೆಯಲ್ಲಿ ಬರಮಾಡಿಕೊಂಡರೊ, ಯಾರೊ

---

* ತಮಿಳರೂ ಕನ್ನಡಿಗರನ್ನು ತಮ್ಮವರೆಂದೂ ಎಂದು ಎಣಿಸಿರಲಿಲ್ಲ. ವಡುಕರು (ಕನ್ನಡಿಗರು) ಕಳ್ಳರು, ಸುಲಿಗೆಗಾರರೆಂದು ತಮಿಳ ಪ್ರಾಚೀನ ಸಾಹಿತ್ಯದಲ್ಲಿ ವರ್ಣನೆಗಳಿವೆ. —SCSI. p. 24-25, 34-35 etc.

ಡನೆ ಬೆರೆತುಕೊಂಡರೊ, ಕೂಡಿ ಬೆಳೆದರೊ ಅವರಿಂದ ಆದ ಆಘಾತವು ಕನ್ನಡಕ್ಕೆ ಮರ್ಮಾಘಾತವೇ ಆಯ್ತು; ಅದನ್ನು ತಡೆದುಕೊಳ್ಳುವದಕ್ಕೆ ಕನ್ನಡಿಗರು ಇನ್ನೂ ಸಮರ್ಥರಾಗಿಲ್ಲ.

ತೆಲುಗು ಕೊನರಿಕೊಬ್ಬಿದುದು ಕನ್ನಡಿಗರ ಆಶ್ರಯದಿಂದಲೆ ಎಂಬುದನ್ನು ಕೇಳಿ ಸೋಜಿಗಗೊಳ್ಳಲು ಕಾರಣವಿಲ್ಲ. ಪೂರ್ವಚಲುಕ್ಯರ ರಾಜಮಂದಿರದಲ್ಲಿ ತೆಲುಗಿನ ಆದಿಕವಿಗಳು ಪೋಷಿತರಾದರು. ಈ ಚಲುಕ್ಯಮನೆತನದ ಮೂಲ ಸಂಸ್ಥಾಪಕನು ತಿರುಳ್ಗನ್ನಡದ ಬಾದಾಮಿಯವನು. ೨ನೆಯ ಪುಲಿಕೇಶಿಯ ತಮ್ಮ; ವಿಷ್ಣುವರ್ಧನನು. ಇದು ಕೆಲರಿಗೆ ದೂರಾನ್ವಯವೆನಿಸಿದರೆ, ಇನ್ನೊಂದು ಸಂಗತಿಯು ಹೀಗಿದೆ: ತೆಲುಗಿನ ಆದಿಕವಿಯೆನಿಸಿದ ನನ್ನೆಯಭಟ್ಟನಿಗೆ (೧೦೪೦) ತೆಲುಗಿನಲ್ಲಿ ಕಾವ್ಯಬರೆಯಲು ಪ್ರೋತ್ಸಾಹಿಸಿದವನೂ, ಆತನು ಬರೆದುದನ್ನು ತಿದ್ದಿಕೊಟ್ಟವನೂ ಯಾರು? ನಾರಾಯಣಭಟ್ಟನೆಂಬ ಒಬ್ಬ ಕನ್ನಡ ಕವಿಯು!* ಮುಂದೆ ತೆಲುಗು ಸಾಹಿತ್ಯವು ಪ್ರವರ್ಧಮಾನಸ್ಥಿತಿಗೆ ಬಂದುದು ಯಾವಾಗ ? ಕರ್ಣಾಟಸಿಂಹಾಸನಾಧೀಶರೂ, ಕನ್ನಡರಾಜ್ಯರಮಾರಮಣರೂ ಆದ ವಿಜಯನಗರದ ನರಪತಿ ಕೃಷ್ಣದೇವರಾಯನೆ ಮೊದಲಾದ ಮಹಾರಾಯರ ಎಣೆಯಿಲ್ಲದ ನೆರವು ದೊರೆತಾಗ. ಪ್ರಸ್ತುತ, ವಿಜಯನಗರದ ಉದಾಹರಣವು ಅನಾವಶ್ಯಕವಾಗಿದ್ದರೂ ತೆಲುಗಿನ ವಿಷಯಕ್ಕೆ ಕನ್ನಡಿಗರಲ್ಲಿ ಅಷ್ಟು ಪರಕೀಯ ಭಾವವು ತೀವ್ರವಾಗಿದ್ದಿಲ್ಲವೆಂಬ ಮಾತಿನ ನಿದರ್ಶನಕ್ಕಾಗಿ ಹೇಳಿದ್ದಾಯಿತು; ಅಷ್ಟೆ.

ತೆಲುಗುಭಾಷೆಯನ್ನು ಅನೇಕ ಕನ್ನಡಿಗರು ಒಲುವಿನಿಂದ ಕಲಿತ ಕಾರಣವೇನಿರಬಹುದು ? ಇಂದು ಆ ಕಾರಣಗಳು ಸ್ಪಷ್ಟವಾಗಿ ಗೊತ್ತಾಗುವುದು ಕಠಿಣವಾಗಿದೆ. ಆದರೂ ಆ ಕಾಲದ ಅನೇಕಾನೇಕ ಪರಿವರ್ತನಗಳ ಹಿಂದಣ ಮನೋಭೂಮಿಕೆಯನ್ನು ವಿಂಗಡಿಸಿ ನೋಡಿದಲ್ಲಿ ಇದರ ಕಾರ್ಯಕಾರಣಭಾವವನ್ನು ಕಂಡುಹಿಡಿಯುವುದು ಅಷ್ಟು ಗಡಚಾಗಿಲ್ಲ. ತೆಲುಗರಲ್ಲಿ ಅತುಲ ಬುದ್ಧಿವಂತರೂ ವಿದ್ಯಾವಂತರೂ ಎಂದು ಹೆಸರುಗೊಂಡಿರುವ ಸಿ. ಆರ್. ರೆಡ್ಡಿಯವರು ಈ ವಿಷಯಕ್ಕೆ ಹೇಳಿರುವ ಮಾತುಗಳು ಬಹಳ ಹುರುಳುಳ್ಳವುಗಳಾಗಿವೆ.‡ ವೆಂಗಿನಾಡಿನಲ್ಲಿ ಕನ್ನಡ ಜೈನಭಾರತಗಳನ್ನು ಓದಿ ವಿಪರೀತ ಪರಿಣಾ

* TI. p. 44; ಕಚ. I ಪು. ೬೪; ಕಸಾಪ. VII ಪು. ೧೬೬–೧೬೯. ‡ TI Forward.

ಮವಾಗಿತ್ತು. ಜನಸಾಮಾನ್ಯರ ಮನಸ್ಸನ್ನು ಜೈನಧರ್ಮದತ್ತಣಿಂದ ತಿರುಗಿಸಿ ವೈದಿಕಮಾರ್ಗದ ಕಡೆಗೆ ಎಳೆದುಕೊಳ್ಳಲು ನನ್ನಯಭಟ್ಟನು ಗೆಳೆಯನಾದ ನಾರಾಯಣಭಟ್ಟನ ಪ್ರೇರಣೆಯಿಂದ ತೆಲುಗುಭಾರತವನ್ನು ರಚಿಸಿದನು,ಎಂದು ಶ್ರೀಮಾನ್ ರಡ್ಡಿಯವರು ಹೇಳುತ್ತಾರೆ. ಕನ್ನಡಕವಿಯಾದ ನಾರಾಯಣ ಭಟ್ಟನಂತಹನೂ ತೆಲುಗುಭಾಷೆಯನ್ನು ಏಕೆ ಪ್ರೋತ್ಸಾಹಿಸಿರಬೇಕೆಂಬುದರ ಮೇಲೆ ಶ್ರೀಮಾನ್ ರಡ್ಡಿಯವರ ಮಾತಿನಿಂದ ಚೆನ್ನಾಗಿಯೆ ಬೆಳಕು ಬೀಳುತ್ತದೆ. ಕನ್ನಡಭಾಷೆಯಲ್ಲಿ ಅವೈದಿಕಮಾರ್ಗಾವಲಂಬಿಗಳ ಸಾಹಿತ್ಯವೇ ಹೆಚ್ಚು. ವೈದಿಕಧರ್ಮದ ಅಭಿಮಾನಿಗಳೂ ವೈದಿಕಧರ್ಮದ ಅಭಿವೃದ್ಧಿಯಾಗಬೇಕೆನ್ನುವವರೂ ಕನ್ನಡದ ಕಡೆಗೆ ಅಷ್ಟೊಂದು ಆತ್ಮೀಯ ಭಾವದಿಂದ ನೋಡದೆ ಇರುವುದು ಸ್ವಾಭಾವಿಕವಾಗಿದೆ. ಅಂತು ಕನ್ನಡಿಗರಲ್ಲಿ ತೆಲುಗು ಭಾಷೆಗೆ ಹೇಗೆ ಪ್ರವೇಶವು ದೊರೆತಿರಬೇಕೆಂಬುದು ಇದರಿಂದ ಕೆಲಮಟ್ಟಿಗಾದರೂ ಸ್ಪಷ್ಟವಾಗುತ್ತಲಿದೆ; ಇಂತಹ ಏನೊಂದು ಕಾರಣದಿಂದಲೆ ಕನ್ನಡಿಗರು ತೆಲುಗನ್ನು ತಿರಸ್ಕಾರಬುದ್ಧಿಯಿಂದ ನೋಡದೆ 'ತೆಲುಗು ತೆಂಟೆ' ಎಂಬ ಗಾದೆಯೂ ತಲೆದೋರಿರಬೇಕು.

ತೆಲುಗಿಗಿಂತಲೂ ಮರಾಠಿಯ ಬೇರುಗಳು ಕನ್ನಡದಲ್ಲಿ ಬಹಳ ಆಳದವರೆಗೆ ಹೋಗಿವೆ. ಕನ್ನಡಿಗರು ಮರಾಠಿಗೆ 'ಆರಿಯ' ಮಾತು ಅಥವಾ 'ಆರೇ' ಮಾತು ಎಂದು ಕರೆಯುವುದು ವಾಡಿಕೆ. ತಮಿಳ ಪ್ರಾಚೀನಸಾಹಿತ್ಯದಲ್ಲಿಯೂ 'ಆರಿಯರ್' ಎಂದೇ ಉಲ್ಲೇಖಗಳು ದೊರೆಯುತ್ತವೆ. ಆರಿಯ (ಆರೆ) ಎಂಬುದು 'ಆರ್ಯ' ಶಬ್ದದ ತದ್ಭವವು. ಮರಾಠಿಯು ಆರ್ಯರ ಮಾತು, ಆರಿಯ (ಆರೆ) ಮಾತು, ಎಂದೆನ್ನುವುದರಿಂದಲೆ ಈ ಭಾಷೆಯ ವಿಷಯದಲ್ಲಿ ಕನ್ನಡಿಗರಿಗಿದ್ದ ಗೌರವವು ವ್ಯಕ್ತವಾಗುತ್ತಲಿದೆ; ಸಂಸ್ಕೃತ–ಪ್ರಾಕೃತಗಳ ಸಾಲಿನಲ್ಲಿಯೇ ಮರಾಠಿ (ಆರೆ) ಮಾತಿಗೂ ಸ್ಥಾನವು ದೊರೆತಿದ್ದಿತು. ಆದುದರಿಂದ ಆರಿಯ ಮಾತು ಬರುವುದು ಒಂದು ಭೂಷಣವೆಂಬ ಭಾವನೆಯೆ ನಮ್ಮ ಜನಗಳಲ್ಲಿ ಹಲವು ಕಾಲದಿಂದಲೂ ಮನೆಮಾಡಿಕೊಂಡಿದ್ದಿತೆಂದು ಹೇಳಬಹುದಾಗಿದೆ. ಆರಿಯ ಮಾತಾಡುವವನು ಆರಿಯ, ಎಂಬ ವಿಚಾರವು ದೃಢವಾಗಿದ್ದ ಈ ಕಾಲದಲ್ಲಿ ಆರಿಯ ಮಾತು ಬರುತ್ತಲಿದ್ದ ಅನೇಕಾನೇಕ ಕನ್ನಡಿಗರು ಆರಿಯರಾಗಿ ಎಣಿಸಲ್ಪಟ್ಟಿರುವುದು ಸಹಜ. (ಕುರುಬರು,

ಗೌಳಿಗಳು, ಕಮ್ಮಾರರು, ಕುಂಬಾರರು, ವೈಶ್ಯರು, ಬಣಜಿಗರು, ಬ್ರಾಹ್ಮಣರು ಮೊದ ಲಾದವರಲ್ಲಿ ಒಂದೇ ಕುಲದವರಾಗಿದ್ದರೂ 'ಅರೇ', 'ತೆಲುಗು' ಮತ್ತು 'ಕನ್ನಡ' ಎಂಬ ಪಂಗಡಗಳಾಗಿದ್ದುದು ಕಂಡುಬರುವುದಕ್ಕೆ ಇದೇ ಕಾರಣವು.

ಆರಿಯ ಮತ್ತು ಕನ್ನಡಗಳ ತೊಡಕಿನ ಸಂಬಂಧಸೂತ್ರಗಳ ಸರಿಯಾದ ತಿಳುವಳಿಕೆಯು ಇಲ್ಲದಿರುವ ಅನೇಕರಿಗೆ, ಪ್ರಾಚೀನಕಾಲದ ಕೆಲವೊಂದು ಐತಿಹಾಸಿಕ ಘಟನೆಗಳ ಅರ್ಥವೆ ಆಗದೆ ಅನರ್ಥ ಮಾಡಿದ್ದಾರೆ! ವಡುಕರು ಮತ್ತು ಆರಿಯರ ಕದಲುಬದಲು ತಮಿಳ ಇತಿಹಾಸಕಾರರಿಗೆ; ಕ್ರಿ.ಶ. ೧೯೦ರ ಸುಮಾರಿಗೆ ತಮಿಳ ರಾಜರು ಆರಿಯರೊಡನೆ ಕಾದಿದಂತೆ ವರ್ಣನೆಗಳಿವೆ. ‡ ಆರಿಯ ಮಾತು ಮತ್ತು ಆರಿಯ ಜನಗಳು ಕ್ರಿ. ಶ. ೧೦ನೆಯ ಶತಮಾನ ದಿಂದ ಮುಂದೆ ಸ್ವತಂತ್ರರೀತಿಯಿಂದ ತಲೆಯೆತ್ತಿದರೆಂದು ಮಹಾರಾಷ್ಟ್ರ ವಿದ್ವಾಂಸರೆ ಒಪ್ಪಿಕೊಳ್ಳುತ್ತಿರುವಾಗ ಕ್ರಿ. ಶ. ಆರಂಭದ ಶತಮಾನದಲ್ಲಿ ತಮಿ ಳರೊಡನೆ ಕಾದಲು ಎಲ್ಲಿಯ ಆರಿಯರು ಬರಬೇಕು ? ಕ್ರಿ. ಶ. ದ ೧೦ನೆಯ ಶತಮಾನದಿಂದ ಮುಂದೆ ದಕ್ಷಿಣಾಪಥದಲ್ಲಿ ಕನ್ನಡ (ಕಾನಡಿಮಂಡಳ) ಮತ್ತು ಮರಾಠಿ (ಮರಾಠಿಮಂಡಳ) ಎಂಬ ಎರಡು ಸ್ಪಷ್ಟವಾದ ಪಂಗಡಗಳು ಆದು ವೆಂದೂ ಅದಕ್ಕೂ ಮೊದಲು ಇವೆರಡೂ ಜನಗಳು ಕೂಡಿಯೆ ಇದ್ದರೆಂದೂ ಸಾಮಾನ್ಯವಾಗಿ ನಿಶ್ಚಿತವಾಗಿದೆ. ಶ್ರೀ. ಭಾಗವತ ಮತ್ತು ಶ್ರೀ. ಪಾಂಗಾರ ಕರ* ರೆಂಬ ಮಹಾರಾಷ್ಟ್ರ ವಿದ್ವಾಂಸರು ಇದೇ ಸಿದ್ಧಾಂತವನ್ನು ೨೦--೩೦ ವರ್ಷಗಳ ಹಿಂದೆಯೇ ಪ್ರಕಟಿಸಿದ್ದಾರೆ. ಆದುದರಿಂದ ವಡುಕರನ್ನೇ ಆರಿಯ ರೆಂದು ತಮಿಳರು ಆ ಕಾಲಕ್ಕೆ ಭಾವಿಸಿರಬೇಕು.

ಮಹಾರಾಷ್ಟ್ರರಿಗೆ ಉಂಟಾಗಿರುವ ದಿಗಿಲು ಇನ್ನೊಂದು! ಮರಾಠಿ ಭಾಷೆಯಲ್ಲಿ ಪ್ರಾಚೀನಕಾಲದಲ್ಲಿ ಬರೆಯಲ್ಪಟ್ಟ ಮೊಟ್ಟಮೊದಲನೆಯ ವಾಕ್ಯವು ದೊರೆಯುವದು ಎಲ್ಲಿ? ಕರ್ಣಾಟದ ಹೃದಯಾಂತರಾಳದಲ್ಲಿ ಮೈಸೂರ ಸೀಮೆಯಲ್ಲಿ! ಶ್ರವಣಬೆಳುಗೊಳದ ಗೋಮಟೇಶ್ವರನ ಪ್ರಾಕಾರದಲ್ಲಿ! 'ಚಾವುಂಡರಾಯೇ ಕರವಿಯಲೆ', ಎಂಬುದೇ ಆ ಮಹಾವಾಕ್ಯ. "ಕ್ರಿ. ಶ. ೧೦ನೆಯ ಶತಮಾನದಲ್ಲಿ ಈ ಮರಾಠಿ ವಾಕ್ಯವುಳ್ಳ ಶಾಸನವು ಬರೆಯಲ್ಪಟ್ಟಿರು ವುದರಿಂದ ಆ ಸುಮಾರಿಗೆ ಶ್ರವಣಬೆಳುಗೊಳದ ಸುತ್ತಲಿನ ಸೀಮೆಯಲ್ಲಿಆರಿಯ

* ಗ್ರಂಥಮಾಲಾ: ಮರಾಠೀಭಾಷೇಚೀ ಸ್ಥಿತಿ ಪು. ೭. ‡ HISI. p. 15.

ಮಾತಿನವರು ಸಾಕಷ್ಟಿರಬೇಕೆಂದು ನಿಶ್ಚಿತ. ಆದುದರಿಂದ ಶ್ರವಣಬೆಳಗೊಳದ ವರೆಗೂ ಮಹಾರಾಷ್ಟ್ರದೇಶವು ಹಬ್ಬಿಕೊಂಡಿದ್ದಿತು;" ಎಂದು ಒಂದು ಪ್ರತಿಪಾದನೆ!‡ ಅವರ ಈ ಅಭಿಪ್ರಾಯಕ್ಕೆ ಪುಷ್ಟಿಯನ್ನೀವ ಇನ್ನೂ ಒಂದು ಬಲವಾದ ಆಧಾರವು ಅವರ ಗಮನಕ್ಕೆ ಬಂದಿಲ್ಲವೆಂದು ತೋರುತ್ತದೆ. ಮಹಾರಾಷ್ಟ್ರದವರಿಗೆ ಈ ಆಧಾರವು ದೊರೆತರೆ ಕರ್ಣಾಟದ ದುರ್ದೈವಕ್ಕೆ ಕೊನೆಮೊದಲು ಉಳಿಯಲಿಕ್ಕಿಲ್ಲ! 'ಮೈಸೂರ' ಎಂಬ ಹೆಸರೇ ಅಚ್ಚ ಆರಿಯ ಮಾತಿನದಲ್ಲವೆ?'ಮಹಿಷ' ಎಂಬ ಸಂಸ್ಕೃತಪದವು'ಮೈಸ' ಎಂಥಾಗುವದು ಆರಿಯ ಮಾತಿನಲ್ಲಿಯೆ. ಆದಕಾರಣ ಮೈಸೂರ ವರೆಗೂ ಮರಾಠಿ ಹಬ್ಬಿದ್ದಿತೆಂದು ಸಿದ್ಧವಾಗವದಿಲ್ಲವೆ? ಎಂದಬಳಿಕ ಇನ್ನೆಲ್ಲಿಯ ಕರ್ಣಾಟಕ? ಮರಾಠಿಯ ಮೊಟ್ಟಮೊದಲನೆಯ ವಾಕ್ಯವು ಶ್ರವಣಬೆಳುಗೊಳದಲ್ಲಿ(ಮೈಸೂರ) ಹಾಗೂ ಮರಾಠಿ ಮೊದಲನೆಯ ಪದ್ಯವು ಕಲ್ಯಾಣದ ಚಲುಕ್ಯರ ಚಕ್ರವರ್ತಿ ಭೂಲೋಕಮಲ್ಲನ ಮಾನಸೋಲ್ಲಾಸದಲ್ಲಿ! ಆದುದರಿಂದ ಕರ್ಣಾಟವೇ ಮರಾಠಿಯ ಜನ್ಮಭೂಮಿ, ಎಂಬುದು ಸತ್ಯ. ಅತಏವ ಮೈಸೂರವರೆಗೆಲ್ಲವೂ ಮಹಾರಾಷ್ಟ್ರವೇ; ಸುಮ್ಮನೆ ಜನಗಳು ಇನ್ನೂ ಕನ್ನಡ ಮಾತನಾಡುತ್ತಿರುವಂತೆ ಕೇಳಿಸುವುದು, ಅಷ್ಟೆ.

ಆ ಕನ್ನಡವನ್ನೂ ಸ್ವಲ್ಪ ಪೃಥಕ್ಕರಿಸಿ ನೋಡಿದರೆ ಅದರಲ್ಲಿ ಕಂಡು ಬರುವುದಾದರೂ ಏನು? ಆರೇ; ಆರೆ; ಆರೇ, ಬೇಕಾದರೆ ಪ್ರಾಕೃತ ಎನ್ನಿ ಅದಕ್ಕೆ! ಹಳಗನ್ನಡ ಕವಿಗಳಿಗೆ 'ಪರಿಮಳ', 'ಕಮಳ', ಕಾಳ' (ಕಾಲ) 'ತಾಳ' ಎಂದು ಹೇಳುವ ಚಟವೆ ಅಂಟಿಕೊಂಡಿದ್ದಿತು. ಪಂಪನ ದ್ರೋಣಾಚಾರ್ಯರು 'ಅರೆ, ಹೋಯ.......' ಎಂದು ಅರ್ಜುನನನ್ನು ಹೊಗಳುತ್ತಾರೆ! (೨-೬೦). ಹರಿಹರನು ಶೈವ ವೀರ; ಕೆಚ್ಚ ಕನ್ನಡಿಗ; ಕಣ್ಣಪ್ಪನ ರಗಳೆಯಲ್ಲಿ 'ಬೈಲ' ಎಂದು ಎತ್ತಿಗೆ ಹೇಳುತ್ತಾನೆ. ಅವನ ಶಿಷ್ಯ ರಾಘವಾಂಕನು 'ಕಂಟೆಳಿಸು' (ಕಂಟಾಳಣೇ), 'ಗಾಣ' (ಗಾನ) ಶಬ್ದಗಳನ್ನು ಬಳಸುತ್ತಾನೆ. ಹೊಯ್ಸಳರ ಒಡ್ಡೋಲಗದಲ್ಲಿದ್ದ ಜನ್ನನು (೧೨೦೯) ಅನಂತ

‡ ಇದರೊಡನೆ 'ಸಹ್ಯಾದ್ರಿ' (೧೯೩೬ ನವೆಂಬರ ಮತ್ತು ೧೯೩೮ ಮಾರ್ಚ) ಮಾಸ ಪತ್ರಿಕೆಯಲ್ಲಿ ಬಂದ 'ಮರಾಠೀಚಾ ದಕ್ಷಿಣೇತೀಲ ಪ್ರಸಾರ' ಎಂಬಲೇಖನಗಳನ್ನು ಓದಿ ಅದರ ಬಲವನ್ನೂ ತಿಳಿದುಕೊಳ್ಳಬೇಕು.

ನಾಥ ಪುರಾಣದ ಒಬ್ಬ ಪ್ರತಿಹಾರಿಯ ಬಾಯಲ್ಲಿ 'ಊಠಿ, ಉಠಿ ಮಾಗಾ ಬೈಸ ಜಾ ತೂ ಹಳೂ. . . .' ಎಂಬ ಮಾತುಗಳನ್ನು ಹಾಕಿದ್ದಾನೆ! ಇದರಿಂದ ಹೊಯ್ಸಳರ ಒಡ್ಡೋಲಗದ ಪ್ರತಿಹಾರಿಗಳು ಈ ಬಗೆಯ ಮಾತು ಗಳಿಂದಲೆ ಯಾವಾಗಲು ಉಗ್ಘಡಿಸುತ್ತಿದ್ದರೆಂದು ಊಹಿಸಬಹುದೆ? ಕುಮಾರ ವ್ಯಾಸನು ಇಂದು ಕನ್ನಡಿಗರ ಅಚ್ಚುಮೆಚ್ಚಿನ ಕವಿಯು. ಕನ್ನಡದ ದೇಸಿ ನುಡಿಗಳಿಗೆ ಕುಮಾರವ್ಯಾಸನ ಭಾರತವು ಆಗರ. ಆದರೆ ಇವನು ಸೂರೆ ಮಾಡಿದಷ್ಟು ಪ್ರಾಕೃತ ಶಬ್ದಗಳು ಬೆರೊಬ್ಬರಲ್ಲಿ ದೊರೆಯುವುದು ದುರ್ಲಭ. ಕುಮಾರ ವ್ಯಾಸನು ಬ್ರಾಹ್ಮಣನು. ಅದರಿಂದ ಆತನ ಭಾಷೆಯಲ್ಲಿ ತಿಳಿಗನ್ನಡ ದೊಡನೆ ಪ್ರಾಕೃತ (ಆರಿಯ) ಮಾತುಗಳೂ ಬೆರೆತುಕೊಂಡಿದ್ದರೆ ಅದರಲ್ಲ ವಿಶೇಷವೇನೂ ಇಲ್ಲವೆನ್ನಬಹುದು. ಹಾಗಾದರೆ ಕನಕದಾಸನನ್ನು ನೋಡಿ! ಅವನು 'ಸೋಳ್', 'ಬತ್ತೀಸ', 'ತೆತ್ತೀಸ', 'ಚೌಸಷ್ಟಿ' ಎಂದು ಮುಂತಾಗಿ ಆರೆಮಾತಿನಿಂದಲೆ ಅಂಕಿಗಳನ್ನೂ ಹೇಳುತ್ತಾನೆ! 'ಟೋಪಿ,' 'ಬಿಡಿಯ'(ಬಿಡೇ), 'ವೋೀರ', 'ಮಂಜರ', ಎಂದು ಮುಂತಾದ ಚೊಕ್ಕ ಮರಾಠಿ ಶಬ್ದಗಳನ್ನು ಬೇಕಾದಂತೆ ಬಳಿಸಿದ್ದಾನೆ.* ಉಳಿದ ದಾಸರ ಪದಗಳಲ್ಲಿಯೂ ಇಂತಹ ಮಾತುಗಳು ಅಲ್ಲಿ ಇಲ್ಲಿ ಕಾಣಿಸಿಕೊಳ್ಳದೆ ಇಲ್ಲ. ಶ್ರೀ. ಜಗನ್ನಾಥರಾಯರು ಹರಿಕಥಾಮೃತಸಾರದಲ್ಲಿ ಕನ್ನಡಕ್ಕೆ 'ಪ್ರಾಕೃತ' ಭಾಷೆಯೆಂದಿರುವರು.* ಆದುದರಿಂದ ಕನ್ನಡಭಾಷೆಯೆಂದರೆ ಅದು ಮರಾಠಿಯೇ ಎಂದು ಹೇಳುವದು ಎಷ್ಟು ಸಮಂಜಸವೋ, ಅಷ್ಟೇಶ್ರವಣಬೆಳಗೊಳು — ಮೈಸೂರವರೆಗೂ ಮಹಾರಾಷ್ಟ್ರ ವಿದ್ದಿತೆಂಬುವುದೂ ಸಮಂಜಸವಾಗಿದೆ. ಆರಿಯ ಮತ್ತು ಕನ್ನಡಗಳ ಸಂಬಂಧ-ಸೂತ್ರಗಳ ತೊಡಕು ತಿಳಿಯದೆ ಇದ್ದರೆ ಈ ಬಗೆಯ ವಿಚಾರದ ಗೊಂದಲು ಆಗತಕ್ಕುದೇ ಸರಿ.

ಈ ಬಗೆಯ ಭ್ರಾಂತಿಗೆ ಮುಖ್ಯ ಕಾರಣವೆಂದರೆ ಕನ್ನಡದ ಮೊದಲಿಗರು ಆರ್ಯೀಕರಣಕ್ಕೆ ಮೈಗೊಟ್ಟುದು. ವೇದಕಾಲದಿಂದಲೂ ಈ ಕ್ರಿಯೆಯು ನಡೆಯುತ್ತ ಬಂದಿದೆ. ತಿಳಿದಾಗಲಿ ತಿಳಿಯದೆಯಾಗಲಿ ಕನ್ನಡದ ನಾಡು ಮತ್ತು ನುಡಿಗಳಿಗೆ ಆರ್ಯಸಂಸ್ಕಾರವನ್ನೀವ ಕಾರ್ಯವು ಅನಂತಕಾಲದಿಂದ ಅವ್ಯಾಹತವಾಗಿ ಸಾಗಿದ್ದುದು ಕಂಡುಬರುತ್ತದೆ. ಇದರ ಮನವರಿಕೆಗಾಗಿ

* ಕದಾ. ಪರಿಶಿಷ್ಟ.

ಕನ್ನಡ ಸಾಹಿತ್ಯದೊಗಿನ ಮಾದರಿಯ ಒಂದೆರಡು ದೃಷ್ಟಾಂತಗಳನ್ನು ನೆನಪಿಗೆ ತಂದುಕೊಂಡರೂ ಸಾಕು. ಆಂಡಯ್ಯನು (೧೨೩೫) ಅಚ್ಚಗನ್ನಡದಲ್ಲಿ ಬರೆವ ಪೀಳ್ಯವನ್ನೆತ್ತಿ ಸಂಸ್ಕೃತೋದ್ಭವ ಶಬ್ದಗಳಿಂದ ( ಪ್ರಾಕೃತಭಾಷೆಯ ಪದಗಳನ್ನು ಉಪಯೋಗಿಸಿ) ಕಾವ್ಯವನ್ನು ರಚಿಸಿ ತನಗೆ ತಿಳಿಯದೆಯೆ ಆತನು ಕನ್ನಡಕ್ಕೆ ಆರ್ಯಭಾಷೆಯ ಒಪ್ಪಕೊಟ್ಟನು! ಪ್ರೌಢವಾದ ಕನ್ನಡದಲ್ಲಿ ಬರೆವ ಹಂಬಲದ ರುದ್ರಭಟ್ಟ ಮತ್ತು ಷಡಕ್ಷರಿಗಳ ಕಾವ್ಯಗಳಲ್ಲಿ ಕನ್ನಡಕ್ಕಿಂತ ಸಂಸ್ಕೃತದ ಹೊಳಪೆ ಎಲ್ಲೆಲ್ಲಿಯೂ ಕಣ್ಣು ಕುಕ್ಕಿಸುತ್ತಲಿದೆ! ಆದುದರಿಂದಲೆ ಕನ್ನಡಿಗರಿಗೆ ಆರಿಯರೆಂದು ಹೆರವರು ಭ್ರಮೆಗೊಂಡಿರಬೇಕು.

ಮತ್ತು ದಕ್ಷಿಣಾಪಥ (ಬೃಹತ್ ಕರ್ಣಾಟ)ದ ಕ್ರಮಕ್ರಮವಾ*ದ ಆರ್ಯೀಕರಣವು ನಡೆದುದೂ ಸುಳ್ಳಲ್ಲ. ದಕ್ಷಿಣಾಪಥವು ತಮ್ಮ ವಸತಿಗೆ ತೀರ ಅಯೋಗ್ಯವಾದದ್ದೆಂದು ಆರ್ಯರು ನೆರೆನಂಬಿದ್ದರೆಂದು ವೇದ ಮತ್ತು ಸ್ಮೃತಿಗಳಿಂದ ನಿಶ್ಚಿತವಾಗಿ ಗೊತ್ತಾಗುತ್ತದೆ.* ದಕ್ಷಿಣಾಪಥದವರು ಮ್ಲೇಚ್ಛರೆಂದೂ ಮನುವು ಸೂಚಿಸಿದ್ದಾನೆ (೧.೨೩). ದಕ್ಷಿಣದ ಜನಗಳ ಗುಣಸ್ವಭಾವಗಳನ್ನು ಕುರಿತು ಔತ್ತರೇಯರಕಲ್ಪನೆಯು ಏನಿದೆಯೆಂಬುದು ಮಹಾಭಾರತದಲ್ಲಿ ಬಂದ ಒಂದು ಉಲ್ಲೇಖದಿಂದ ಚೆನ್ನಾಗಿ ಗೊತ್ತಾಗುವಂತಿದೆ. ಸಂಕೀರ್ಣಾಚಾರ ಧರ್ಮಾಃ, ಪಶುಧರ್ಮಾಃ, ಪಾಪಾಃ, ಮ್ಲೇಚ್ಛಾಃ (೮೪ನೆಯ ಅಧ್ಯಾಯ); ಇಂತಹ ಜನಗಳ ದೇಶವಿದು. ವಿಂಧ್ಯದಿಂದ ದಕ್ಷಿಣದ ದೇಶವೆಲ್ಲವೂ, 'ಅನಾರ್ಯಭೂಮಿ', 'ಅಯಜ್ಞೀಯಭೂಮಿ', 'ಮ್ಲೇಚ್ಛಭೂಮಿ' ಎಂದು ಪ್ರಾಚೀನ ಆರ್ಯರ ಗ್ರಹಿಕೆಯಾಗಿದ್ದಿತು. ಆದುದರಿಂದ ಇಂತಹ ಈ ನಾಡಿಗೆ ಬಹಿಷ್ಕೃತರಲ್ಲದೆ ಬೇರೆ ಯಾರೂ ಅಡಿಯಿಡಲಾಗದೆಂಬ ಸಂಪ್ರದಾಯ

* ಪ್ರಾಕೃತೋಕ್ತಿಗಳಿಂದು ಬರಿದೆ ಮ-।
ಹಾಕೃತಘ್ನರು ಜರಿವರಲ್ಲದೆ ।
ಸ್ವೀಕೃತವ ಮಾಡದಲೆ ಬಿಡುವರೆ ಸುಜನರಾದವರು ॥
ಶ್ರೀಕೃತೀಪತಿಯಮಲಗುಣಗಳು ।
ಈ ಕೃತಿಯೊಳುಂಟಾದ ಬಳಿಕ ।
ಪ್ರಾಕೃತವೆ ಸಂಸ್ಕೃತದ ಸಡಗರವೇನು ಸುಗುಣರಿಗೆ॥ ಕು. ಭಾ.

* ಋಕ್ X. 61.8; ಮನು. ೧. ೨೨–೨೪.

ವುಂಟಾಗಿದ್ದಿತು.†

ವಿಂಧ್ಯವು ಆರ್ಯಾವರ್ತದ ದಕ್ಷಿಣ ಮರ್ಯಾದೆಯೆಂದು ಮನುವಿನ ಕಾಲದಲ್ಲಿ ಎಣಿಸಲ್ಪಡುತ್ತಿದ್ದು ಪುರಾಣಕಾಲದಲ್ಲಿ "ಗೋದಾವರ್ಯಾಃ ದಕ್ಷಿಣೇ ತೀರೆ" ಎಂದು ಹೇಳುವುದಕ್ಕೆ ಆರಂಭವಾಯಿತು.

ಗೋದಾವರೀ ಭೀಮರಥೀ ಕೃಷ್ಣಾ ವೈಣ್ಯಾಥುಮಂಜಲಾ।
ತುಂಗಭದ್ರಾಸು ಪ್ರಯೋಗಾ ಕಾವೇರೀ ಚ ತಥಾವಗಾ।
ದಕ್ಷಿಣಾಪಥ ನದ್ಯಸ್ತು ಸಹ್ಯಪಾದಾದ್ವಿನಿಸ್ಸೃತಾಃ॥

—ವಾಯು ೪೫, ೧೦೪

ಇದರಲ್ಲಿ ನರ್ಮದಾ, ತಾಪಿಗಳ ಹೆಸರೇ ಇಲ್ಲ! ಗೋದಾವರಿಯೆ ದಕ್ಷಿಣಾಪಥದ ಉತ್ತರಮರ್ಯಾದೆಯೆಂಬುದು ವಾಯುಪುರಾಣದ ಈ ಶ್ಲೋಕಗಳಿಂದ ವ್ಯಕ್ತವಾಗುತ್ತದೆ. ಎಂದರೆ ಗೋದಾವರಿಯ ವರೆಗಣ ನಾಡು ಆರ್ಯಾವರ್ತದಲ್ಲಿ ಹೊಸತಾಗಿ ಸೇರಿಕೊಂಡಂತಾಯಿತು. ನೃಪತುಂಗನು (೮೧೫) ಕನ್ನಡದ ಉತ್ತರಸೀಮೆಯು ಗೋದಾವರಿಯೆಂದು ಹೇಳಿದುದು ಈ ದೃಷ್ಟಿಯಿಂದ ವಿಚಾರಣೀಯವಾಗಿದೆ. ದೇವಗಿರಿ ಯಾದವರ ಕಾಲದ ವರೆಗೂ (ಮುಂದೆ ೪೫೦ ವರುಷಗಳ ವರೆಗೆ) ಗೋದಾವರಿಯ ಉತ್ತರದಲ್ಲಿ ಕನ್ನಡವು ಜೀವಂತವಾಗಿದ್ದಿತೆಂದು ಯಾದವಮನೆತನದ ಶಾಸನಗಳು, ಆರಾಜರ ಹೆಸರುಗಳು ಇವುಗಳ ಮೇಲಿಂದ ಸಿದ್ಧವಾಗುತ್ತಲಿದೆ.* ಇದಕ್ಕೆ ಮರಾಠೀಭಾಷೆಯ ಜನ್ಮೇತಿಹಾಸದ ಬೆಂಬಲವೂ ಇದೆ.+ ಗೋದಾವರಿಯು ಕನ್ನಡದ ಉತ್ತರ ಮರ್ಯಾದೆ ಎಂದು ಹೇಳಿದೊಡನೆ ಗೋಡೆ ಹಾಕಿದಂತೆ ಗೋದೆಯ ಆಚೆಗೆ ಕನ್ನಡದ ಸುದ್ದಿಯೇ ಇಲ್ಲದಿರುವುದು ಸಾಧ್ಯವಿಲ್ಲ. ಯಾವುದೇ ಭಾಷೆಯು ಇಲ್ಲಿಂದ ಇಲ್ಲಿಗೆ ಎಂದು ಹೇಳುವಾಗ ಸ್ಥಿರವಾದ ಒಂದು ಗೆರೆಯನ್ನು ಎಳೆಯಲಿಕ್ಕಾಗುವದಿಲ್ಲ. ಜ್ಞಾನೇಶ್ವರಿ, ಮಹಾನುಭಾವರ ಗ್ರಂಥಗಳು ಗೋದಾವರಿಯ ಉತ್ತರದ ನಾಡಿನವರಿಂದ ರಚಿತವಾದುವುಗಳು. ಅವುಗಳಲ್ಲಿ ಇರುವ ಕನ್ನಡಮಾತುಗಳ ವೈಪುಲ್ಯವನ್ನು ನೋಡಿದರೆ ಯಾದವರ ಕಾಲಕ್ಕೆ ದೇವಗಿರಿಯ ಸುತ್ತಲು ಕನ್ನಡವು ಜೀವಂತವಾಗಿದ್ದಿತೆಂದು ನಿಃಸಂಶಯವಾಗಿ ಕಂಡು

† ನ ಮ್ಲೇಚ್ಛವಿಷಯೇ ಶ್ರಾದ್ಧಂ ಕುರ್ಯಾತ್, ನ ಗಚ್ಛೇತ್ತಂ ವಿಷಯಂ।

—ಸ್ಮೃತಿಚಂದ್ರಿಕಾ

* ಕಕ. ಪುಟ ೮೭–೯೦.

ಬರುವುದು. ಯಾದವರ ಕಾಲಕ್ಕೆ ೧೩ನೆಯ ಶತಮಾನದಲ್ಲಿ ಗೋದೆಯ ಉತ್ತರಕ್ಕೆ ಕನ್ನಡವು ಜೀವಂತವಾಗಿದ್ದಿತೆಂದಬಳಿಕ ನೃಪತುಂಗನ (೮೧೫) ಕಾಲಕ್ಕಂತೂ ಅದು ಉತ್ತಮ ಸ್ಥಿತಿಯಲ್ಲಿಯೆ ಇರಲಿಕ್ಕೆ ಸಾಕು. ಆದರೂ ನೃಪತುಂಗನು ಗೋದಾವರಿಯಿಂದ ದಕ್ಷಿಣಕ್ಕೆ ಕರ್ನಾಟವು ಆರಂಭವಾಗುತ್ತದೆ ಎಂದು ಏಕೆ ಹೇಳಿರಬಹುದು.

ಕನ್ನಡವು ಮ್ಲೇಚ್ಛ ಭಾಷೆಯೆಂದು ಹಿಂದಿನವರ ನಂಬುಗೆ. ಮೃಚ್ಛಕಟಿಕ ನಾಟಕದಲ್ಲಿ ಈ ವಿಷಯದ ಸ್ಪಷ್ಟವಾದ ಉಲ್ಲೇಖವಿದೆ.‡ ಗೋದಾವರಿಯ ವರೆಗೆ ಆರ್ಯಾವರ್ತವೆಂಬ ರೂಢಿಯು ದೃಢವಾಗಿಬಿಟ್ಟದರಿಂದ ಗೋದಾವರಿಯ ದಕ್ಷಿಣದಿಂದ ಮ್ಲೇಚ್ಛ§ ಭಾಷೆಯ (ಕನ್ನಡದ)ನಾಡು ಆರಂಭವಾಗುತ್ತದೆಂದು ನೃಪತುಂಗನು ಸಂಪ್ರದಾಯ ಶರಣನಾಗಿ ಹೀಗೆ ಹೇಳಿರಲಿಕ್ಕಿಲ್ಲವಷ್ಟೆ?

ಸಂಪ್ರದಾಯಶರಣನಾಗಿಯೆ ನೃಪತುಂಗನು ಹೀಗೆ ಹೇಳಿರಬೇಕು; ಆ ಕಾಲಕ್ಕೆ ಗೋದೆಯ ಉತ್ತರಕ್ಕೂ ಕನ್ನಡವಿದ್ದಿತೆಂದು ಊಹಿಸಿದುದು ಕೆಲವರಿಗೆ ವಿಚಿತ್ರವೆನಿಸಬಹುದು. ಆದರೆ ಆರ್ಯಾವರ್ತದ ದಕ್ಷಿಣಮೇರೆಯು ಕ್ರಮಕ್ರಮವಾಗಿ ಹೇಗೆ ಮುಂದೆ ಮುಂದೆ ಸರಿಯುತ್ತ ಹೋಯಿತೆಂಬುದನ್ನು ನೋಡಿದರೆ ಮೇಲಣ ಊಹೆಯ ಬಗ್ಗೆ ಸೋಜಿಗವೆನಿಸುವ ಕಾರಣವಿಲ್ಲ.

ಭಾರತೀಯ ಭೂಘಟನೆಯೆಂಬ ಒಂದು ಸಂಸ್ಕೃತ ಗ್ರಂಥದಲ್ಲಿ ಹಿಂದೂ ದೇಶದ ಭೂಮಿಯನ್ನು ಸಾತ್ವಿಕ, ರಾಜಸ ಮತ್ತು ತಾಮಸ ಎಂದು ವರ್ಗೀಕರಿಸಿ ಹೇಳಿದ್ದಾಗಿದೆ.*

ಹಿಮವತ್ ವಿಂಧ್ಯಯೋರ್ಮಧ್ಯಂ ಸಾತ್ವಿಕಂ ಭೂತಲಂ ಸ್ಮೃತಂ।
ನಾಗರಸ್ತು ಸ್ಮೃತೋದೇಶೋ ಹಿಮವತ್ ವಿಂಧ್ಯ ಮಧ್ಯಗಃ॥

† ಮನುಸ್ಮೃ. ಪುಟ ೩೧–೩೪. ಮತ್ತು ಮಭಾ. ಪುಟ ೧೮೯. ‡ ನಿರ್ಣಯಸಾಗರ ಪ್ರತಿ, ೧೯೧೬. ಪುಟ ೨೨೫; ಅಲ್ಲದೆ ಶಾರದಾತನಯನೂ (೧೩ನೆಯ ಶತಮಾನ) ಇದೇ ಅಭಿಪ್ರಾಯದವನಿದ್ದಾನೆ: 'ದ್ರಮಿಡಾಃ ಕನ್ನಡಾಂಧ್ರಾಶ್ಚ....ಏತಾಭಾಷಾ ಸರ್ವತ್ರ ಮ್ಲೇಚ್ಛ ಭಾಷೇತ್ಯುದಾಹೃತಾಃ।' § ಮ್ಲೇಚ್ಛದೇಶವೆಂಬ ಕಾರಣದಿಂದಲೆ ವಾಯು, ಮತ್ಸ್ಯ ಮೊದಲಾದ ಕೆಲವು ಪುರಾಣಗಳಲ್ಲಿ 'ಕರ್ಣಾಟದ' ಸ್ಪಷ್ಟವಾದ ಉಲ್ಲೇಖವು ಬಂದಿಲ್ಲವೆಂದು ಊಹಿಸಿಸಲು ಅವಕಾಶವಿದೆ. 'ಕರ್ಣಾಟ' ರಾಕ್ಷಸನು ಈ ನಾಡಿನ ಸಂಸ್ಥಾಪಕನೆಂದು ಸ್ಕಂಧವು ಹೇಳುತ್ತದೆ. ಕನ್ನಡವು ಜೈನಾದಿ ಅವೈದಿಕರ ಭಾಷೆಯೆಂದೂ, ಮ್ಲೇಚ್ಛ ಭಾಷೆಯೆಂದೂ ಕೊನೆಯ ವರೆಗೆ ಹಾಗೆಯೆ ಉಳಿಯಿತು. ಆದರೆ ತೆಲುಗು ಬ್ರಾಹ್ಮಣರು

ವಿಂಧ್ಯ ಶೈಲಾದಿ ಕೃಷ್ಣಾಂತಂ ರಾಜಸಂ ಪರಿಕೀರ್ತಿತಂ||

..............................................

ತುಂಗ ಕೃಷ್ಣಾದಿ ಕನ್ಯಾಂತಂ ತಾಮಸಂ ಭೂತಲಂ ಸ್ಮೃತಂ||

..............................................

ಕೃಷ್ಣಾಯಾ ದಕ್ಷಿಣೋಭಾಗಃ ತಾಮಸಃ ಪರಿಕೀರ್ತಿತಃ |

ಈ ಶ್ಲೋಕಗಳ ಮೇಲಿಂದ ಕಂಡುಬರುವ ಕೆಲವು ಮಹತ್ತ್ವದ ಸಂಗತಿಗಳೆಂದರೆ:

೧. ಮೂಲ ಆರ್ಯಾವರ್ತವು ಹಿಮಾಲಯ ವಿಂಧ್ಯಗಳ ನಡುವಿನದು; ಮತ್ತು ಅದು ಸಾತ್ವಿಕವೂ ಸುಸಂಸ್ಕೃತವೂ ಆದ ದೇಶ.

೨. ವಿಂಧ್ಯದಿಂದ ಕೃಷ್ಣೆಯ ವರೆಗಿನ ಪ್ರದೇಶವು ರಾಜಸಿಕ·

೩. ಕೃಷ್ಣೆಯಿಂದ ಕೆಳಗಣ ನಾಡು ತಾಮಸಿಕ!

ಈ ವರ್ಗೀಕರಣದಲ್ಲಿ ಆ ಲೇಖಕನ ಪಕ್ಷಪಾತಬುದ್ಧಿಯು ಚೆನ್ನಾಗಿಯೆ ವ್ಯಕ್ತವಾಗುತ್ತಲಿದೆ. ಗೋದೆಯ ವರೆಗೆ ಇದ್ದ ದಕ್ಷಿಣ ಮೇರೆಯು ಈ ಕೃಷ್ಣೆಗೆ ಬಂದುನಿಂತಿದೆ. ವಿಂಧ್ಯದಿಂದ ದಕ್ಷಿಣದ ಈ ಹೊಸನಾಡು (ಆರಿಯರ ನಾಡು), ಗೌಣ ಆರ್ಯಾವರ್ತವಾಗಿರುವದರಿಂದ ಇದು ಸಾತ್ವಿಕಕೋಟಿಯಲ್ಲಿ ಎಣಿಸಲ್ಪಟ್ಟಿಲ್ಲ! ರಾಜಸವರ್ಗದಲ್ಲಿ ಇದರ ಎಣಿಕೆಯಾಗಿದೆ. ಕೃಷ್ಣೆಯಿಂದ ದಕ್ಷಿಣಕ್ಕೆ ಕನ್ನಡ, ದ್ರಾವಿಡ ಮೊದಲಾದ ಮ್ಲೇಚ್ಛಭಾಷೆಗಳ ದೇಶಗಳು ಆದುದರಿಂದ ಅದು ತಾಮಸ—ಅಧಮ ಭೂಮಿ!

ಕ್ರಿ. ಶ. ೧೨೦೦—೧೩೦೦ನೆಯ ಸುಮಾರಿಗೆ ಆಗಿಹೋದ ಹರದತ್ತ ನೆಂಬವನು ಆಪಸ್ತಂಭ ಧರ್ಮಸೂತ್ರಗಳಿಗೆ ಟೀಕೆ ಬರೆದಿದ್ದು ಅದರ ಒಂದ ಸೂತ್ರದ (೨,೭, ೭·೧೭) ಟೀಕೆಯಲ್ಲಿ ಆತನು ಶರಾವತಿಯ ಉತ್ತರ

ಮ್ಲೇಚ್ಛವೆಂಬ ಅಪವಾದದಿಂದ ತಮ್ಮ ಭಾಷೆಯನ್ನುಳಿಸಿಕೊಳ್ಳಲು ಅದು ಕಣ್ವಋಷಿ ಯಿಂದ ಸಿದ್ಧವಾದ ಭಾಷೆಯೆಂದು ಕಥೆ ನಿರ್ಮಿಸಿದರು, ತಮಿಳು ಬ್ರಾಹ್ಮಣರು ಅಗಸ್ತ್ಯ ನಿಗೆ ಸಂಬಂಧ ಜೋಡಿಸಿದರು. ಆದರೆ ಮ್ಲೇಚ್ಛವೆನಿಸಿದ ಕನ್ನಡದಲ್ಲಿ ಬರೆಯಲು ವೈದಿ ಕರಿಗೆ ಬ್ರಾಹ್ಮಣರಿಗೆ ಬಹಳ ದಿನಗಳವರೆಗೆ ಧೈರ್ಯವಾಗಲಿಲ್ಲ! ಇಂತಹ ವೈದಿಕ ಅಭಿಮಾನಿಗಳ ಪೂರ್ವಜರೇ ಬರೆದ ಪುರಾಣಗಳಲ್ಲಿ ಈ ನಾಡಿನ ಉಲ್ಲೇಖವು ಸ್ಪಷ್ಟ ವಾಗಿರುವುದು ಸಹಜ

* ಮಸಾಪ. II, ಪುಟ ೮೫.

ದಿಕ್ಕಿನವರೆಲ್ಲ ಉದೀಚ್ಯರು ಎಂದು ಹೇಳಿದ್ದಾನೆ.*

ಲೋಕೋಯಂ ಭಾರತಂ ವರ್ಷಂ ಶರಾವತ್ಯಸ್ತುಯೋವಧೇ:।

ಈ ಉಲ್ಲೇಖದಿಂದ ಕ್ರಿ. ಶ. ೧೩೦೦ರ ಸುಮಾರಿಗೆ ಆರ್ಯಾವರ್ತದ ದಕ್ಷಿಣಮೇರೆಯು ಗೆರಸೊಪ್ಪೆಯವರೆಗೂ ಬಂದು ನಿಲುಕಿದುದನ್ನು ಕಾಣಬಹುದು!

ಈ ಸಂಗತಿಗಳಿಂದ ಕರ್ಣಾಟದ ಉತ್ತರಮರ್ಯಾದೆಯು ಕ್ರಮ ಕ್ರಮವಾಗಿ ಹೇಗೆ ಕುಗ್ಗುತ್ತ ನಡೆದಿತ್ತೆಂಬುದು ಮಾತ್ರ ಸ್ಪಷ್ಟವಾಗುತ್ತದೆ. ಆದುದರಿಂದಲೆ ಡಾ. ಭಂಡಾರಕರ ರಾಮಕೃಷ್ಣಪಂತರಂತಹ ಆಧುನಿಕ ವಿದ್ವಾಂಸರು ತುಂಗಾನದಿಯ ವರೆಗೆ ಮಹಾರಾಷ್ಟ್ರವು ಹಬ್ಬಿಕೊಂಡಿತ್ತೆಂದು ಹೇಳಿದರು.† ಶ್ರೀ. ಸಿ. ವಿ. ವೈದ್ಯ, ಪಾಂಗಾರಕರ ಮೊದಲಾದ ಹಿರಿಯ ಸಾಹಿತಿಗಳೂ ಹಬ್ಬಿಕೊಂಡಿಗೆ ಎನ್ನುತ್ತಾರೆ! ಇವರು ಹರದತ್ತನ ಮಾತನ್ನೇ ನಿಜವೆಂದು ನಂಬಿ ತುಂಗಾತೀರದ ವರೆಗೆ ಮಹಾರಾಷ್ಟ್ರ, ಮೈಸೂರ ವರೆಗೆ ಮಹಾರಾಷ್ಟ್ರ ಎಂದು ಕನವರಿಸುತ್ತಲಿದ್ದಾರೆ.‡ ಆದರೆ ಇಲ್ಲಿಯ ಕನ್ನಡವು ಇನ್ನೂ ಅಳಿಯದೆ ಉಳಿದೇ ಇದೆ! ಇದರ ಮೇಲಿಂದ ನೋಡಿದರೂ ನೃಪತುಂಗನ ಕಾಲಕ್ಕೆ ಗೋದೆಯ ದಕ್ಷಿಣ ತಡಿಯ ವರೆಗೆ ಇದ್ದ ಕನ್ನಡವು ಉತ್ತರದ ಭಾಗಕ್ಕೂ ಇರಲೇ ಇಲ್ಲವೆಂದು ಎದೆತಟ್ಟಿ ಹೇಳುವುದು ಸರಿಯಾಗಲಾರದು.

ಆ ಹಳೆಮಾತು ಏನೆ ಇರಲಿ; ಹೊಯ್ಸಳರ ಕಾಲಕ್ಕೆ ( ಹರದತ್ತನ ಅಭಿಪ್ರಾಯದ ಮೇಲಿಂದ ) ಶರಾವತಿಯ ವರೆಗಣ ಪ್ರದೇಶವು ಆರಿಯರ ವರ್ಚಸ್ಸಿನಲ್ಲಂತು ಸಿಕ್ಕಿದ್ದಿತೆಂಬುದು ಸಿದ್ಧ.

ಹೊಯ್ಸಳರ ಓಲಗದಲ್ಲಿ ಕನ್ನಡ ಅಭಿಮಾನದ ಹೊಸ ಸ್ಫೂರ್ತಿಯು ಮೈದೋರದಿದ್ದರೆ ಇನ್ನು ಸಲ್ಪ ಅವಧಿಯಲ್ಲಿ ಕರ್ಣಾಟವು ನಿಜವಾಗಿಯೂ ಹೇಳಹೆಸರಿಲ್ಲದಂತಾಗುತ್ತಿದ್ದಿತೆಂಬುದಕ್ಕೆ ಸಂದೇಹವಿಲ್ಲ. ಶ್ರೀಮಾನ್ ಬೇಂದ್ರೆ ದತ್ತರಾಯರ ಅಭಿಪ್ರಾಯದಂತೆ ಆರಿಯ ಭಾಷೆಯ ಅಭ್ಯಾಸವೂ ಹೊಯ್ಸಳರ ವಿದ್ಯಾಲಯದಲ್ಲಿ ನಡೆಯುತ್ತಿದ್ದು, ಕನ್ನಡಿಗರು ಈಗ ಬೇಗನೆ ಎಚ್ಚರಿಯದಿದ್ದರೆ

---

* HDS. p. 351. ಮತ್ತು ಮಸಾಪ. II, ೮೫. † EI. Vol V, p. 186

‡ 'ಮಹಾರಾಷ್ಟ್ರದ ಮೂಲ'ದ ೧ನೆಯ ನೆರೆಯೋಲೆಯಲ್ಲಿ (Appendix) ಮಹಾಷ್ಟ್ರದ ಹಬ್ಬುಗೆಯ ಕ್ರಮವನ್ನು ತೋರಿಸಲಾಗಿದೆ. ಪುಟ ೪೮–೫೦.

ಕನ್ನಡವು ಮಣ್ಣುಗೂಡುತ್ತಿದ್ದಿತೆಂಬ ಮಾತನ್ನು ತಮ್ಮ ಒಂದು ಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ.* ಆದುದರಿಂದ ಮರಾಠಿಯ ನಿಜಸ್ವರೂಪವು ಬೇಗನೆ ಗೊತ್ತಾಗಿ ಎಚ್ಚತ್ತು ಕನ್ನಡವನ್ನು ಈ ಕುತ್ತಿನೊಳಗಿಂದ ಪಾರುಮಾಡಿದ ಸಂಪೂರ್ಣ ಶ್ರೇಯಸ್ಸು ಹೊಯ್ಸಳರಿಗೆ—ಹೊಯ್ಸಳ—ಕರ್ನಾಟರಿಗೇ ಸಲ್ಲುತ್ತದೆ

ದೇವಗಿರಿಯ ಯಾದವರಲ್ಲಿ ಕೊನೆಯ ನಾಲ್ಕೈದು ರಾಜರು ಮರಾಠಿಯ ಪಕ್ಷಕಟ್ಟಿ, ಕರ್ನಾಟದ ಆರಿಯರನ್ನು ಪುಂಡಾಟಿಕೆಗೆ ಹುರಿದುಂಬಿಸದಿದ್ದರೆ, ಅಥವಾ ಕರ್ನಾಟದ ಆರಿಯರು ದೇವಗಿರಿ ಯಾದವರ ಬೆಂಬಲದ ನಂಬುಗೆ ಯಿಂದ ಕನ್ನಡಿಗರ ಮೇಲೆ ಕೈಮಾಡದಿದ್ದರೆ, ಹೊಯ್ಸಳರಲ್ಲಾದರೂ ಕನ್ನಡಿ ಗರನ್ನು ಕಟ್ಟಿಕೊಳ್ಳಬೇಕು., ಎಂಬ ಬುದ್ಧಿಯು ಬೇಗನೆ ಒಡಮೂಡುತ್ತಿ ದ್ದಿತೊ ಇಲ್ಲವೊ ಸಂದೇಹಾಸ್ಪದವೆ ಆಗಿದೆ.

ಏಕೆಂದರೆ ಈ ವರೆಗೆ ಆರಿಯ ಮಾತು (ಪ್ರಾಕೃತವು) ಕನ್ನಡಕ್ಕೆ ಬೇಕಾ ದವನಂತೆ, ಆಪ್ತನಂತೆ, ಹಿತಕರ್ತನಂತೆ ಕೂಡಿಕೊಂಡು ಬಂದಿದೆ; ಪ್ರತ್ಯಕ್ಷ ವಿರೋಧಿಯಾಗಿ ನಿಂತು ಎಲ್ಲಿಯೂ ಹೋರಾಡಿದಂತಿಲ್ಲ. ಈ ಮೊದಲು ಆರಿಯರು ಬಹಿರಂಗವಾಗಿ ಕನ್ನಡಿಗರ ಎದುರಾಳಿಗಳಂತೆ ನಡೆದುಕೊಂಡ ಉದಾಹರಣೆಗಳು ಸಿಕ್ಕುವುದು ದುರ್ಲಭ. ಮಾವುತರಾಗಿ,* ಸವಾರರಾಗಿ, ಶಿಕ್ಷಕರಾಗಿ, ಪ್ರತಿಹಾರಿಗಳಾಗಿ ಕನ್ನಡ ರಾಜರ ಓಲಗದಲ್ಲಿ ಪ್ರಾಕೃತ (ಆರಿಯ) ಮಾತಿನ ಜನಗಳು ಬಗೆಬಗೆಯ ಕೆಲಸಗಳನ್ನು ಕೈಕೊಂಡಿದ್ದ ಉದಾಹರಣೆಗಳು ಸಿಕ್ಕುತ್ತವೆ.

'ಪಂಡಿತರೂ', 'ವಿವಿಧಕಳಾಮಂಡಿತರೂ' ಆಗಬೇಕೆನ್ನುವವರಿಗೆ ಸಂಸ್ಕೃತದಂತೆ ಆ ಕಾಲದಲ್ಲಿ ಪ್ರಾಕೃತವನ್ನು ಚೆನ್ನಾಗಿ ಅಭ್ಯಾಸಮಾಡಲೇ ಬೇಕಾಗುತ್ತಿತ್ತು. ಜೈನರ ವಿದ್ಯಾಪೀಠಗಳಲ್ಲಂತೂ ಅವರ ಪ್ರಾಕೃತದ ಅಧ್ಯ ಯನವು ಅತ್ಯಂತ ಅವಶ್ಯಕವಾದ ಅಂಗವೇ ಆಗಿದ್ದಿತು. ಶ್ರವಣಬೆಳುಗೊಳ ಮೊದಲಾದ ವಿದ್ಯಾಲಯಗಳಲ್ಲಿ ಪ್ರಾಕೃತಭಾಷೆಯ ಅಧ್ಯಾಪನ ಕಾರ್ಯವು

---

* ಮಸಾಪ. ೧೯೪೩, ಜನವರಿ ಸಂಚಿಕೆ.

* ಆನೆಗೆ 'ಯೋ ; 'ದೇ, ದೇ '; 'ಘೇ, ಘೇ' ;ಈ ಮಾತುಗಳನ್ನು ಹೇಳಬೇಕು; ಬರುವುದಕ್ಕೂ, ಕೊಡುವುದಕ್ಕೂ, ತಕ್ಕೊಳ್ಳುವುದಕ್ಕೂ ಕಲಿಸಬೇಕು; ಎಂದು ಕಲ್ಯಾಣ ಚಲುಕ್ಯ ಚಕ್ರವರ್ತಿ ಭೂಲೋಕಮಲ್ಲನೆ ಹೇಳುತ್ತಾನೆ।

—ಅಭಿಲಷಿತಾರ್ಥ ಚಿಂತಾಮಣಿ, ಪುಟ ೬೯.

ಅಖಂಡವಾಗಿ ಎಷ್ಟೋ ಶತಮಾನಗಳಿಂದ-ತಲೆತಲಾಂತರಗಳಿಂದ ನಡೆಯು ತ್ತಿತ್ತು. ಅರಿಯ (ಮರಾಠಿ) ಮಾತು ಪ್ರಾಕೃತದ ಮರಿ. ಕನ್ನಡ ಕವಿಗಳೂ, ಸುಸಂಸ್ಕೃತ ಜನರೂ ಒಂದಿಲ್ಲೊಂದು ಪ್ರಾಕೃತವನ್ನು ಓದಿದವರಾಗಿರುತ್ತಿದ್ದರು ಆದುದರಿಂದಲೇ ಅವರ ಕನ್ನಡಭಾಷೆಯಲ್ಲಿ ಪ್ರಾಕೃತ (ಯಾವುದಕ್ಕೆ ಇಂದು ಮರಾಠಿ ಎನ್ನಬಹುದೊ ಅಂತಹ) ಪದಗಳು ಅಲ್ಲಲ್ಲಿ ಕಾಣಿಸಿಕೊಳ್ಳುತ್ತಿದ್ದವು. ಅಂತಹ ಉಚಿತ ಪದಗಳನ್ನು ಅಲ್ಲಲ್ಲಿ ಉಪಯೋಗಿಸುವುದು ಆಗಿನ ಕವಿಗಳ ಪ್ರೌಢಿಮೆಯಾಗಿತ್ತು.

ಇನ್ನೂ ಒಂದು ಬಗೆಯಿಂದ ಪ್ರಾಚೀನಕಾಲದಿಂದಲೂ ಪ್ರಾಕೃತಭಾಷೆಯು ಕನ್ನಡದ ಜೀವಜೀವಾಳದೊಡನೆ ಬೆರೆತುಕೊಳ್ಳಲಾರಂಭಿಸಿದ್ದಿತು. ಯಾವನೆ ರಾಜನಾಗಲಿ ತನ್ನ ಮಗಳನ್ನು ಶ್ರೇಷ್ಠ ರಾಜಾಧಿರಾಜನಿಗೆ ಕೊಡಬೇಕೆಂಬ ಹಂಬಲವುಳ್ಳವನಾಗಿರುವುದು ಸಹಜ. ಅದರಂತೆ ತನಗೆ ತನ್ನ ಸಮಾನ ಯೋಗ್ಯತೆಯ ಅಥವಾ ಅದಕ್ಕಿಂತಲೂ ಹೆಚ್ಚಿನ ಸ್ಥಾನಮಾನವುಳ್ಳ ರಾಜರಿಂದ ಹೆಣ್ಣನ್ನು ದೊರಕಿಸಬೇಕೆಂಬ ಅಪೇಕ್ಷೆಯಿರುವುದೂ ಸ್ವಾಭಾವಿಕ. ಚಲುಕ್ಯರೂ, ರಾಷ್ಟ್ರಕೂಟರೂ ದಕ್ಷಿಣಾಪಥದ ಸಾಮ್ರಾಟರಾಗಿರುವಾಗ ಹಿಂದೂದೇಶದ ಬೇರೆಬೇರೆ ಭಾಗಗಳ ರಾಜರು ತಮ್ಮ ಹೆಣ್ಣುಮಕ್ಕಳನ್ನು ಅವರಿಗೆ ಕೊಟ್ಟು ಕೃತಾರ್ಥರಾಗಬೇಕೆಂದು ಹಾತೊರೆಯುತ್ತಿದ್ದರೆ ಸೋಜಿಗವೇನು? ಕರ್ಣಾಟರಾಜರ ಕನ್ಯೆಯರನ್ನು ಹೊರನಾಡಿದ ಅರಸರು ಮದುವೆಯಾದ ಉದಾಹರಣೆಗಳು ಹೇರಳವಾಗಿವೆ. ವಾಕಾಟದ ನರೇಂದ್ರಸೇನನು ಅರಸನಾದೊಡನೆ ಕುಂತಲರಾಜಕುಮಾರಿಯನ್ನು ಮದುವೆಯಾದನು. ಕರ್ಣಾಟದ (ಕುಂತಲ) ಸಾತವಾಹನ ಎನೆಯ ಪುಲಿಮಾಯಿಯು ಔತ್ತರೇಯ ಶಕವಂಶದ ರಾಜಕನ್ಯೆಯ ಕೈಹಿಡಿದನು. ರಾಷ್ಟ್ರಕೂಟರೂ ಉತ್ತರಹಿಂದುಸ್ತಾನದ ಚೇದಿಮನೆತನದ ಹೆಣ್ಣುಗಳನ್ನು ಮದುವೆಯಾದ ಬಹಳ ಉದ್ದಾಹರಣೆಗಳಿವೆ. ಕಾಲ್ಯಾಣ ಚಲುಕ್ಯಮನೆತನವನ್ನು ಸ್ಥಾಪಿಸಿದ ತೈಲಪನ ತಾಯಿ ಬೊಂಥಾದೇವಿಯು ಚೇದಿವಂಶದವಳು; ಔತ್ತರೇಯಳು. ಧೋಲಕಾ (ಗುಜರಾತ) ದ ವಿಶಾಲಮಲ್ಲದೇವನು ಕರ್ಣಾಟ ರಾಜಕುಮಾರಿಯನ್ನು ವರಿಸಿದನು ಇಂತಹ ಉದಾಹರಣೆಗಳಿಗೆ ಅಳತೆ ಕಟ್ಟು ಇಲ್ಲ. ಇಂತು ತಮ್ಮ ಹೆಣ್ಣುಮಕ್ಕಳನು ಪ್ರಾಕೃತಭಾಷೆಯ ಉತ್ತರಾಪಥದ ರಾಜರಿಗೆ ಕೊಡಬೇಕಾಗುತ್ತಿದ್ದುದರಿಂದಲೂ

ಉತ್ತರದ ಹೆಣ್ಣುಮಕ್ಕಳನ್ನು ಮದುವೆಯಾಗುತ್ತಿದ್ದುದರಿಂದಲೂ ಕರ್ಣಾಟದ ಪ್ರಖ್ಯಾತ ರಾಜರ ಮನೆಗಳಲ್ಲಿ ಪ್ರಾಕೃತಕ್ಕೆ ಇಂಬು ದೊರೆತಿದ್ದಿತು ಎಂಬುದು ನಿಃಸಂಶಯ.

ಔತ್ತರೇಯರಾದ ಹೆಣ್ಣುಮಕ್ಕಳು ಕರ್ಣಾಟದ ಸಾತವಾಹನ, ಚಲುಕ್ಯನ, ರಾಷ್ಟ್ರಕೂಟಾದಿ ಸಾಮ್ರಾಟರೊಡನೆ ಮದುವೆಯಾಗಿ ಈ ನಾಡಿಗೆ ಬಂದ ಬಳಿಕ ಕನ್ನಡವನ್ನು ಕೇಳಿಕೇಳಿ ಕಲಿಯುತ್ತಿರಬಹುದು; ಆದರೆ ಪ್ರಾಕೃತಭಾಷೆಯನ್ನು ಬಿಟ್ಟುಬಿಡುತ್ತಿದ್ದರೆಂದು ಹೇಳಲಿಕ್ಕಾಗುವುದಿಲ್ಲ. ಒಮ್ಮೆಲೆ ಯಾವ ಭಾಷೆಯು ಬಿಟ್ಟುಹೋಗುತ್ತಲೂ ಇರುವುದಿಲ್ಲ.

‹ಶ್ರೂಯತೇ ಚ ಕುಂತಲೇಷು ಸಾವಾಹನೋ ನಾಮ ರಾಜಾ ತೇನ ಪ್ರಾಕೃತಭಾಷಾತ್ಮಕಮಂತಃಪುರ ಏವ ವರ್ತಿತೋ ನಿಯಮ'

ಎಂದು ರಾಜಶೇಖರನು ಹೇಳಿದ್ದುದುಂಟು.

ಪ್ರಾಕೃತದಷ್ಟು ಮರ್ಯಾದೆ ಕನ್ನಡಕ್ಕೆ ಅಂದು ಎಂದಾದರೂ ಇದ್ದಿತೆ? ಎಂಬುದೇ ಸಂದೇಹ. ಸಂಸ್ಕೃತವು ಗೀರ್ವಾಣವಾಣಿ, ದೇವಭಾಷೆ. ಅದರ ಮೆಲ್ಮೆ ಮತ್ತಿನ್ನಾವ ಭಾಷೆಗೂ ಇಲ್ಲ;—ಇದ್ದಿಲ್ಲ. ಒಂದು ಕಾಲಕ್ಕೆ 'ಪ್ರಾಕೃತಂ ಮ್ಲೇಚ್ಛಭಾಷಿತಂ' (ಗರುಡಪುರಾಣ) ಎಂಬ ಶ್ರದ್ಧೆಯಿದ್ದರೂ ಸಂಸ್ಕೃತವನ್ನು ಕಲಿಯುವುದು ಸಾಮಾನ್ಯರಿಗೆ ಅಸಾಧ್ಯವೂ ಅನಾವಶ್ಯಕವೂ ಆದಲಿದ ಹಾಗೆ ಪ್ರಾಕೃತವು ಸಂಸ್ಕೃತವನ್ನು ಹಿಂದಿಕ್ಕಿ ಆ ಸ್ಥಾನವನ್ನು ತಾನೇ ಆಕ್ರಮಿಸಿತು. 'ಅಮೃತಂ ಪ್ರಾಕೃತಂ ಕಾವ್ಯಂ'* ಎಂದು ಹೊಗಳಿಕೆಗೆ ಆರಂಭವಾಯ್ತು (ಕ್ರಿ. ಶ. ೧ನೆಯ ಶತಮಾನ). "ಪರುಷಃ ಸಂಸ್ಕೃತಬಂಧಃ ಪ್ರಾಕೃತ ಬಂಧಸ್ತು ಭವತಿ ಸುಕುಮಾರಃ"‡ಎಂದು ಮೆಚ್ಚಿ ಮೈಮರೆತು ಆಡಿದ ಮಾತುಗಳು ಹೊರಬೀಳಲಾರಂಭವಾಯಿತು (ಕ್ರಿ. ಶ. ೧೦ನೆಯ ಶತಮಾನ). ಇದೇ ಕಾಲಕ್ಕೆ 'ಇದಂ ವಾಚೋ ವಿಶಂತಿ ಇತಶ್ಚ ನಿರ್ಯಾಂತಿವಾಚಃ' ಎಂದರೆ ಪ್ರಾಕೃತವೇ ಎಲ್ಲ ಭಾಷೆಗಳ ತಾಯಿ ಎಂಬ ಪ್ರತಿಪಾದನೆಗೂ ಆರಂಭವಾಯ್ತು! ಸಂಸ್ಕೃತ ಮತ್ತು ಪ್ರಾಕೃತಗಳೆರಡೂ ಕನ್ನಡದ ತಾಯಿಗಳಾದುವು.

ಮುಂದೆ ೧೨–೧೩ನೆಯ ಶತಮಾನದ ಸುಮಾರಿಗೆ ಪ್ರಾಕೃತವು, ತನ್ನ ಮಕ್ಕಳಾದ ಬಂಗಾಲಿ, ಗುಜರಾತಿ, ಮರಾಠಿ ಮೊದಲಾದ ದೇಶಭಾಷೆಗಳಿಗೆ

* ಸಾತವಾಹನ ಹಾಲರಾಜ. ‡ ರಾಜಶೇಖರ.

ಇಂಬುಗೊಟ್ಟು ತಾನು ಕಣ್ಮರೆಯಾಯಿತು. ಈ ಸಂಧಿಯಲ್ಲಿ ಪ್ರಾಕೃತದ ಮಾನಮರ್ಯಾದೆಗಳಿಗೆ ಹಕ್ಕುದಾರನಂತೆ ಕರ್ಣಾಟದಲ್ಲಿ ಮರಾಠಿಯೂ ಮುಂದೆ ಬಂದಿತು. + ಇದುವೆ ಆರಿಯ (ಆರ್ಯರ) ಭಾಷೆ, ಎಂದು ಕನ್ನಡಿಗರೂ ಅದನ್ನು ಸ್ವೀಕರಿಸುವುದಕ್ಕೆ ಮನಸು ಮಾಡಿದರು; ಹಲರು ಸ್ವೀಕರಿಸಿದರು. ಇನ್ನು ಉಳಿದವರೂ ಸ್ವೀಕರಿಸುತ್ತಿದ್ದರು. ಆದರೆ........

ಆದರೆ, ಮರಾಠಿಯು ಯಾದವರ ಬೆಂಬಲದಲ್ಲಿ ರಾಜಕೀಯ ರಣಾಂಗಣಕ್ಕೆ ಇಳಿದುದರಿಂದ ಅದಕ್ಕೆ ಹೊಯ್ಸಳರ ಕನ್ನಡದ ಖಡ್ಗಗಳು ಅಡ್ಡಗಟ್ಟಿ ತಡೆದು ಹಿಡಿದುವು; ಹಿಮ್ಮೆಟ್ಟಿಸಿದುವು. ಸಂಸ್ಕೃತ ಮತ್ತು ಪ್ರಾಕೃತಗಳಂತೆ ಅದರ ಮರಿಯೆನಿಸುವ ಮರಾಠಿಯೂ ಧರ್ಮ ಮತ್ತು ಸಾಹಿತ್ಯದ ಮುಖಾಂತರವಾಗಿ ಎಷ್ಟು ಕನ್ನಡಿಗರನ್ನು ತನ್ನ ಕೈವಶಮಾಡಿಕೊಂಡಿತೋ † ಅಷ್ಟು ರಾಜಕೀಯ ರಂಗಕ್ಕಿಳಿದು ಕರ್ಣಾಟದಲ್ಲಿ ಹಾನಿಗೆ ಈಡಾಯಿತು. ಪ್ರತಿಕ್ರಿಯೆಗೆ ಕಾರಣವಾಯಿತು. ಪ್ರತಿಸ್ಪರ್ಧಿಗಳಾದ ದೇವಗಿರಿ ಯಾದವರು 'ಮರಾಠಿ' ಎಂದು ಪಕ್ಷವನ್ನು ಕಟ್ಟಿದೊಡನೆ ಹಳೆಬೀಡಿನ ಹೊಯ್ಸಳರು 'ಕನ್ನಡ' ಎಂದು ಪ್ರತಿಭಟಿಸಲೇಬೇಕಾಯ್ತು. 'ಕನ್ನಡಿಗ' ಎಂಬ ಹೊಸ ಹುಮ್ಮಸವು ಈ ನಾಡಿನಲ್ಲಿ ತಲೆದೋರಿತು

+ ಮಾಝಾ ಮರ್ಹಾಟೀಚಾ ಬೋಲ ಕೌತುಕೇ ।
ಪರೀ ಅಮೃತಾತೇ ಹೀ ಪೈಜಾ ಜಿಂಕೇ ॥ —ಜ್ಞಾನೇಶ್ವರಿ (೧೨೯೦ ಕ್ರಿ.ಶ.)

† ೧೨–೧೩ನೆಯ ಶತಮಾನದಲ್ಲಿ ಆರಿಯರು ದೇವಗಿರಿ ಯಾದವರ ಬೆಂಬಲದಿಂದ ಏರಿಬರುತ್ತಲೆ ಕನ್ನಡಿಗರಿಗೆ ಹೊಯ್ಸಳರು ಕೈವಾರಿಗಳಾದರು. ಇದೇ ಬಗೆಯ ದೃಶ್ಯವು ೧೭ನೆಯ ಶತಮಾನದ ಇಲ್ಲಿಯ ರಾಜ್ಯತಂತ್ರದಲ್ಲಿಯೂ ಗೋಚರವಾಗುತ್ತದೆ. ಶಿವಾಜಿಯ ಆರಿಯ ವೀರರನ್ನು ತಡೆಯಲು ಚಿಕದೇವರಾಯರ ಕನ್ನಡ ಗಂಡುಗಲಿಗಳು ಆವೇಶದಿಂದ ಮುಂದೆ ಬಂದರು. ಇದರಿಂದ ಮರಾಠಿಯ ಪ್ರಗತಿಯಾಗದೆ ಕನ್ನಡದ ಅಭಿಮಾನವೆ ಹೆಚ್ಚಾಯಿತು. ಚಿಕದೇವರಾಯರ ಕಾಲದ ಕನ್ನಡದ ಅಭಿಮಾನವೂ ಮರಾಠರ ಮೇಲಣ ಸಿಡುಕೂ 'ಅಪ್ರತಿಮ ವೀರಚರಿತೆ' ಯಲ್ಲಿ ಸಾಹಿತ್ಯರೂಪವನ್ನು ತಾಳಿ ನಿಂತಿದೆ

ಆದರೆ ಧಾರ್ಮಿಕ ಸ್ವರೂಪದಲ್ಲಿ ಬಂದ ಆರಿಯ ಮಾತು ಕನ್ನಡಿಗರ ಮನಸ್ಸನ್ನೇ ಸೂರೆಗೆಯ್ದು ಅವರನ್ನು ತನ್ನ 'ದಾಸ'ರನ್ನಾಗಿ ಮಾಡಿಕೊಂಡಿತು. ಇದಕ್ಕೆ ರಾಮದಾಸರ ಪಂಥವೇ ಸಾಕ್ಷಿ. ಹಂಪಿಯ ವರೆಗೆ ರಾಮದಾಸರ ಮಠಗಳಿದ್ದುವು. ಈ ಪಂಥಕ್ಕೆ ಸೇರಿದವರು 'ದಾಸಬೋಧ', 'ಮನಾಚೇ ಶ್ಲೋಕ'ಗಳನ್ನು ಪಠನಮಾಡಲೇಬೇಕು. ಇದು ೧೭ನೆಯ ಶತಮಾನದ ಮಾತು. ಆದರೆ ೧೫ನೆಯ ಶತಮಾನದಲ್ಲಿಯೇ ದತ್ತಪಂಥದ ಪುರಸ್ಕರ್ತರಾದ ಶ್ರೀಪಾದ ಶ್ರೀವಲ್ಲಭರು ಕೃಷ್ಣಾತೀರದ ಕರ್ಣಾಟಕವನ್ನೆಲ್ಲ ಸುಮಾರಾಗಿ ತಮ್ಮ ಪಂಥಕ್ಕೆ ಸೆಳೆದುಕೊಂಡಿದ್ದರು. ವಿಜಾಪುರದ ಆದಿಲ್‌ಶಹನು ಸಹ ಇವರಿಗೆ ತಲೆವಾಗಿ ನಡೆದುಕೊಳ್ಳುತ್ತಿದ್ದನು. ಚಿಕ್ಕಮಗಳೂರ (ಬಾಬಾಬುಡನಗಿರಿ) ವರೆಗೂ ದತ್ತಪರಂಪರೆಯ ಕ್ಷೇತ್ರವು ವ್ಯಾಪಿಸಿದ್ದಿತು. 'ಶ್ರೀಗುರುಚರಿತ್ರೆ' ಎಂಬ ಮರಾಠಿ ಗ್ರಂಥದ ಪಾರಾಯಣವು ಈ ಪಂಥದ ವೈಶಿಷ್ಟ್ಯ.

ಜ್ಞಾನೇಶ್ವರರಿಂದ ಸ್ಥಾಪಿತವಾದ (ಕ್ರಿ. ಶ. ೧೨೯೮) ವಿಠ್ಠಲಭಕ್ತಿಗೆ ಕರ್ಣಾಟಕದಲ್ಲಿ ಇನ್ನೂ ಹೆಚ್ಚು ಜನಗಳು ಮರುಳಾಗಿದ್ದಾರೆ. 'ಕ್ಷೇತ್ರ ಕಾನಡೇ', 'ದೇವ ಕಾನಡಾ','ಕಾನಡಾಹೋ ವಿಠ್ಠಲ ಕಾನಡಾ'ಎಂದು ಘನಗರ್ಜನೆಯು ಅಖಂಡವಾಗಿ ನಡೆಯುತ್ತಿದ್ದರೂ ಪಂಡರಿಯ ವಿಠ್ಠಲನು ಆರಿಯರ ಭಕ್ತಿಗೆ ಮನಸೋತು ಮರಾಠರ ಅಧಿದೈವತನಾಗಿದ್ದಾನೆ! ಈ ವಿಠ್ಠಲ ಭಕ್ತನು ಕರ್ಣಾಟದ ಯಾವ ಮೂಲೆಯಲ್ಲಿಯೆ ಇರಲಿ 'ಜ್ಞಾನದೇವ-ತುಕಾರಾಮ'ರ ನಿತ್ಯ ಭಜನೆ ಮಾಡಲೇಬೇಕು. ನಾಲ್ಕೆಂಟಾದರೂ ಮರಾಠಿ ಅಭಂಗಗಳು ಬರಲೇಬೇಕು.

ವಿಠ್ಠಲಭಕ್ತಿಯು ನಮ್ಮ ನಾಡಿನ ಹರಿದಾಸರ ವೈಶಿಷ್ಟ್ಯ. ಆದರೆ ಆರಿಯರು 'ಕನಡಾ ವಿಠ್ಠಲ'ನನ್ನು ತಮ್ಮವನನ್ನಾಗಿ ಮಾಡಿಕೊಂಡ ಬಳಿಕ ನಮ್ಮ ಹರಿದಾಸರ ವಿಠ್ಠಲನ ಕ್ಷೇತ್ರವು ಭೀಮಾತೀರದಿಂದ ತುಂಗೆಯ ದಂಡೆಗೆ ಬಂದಿತು. ವಾದಿರಾಜರ ತೀರ್ಥ (ಯಾತ್ರಾ) ಪ್ರಬಂಧದಲ್ಲಿ ಈ ಮಾತು ಸ್ಪಷ್ಟವಾಗಿದೆ. ವಿಜಯನಗರದಲ್ಲಿ ವಿಜಯವಿಠ್ಠಲನ ಗುಡಿಯೂ ಸಿದ್ಧವಾಯ್ತು. (ಶ್ರೀಮಾನ ಪಂಡಿತ ವೆಂಕಟರಾಯರು ಪ್ರಕಟಿಸಿದ ವಿಜಯನಗರದ ಸ್ಮಾರಕ ಸಂಚಿಕೆಯಲ್ಲಿ ಇದನ್ನು ಕುರಿತು ಇದೇ ಲೇಖಕನು ಬರೆದ ಲೇಖ ನೋಡಿ) ಇಂತು ಭೀಮಾ, ಕೃಷ್ಣಾತಟಾಕದಿಂದ ಕರ್ಣಾಟವು ತುಂಗಾತೀರದ ಕಡಗೆ ಹೊರಟುದು

ಕಣ್ಣಿಗೆ ಬೀಳುತ್ತದೆ.

'ತಾವು ಕನ್ನಡಿಗರು' ಎಂಬ ಹುಮ್ಮಸವೇನೊ ತಲೆದೋರಿತು; ನಿಜ. ಆದರೆ ಆರಿಯರನ್ನು ಕನ್ನಡಿಗರಿಂದ ಬೇರ್ಪಡಿಸಿ ದೂರ ಸರಿಸಿಬಿಡುವಂತೆ ಇವೆರಡೂ ಜನಾಂಗಗಳು ಈ ಮೊದಲು ಎಂದೂ ಬಿಡಿಬಿಡಿಯಾಗಿ ಬಾಳಿಲ್ಲ. ಬಿಡಿಬಿಡಿಯಾಗಿ ಬೆಳೆದಿಲ್ಲ. ಅವಳಿಮಕ್ಕಳಂತೆ ಇವೆರಡರ ಹುಟ್ಟು ಮತ್ತು ಹಬ್ಬುಗೆಯಿದೆ. ಇವರಿಬ್ಬರಲ್ಲಿ ಯಾರು ಪ್ರಬಲರಾಗುತ್ತಾರೊ ಅವರನ್ನು ಮತ್ತೊಬ್ಬರು ಅನುಸರಿಸ ಬೇಕಾಗುತ್ತಿದ್ದ ಪರಿಸ್ಥಿತಿಯು ಆಗ ಇದ್ದಿತು.* ಮೈಸೂರ ಹತ್ತರಿನ ಶಾಸನಕ್ಕೆ ಸಾಕ್ಷಿ ಹಾಕಿದ ಒಬ್ಬ ಸೇನಬೋವನು ತಾನು 'ಕನ್ನಡಿಗ' ನೆಂದು ಬರೆದು ಕೊಂಡುದಕ್ಕೆ ಕಾರಣವೇನು. ಆರಿಯರಾದ ಸೇನಬೋವರು ಕೆಲವರು ಇದ್ದರೆಂದು ಆತನು ಹಾಗೆ ತನ್ನನ್ನು ಕನ್ನಡಿಗನೆಂದು ಪ್ರತ್ಯೇಕಿಸಿಕೊಂಡಿರಬಹುದೆ? ೧೨-೧೩ನೆಯ ಶತಮಾನದಲ್ಲಿ ಹೊಯ್ಸಳರ ರಾಜ್ಯದಲ್ಲಿ ಸಾಧಾರಣವಾಗಿ ಊರೂರಿಗೆ ಆರಿಯರ ವಸತಿ ಇದ್ದಿತೆಂಬಂತೆ ತೋರುತ್ತದೆ. ಸೊರಬ ತಾಲ್ಲೂಕಿನಲ್ಲಿ 'ಆರಿಯ ಸಂಕಣ್ಣನು ಕೋಟಿನಾಥದೇವರಿಗೆ ಕೊಟ್ಟ ದತ್ತಿ'ಯ ಉಲ್ಲೇಖವಿದೆ† (೧೨೮೦). ಇದರಂತೆ ಇನ್ನೊಂದೆಡೆಗೆ ಬೆಂಗಳೂರ ಭಾಗದಲ್ಲಿ (ದೇವನಹಳ್ಳಿ)'ಆರಿಯ ವಣಿಕರು' ಗಳಿದ್ದುದು ಗೋಚರವಾಗುತ್ತದೆ.(೧೨೭೫.§ ರಾಣೆಬೆನ್ನೂರಿನಲ್ಲಿ ಕ್ರಿ. ಶ. ೧೨೫೨ರ ಒಂದು ಶಾಸನವು ದೊರೆತಿದ್ದು ಅದು ಆರಿಯಮಾತಿನಲ್ಲಿದೆ! + ದೇವಗಿರಿ ಯಾದವರ ಎಲ್ಲ ಶಾಸನಗಳು ಮುಖ್ಯವಾಗಿ ಕನ್ನಡದಲ್ಲಿಯೇ ಇದ್ದು ಅಪವಾದವಾಗಿ ೪-೬ ಮಾತ್ರ ಆರಿಯ ಮಾತಿನಲ್ಲಿವೆ. ಅಂತವುಗಳಲ್ಲಿ ಇದೊಂದು. ಆದರೆ ಅದು ರಾಣೆಬೆನ್ನೂರಿನಲ್ಲಿದ್ದುದು ವಿಚಾರಾರ್ಹವಾಗಿದೆ. ನಮ್ಮಲ್ಲಿ ಆರೆಕುರಹಟ್ಟಿ, ಆರೆಮುಲ್ಲಾಪುರ ಆರೆಹೊಸೂರ (ರೋಣ) ಆರೇಲಕಮಾಪುರ (ಹಾನಗಲ್ಲ) ಆರೆಬಸನ ಕೊಪ್ಪ (ಕಲಘಟಿಗಿ) ಆರೇಶಂಕರ (ವಿಜಾಪೂರ (ಬಾಗೇವಾಡಿ ಎಂಬೀಬಗೆಯ ಆರಿಯರ ಹೆಸರಿನ ಹಲವುಊರುಗಳಿದ್ದು, ಇವು ಎಷ್ಟು ಪ್ರಾಚೀನವೊ ಹೇಳಲಿಕ್ಕಾಗುವದಿಲ್ಲ. ಆದರೂ ಈ ಮೊದಲೇ ಒಂದೆಡೆಗೆ ಹೇಳಿರುವಂತೆ ಆರಿಯ ಮಾತಿನ ಜನಗಳು ಅರಮನೆಯ ಊಳಿಗದವರಾಗಿ ಕರ್ನಾಟಕ ರಾಜರ ರಾಜಧಾನಿಗಳಲ್ಲಿ, ದೊಡ್ಡದೊಡ್ಡ ಪಟ್ಟಣಗಳಲ್ಲಿ ನೆಲೆಸಿದ್ದರೆಂಬುದಕ್ಕೆ

* ಕವೀಕ್ಷ. ಪುಟ ೧೦೪—೧೦೬. †EC. VIII, SB. 275.

§EC. IX, DY. 63. + SIE. No 117 1934.;

ಸಂದೇಹವೆ ಇಲ್ಲ.

ಕನ್ನಡ ಶಾಸನಗಳಲ್ಲಿ 'ಆರಿಯ'ರೆಂದು ಉಲ್ಲೇಖಿತರಾದ ಜನರಲ್ಲಿ ಬ್ರಾಹ್ಮಣರ ಸಮಾವೇಶವಾಗುವದಿಲ್ಲ. ಆರಿಯರೆಂದರೆ ಮರಾಠರು. ಈ ಕಾಲಕ್ಕೆ 'ಆರಿಯ' ಮತ್ತು ಆರ್ಯ ಇವೆರಡೂ ಭಿನ್ನಾರ್ಥದ ಶಬ್ದ-ಗಳಾಗಿದ್ದುವು. ಮುಂದೆ ಶಿವಾಜಿಯ ಕಾಲದಲ್ಲಿ ಸಹ ಬ್ರಾಹ್ಮಣರು ತಮಗೆ ಮರಾಠರೆಂದು ಕೊಳ್ಳಲು ಸಿದ್ಧರಿದ್ದಿಲ್ಲವೆಂಬುದಾಗಿ ಸರ್ ಜದುನಾಥ ಸರಕಾರರು ಶಿವಾಜಿಯ ಚರಿತ್ರೆಯಲ್ಲಿ ತೋರಿಸಿದ್ದಾರೆ. ಈ ಆರಿಯರು ಕನ್ನಡದ ಮೂಲಜನಾಂಗಕ್ಕೆ ತೀರ ಹತ್ತುಗೆಯವರೆಂದು ಬೇರೆ ಬೇರೆ ದಿಕ್ಕಿನಿಂದ ವಿಚಾರಿಸುತ್ತಿರುವಾಗಲೂ ಅನುಭವಕ್ಕೆ ಬರುತ್ತಲಿದೆ. ಸ್ವಂತಆರಿಯರಿಗೂ ಈ ಮಾತು ಒಪ್ಪಿಗೆ ಇಲ್ಲದೆ ಇಲ್ಲ. ನಾಮದಾರ ಭಾಸ್ಕರರಾವ ಜಾಧವ, ಎಂ. ಎ.. ಎಲ್. ಎಲ್. ಬಿ. ಅವರು ಸ್ವತಃ ಆರಿಯರು; ಆರಿಯರ ಇಂದಿನ ನಾಯಕರು. ಅವರು ತಮ್ಮ ಒಂದು ಪುಸ್ತಕದಲ್ಲಿ 'ಮರಾಠರು ಆರ್ಯ—ದ್ರಾವಿಡ ಮಿಶ್ರವಂಶದವರು' ಎಂದು ಸ್ಪಷ್ಟವಾಗಿ ಪ್ರತಿಪಾದಿಸಿದ್ದಾರೆ.* ನಾಮದಾರ ಜಾಧವರು ಆರಿಯರಲ್ಲಿ ಇರುವುದೆಂದು ಹೇಳುವ 'ದ್ರಾವಿಡ' ಅಂಶವು ಕನ್ನಡಿಗರದೆಂದು ಸಿದ್ಧಪಡಿಸುವ ಅವಶ್ಯಕತೆಯಿಲ್ಲ. ಏಕೆಂದರೆ ಆರಿಯರಿಗೆ ಕರ್ನಾಟವು ಹತ್ತಿರವಿರುವಷ್ಟು ತಮಿಳನಾಡು ಇಲ್ಲ, ಆದುದರಿಂದ ವಂಶಮಿಶ್ರಣವು ಕನ್ನಡಿಗರೊಡನೆ ಆಗಿರುವುದೆಂಬುದು ಸ್ಪಷ್ಟವಾಗಿದೆ. ಇದರಿಂದ ಆರಿಯರೆಂಬವರು ಕನ್ನಡದ ಸಂಬಧಿಗಳೆಂಬುದು ನಿಶ್ಚಿತ.

ಆರಿಯರಾಗಲಿ ಆರಿಯ ಮಾತಾಗಲಿ ಕನ್ನಡದಿಂದ ದೂರದಲ್ಲಿ ಎಲ್ಲಿಯೊ ಬೇರೆ ಪ್ರದೇಶದಲ್ಲಿ ಹುಟ್ಟಿ, ಬೆಳೆದು ಆಮೇಲೆ ಕರ್ನಾಟಕದ ಮೇಲೆ ಆಕ್ರಮಣಕ್ಕಾರಂಭವಾಯಿತೆಂದು ಈ ವರೆಗೆ ಬಹುತರ ಎಲ್ಲ ವಿಂದ್ವಾಂಸರ ಗ್ರಹಿಕೆಯಿದ್ದಂತೆ ತೋರುತ್ತದೆ. ಆದರೆ ಇದು ತಪ್ಪು. ಯದುಗಳು ಎಂದರೆ ಜಾಧವರು; ಮರಾಠರು ಅವರ ಪೀಳಿಗೆ; ಎಂದು ಆರಿಯರು ಹೇಳಿಕೊಳ್ಳುವರು. ಕರ್ನಾಟದ ಗಂಗರೇ† ಮೊದಲಾದ ಅರಸರು ತಾವು ತುರುವಸುವಿನ ಸಂತತಿಯವರೆಂದು ಹೇಳಿದ್ದು ಇತಿಹಾಸದಿಂದ ಗೊತ್ತಾಗುತ್ತದೆ. ಆದರೆ

---

* ಮರಾಠಿ ವ ತ್ಯಾಂಚೀ ಭಾಷಾ; ೧೯೩೨. ಮತ್ತು ರಾಜವಾಡೆಯವರ ಜ್ಞಾನೇಶರಿಯ ಮುನ್ನುಡಿ, ಪುಟ. ೨; ಹಾಗೂ ವಿವಿ. ೧೯೨೭.

ಈ ಯದು ಮತ್ತು ತುರುವಸುಗಳತಂಡಗಳು ವೇದಕಾಲದಿಂದ ಸಂಮಿಶ್ರ ಗುಂಪುಗಳಾಗಿ ಬೆರತು ಕೊಂಡಿದ್ದುದು ಕಂಡುಬರುತ್ತದೆ.‡ ಆರಿಯ(ಮರಾಠಿ) ಭಾಷೆಯು ಆರ್ಯ ಭಾಷಾವರ್ಗಕ್ಕೆ ಸೇರಿದುದೆಂಬುದು ನಿಜ. ಆದರೆ ಅದರ ಬುಡಕಟ್ಟು ದ್ರಾವಿಡವಾಗಿದೆ ಎಂದು ನ್ಯಾಯಮೂರ್ತಿ ರಾನಡೆಯವರು ಹೇಳುತ್ತಾರೆ. ಇಲ್ಲಿ' ದ್ರಾವಿಡ' ಎಂದರೆ 'ಕನ್ನಡ' ವೆಂದೇ ಅರ್ಥ; ಈಮಾತನು ಹಿಂದೆ ವಿವರಿಸಲಾಗಿದೆ. ಆರಿಯರ ಜನಾಂಗ, ಭಾಷೆ,ನಡೆವಳಿ, ಧರ್ಮ ದೇವದೇವತೆಗಳು ಎಂಬಿವೇ ಮೊದಲಾದ ಒಂದೊಂದು ಸಂಗತಿಯನ್ನು ತಕ್ಕೊಂಡುತುಲನಾತ್ಮಕ ವಿಚಾರದಿಂದ ವಿಮರ್ಶಿಸಿದರೆ ಮರಾಠಿಸಂಸ್ಕೃತಿಯು ಕನ್ನಡಕ್ಕೆ ಎಷ್ಟೊಂದು ಋಣಿಯಾಗಿದೆ, ಎಂಬ ಮಾತು ಇನ್ನೂ ಹೆಚ್ಚು ಬೆಳಕಿಗೆ ಬರುವಂತಿದೆ. ಕನ್ನಡದಲ್ಲಿ ಪ್ರಾಕೃತ (ಆರಿಯ) ವು ಸೇರಿಕೊಂಡಿರುವಂತೆ, ಆರಿಯ ಭಾಷೆಯಲ್ಲಿ ಕನ್ನಡವು ಇಷ್ಟೊಂದು ಸೇರಿಕೊಂಡಿರುವುದೆಂಬ ಮಾತು ಕೂಡ ನಮ್ಮ ಮೇಲಣ ಸಿದ್ಧಾಂತವನ್ನೇ ಪುಷ್ಟೀಕರಿಸುತ್ತದೆ. ಈ ಸಿದ್ಧಾಂತದಿಂದಲ್ಲದೆ ಬೇರೆ ಯಾವ ವಿವರಣೆಗಳಿಂದಲೂ ಕನ್ನಡ—ಮರಾಠಿಗಳ ಈ ವಿಚಿತ್ರ ಸಮಸ್ಯೆಗೆ ಸಮಾಧಾನಕರವಾದ ಉತ್ತರವೆ ದೊರೆಯುವುದಿಲ್ಲ.

ಆರಿಯರಿಗೆ ೧೨-೧೩ನೆಯ ಶತಮಾನದ ವರೆಗೂ ಸ್ವತಂತ್ರನಾಗಿ ತಮ್ಮ ಕಾಲಮೇಲೆ ನಿಲ್ಲುವಂತಹಸ್ಥಿತಿಯೆ 'ಬಂದಿರಲಿಲ್ಲ. ದೇವಗಿರಿಯ ಯಾದವರು ಹಳೇಬೀಡಿನ ಹೊಯ್ಸಳರನ್ನು ಎದುರಿಸುವುದಕ್ಕಾಗಿ ಆರಿಯರ ಪಕ್ಷವನ್ನೆತ್ತಿದರು. ಆಗ ಕನ್ನಡಿಗರೂ ಎಚ್ಚತ್ತರು. ಅದುದರಿಂದಲೆ ಹಿಂದಿನ ಶಿಲಾ ಶಾಶನ' ತಾಮ್ರಪಟಗಳಲ್ಲಿ ಎಂದೂ ಕಾಣಿಸಿಕೊಳ್ಳದೆ ಇರುವಷ್ಟು ದಿವ್ಯವಾಗಿಯೂ ಭವ್ಯವಾಗಿಯೂ ಕನ್ನಡದ ಅಭಿಮಾನಜ್ಯೋತಿಯು ೧೨ನೆಯ ಶತಮಾನದಿಂದ ಮುಂದಿನ ಕಾಲದಲ್ಲಿ ಪ್ರತಿ ಶತಮಾನಕ್ಕೂ ಹೆಚ್ಚು ಹೆಚ್ಚಿನ ಉಜ್ವಲ ಸ್ವರೂಪದಲ್ಲಿ ಪ್ರಜ್ವಲಿಸಲಾರಂಭಿಸಿದುದು ಕಣ್ಣಿಗೆ ಬೀಳುತ್ತದೆ.

ಹೊಯ್ಸಳರ ಕಾಲದಲ್ಲಿ 'ಕನ್ನಡಿಗ' ಎಂಬ ಅಭಿಮಾನವು ಚೇತರಿಸಿತು. ಆ ರಾಜ್ಯವು ನಾಶವಾದ ಬಳಿಕ ಒಬ್ಬ '**ಕನ್ನಡ ಕುಲ**' ರನ್ನನೇ ಕರ್ಣಾಟ-ಸಿಂಹಾಸನ ಸ್ಥಾಪನೆಗೆ ಕಾರಣನಾದನೆಂದು ಒಂದು ಪರಂಪರೆಯು ಹೇಳುತ್ತದೆ. ವಿದ್ಯಾರಣ್ಯರು (ಮಾಧವಾಚಾರ್ಯರು) ಕೆಲರ ಅಭಿಪ್ರಾಯದಂತೆ ವಿಜಯ

‡ Vedic Index, see yadu. † I A. xIII, p. 275

ನಗರದ ಸಿಂಹಾಸನವನ್ನು ಸ್ಥಾಪಿಸಲಿ, ಸ್ಥಾಪಿಸದಿರಲಿ; ಭಾಷ್ಯ ಬರೆದು ಜಗತ್ತಿಗೆ ವೇದಗಳ ಬೆಳಕನ್ನು ದೊರಕಿಸಿಕೊಟ್ಟವರೂ, ಹಿಂದೂಸಂಸ್ಕೃತಿಯ ಸಂರಕ್ಷಕರೂ ಎಂದು ಜಗದ್ವಿಖ್ಯಾತರಾದವರೂ, ಅಖಿಲ ಭರತಖಂಡದ ಹಿಂದೂ ಜನಾಂಗಕ್ಕೆ ವಂದ್ಯರಾದವರೂ ಆದ ಸಾಯಣ, ಮಾಧವ ಬಂಧುಗಳು ತಾವು '**ಕನ್ನಡ ಕುಲ**'ದವರೆಂದು ಹೇಳಿಕೊಳ್ಳುತ್ತಿದುದು ಅವರ ಅಳಿಯ ಲಕ್ಷ್ಮೀಧರಾಮಾತ್ಯನ 'ಸುಮಧುರ' ಶಾಸನದಿಂದ ಗೊತ್ತಾಗುತ್ತದೆ. ವಿಜಯನಗರದ ರಾಜರು ಕೂಡ ಹೊಯ್ಸಳರಿಗಿಂತಲೂ ಒಂದಡಿ ಮುಂದಿಟ್ಟು ತಮ್ಮ ಪ್ರಶಸ್ತಿ, ಬಿರುದಾವಳಿಗಳಲ್ಲಿ **ಕರ್ಣಾಟದ** ಹೆಸರನ್ನು ನಿಃಸಂದಿಗ್ಧರೀತಿಯಲ್ಲಿ ಸೇರಿಸಿಕೊಂಡಿದ್ದಾರೆ. ವಿಜಯನಗರದ ರಾಜಪೀಠದ ಹೆಸರೇ ಕರ್ಣಾಟಸಿಂಹಾಸನವೆಂದು. ೨ನೆಯ ಹರಿಹರನು ತನಗೆ 'ಕರ್ಣಾಟದವಿದ್ಯಾವಿಲಾಸ' ನೆಂದು ಕೊಂಡಿದ್ದಾನೆ.* ಕೃಷ್ಣದೇವನು 'ಕರ್ಣಾಟರಾಜ್ಯರಮಾರಮಣ' ನೆಂದು ಖ್ಯಾತಿ. ವಿಜಯನಗರದ ಕಾಲದಲ್ಲಿ 'ಕರ್ಣಾಟ' ಎಂಬ ಮಾತು ಇಲ್ಲದ ಶಾಸನಗಳೆ ಕಡಿಮೆ, ಎಂದರೂ ಸಲ್ಲುವುದು.

ಇಂತು ತೊಳಗಿಬೆಳಗಲಾರಂಭಿಸಿದ್ದ ಕನ್ನಡದ ಅಭಿಮಾನಜ್ಯೋತಿಯು ತಾಳೀಕೋಟೆ (ರಕ್ಕಸತಂಗಡಿ)ಯ ಕಾಳೆಗದ ಬಿರುಗಾಳಿಗೆ ಸಂಪೂರ್ಣ ನಂದಿ ಹೋಯಿತೆಂದು ಹೇಳಬಹುದಾಗಿದೆ (೧೫೬೫). ೧೬ನೆಯ ಶತಮಾನದಲ್ಲಿ ನಂದಿದ ಈ ಜ್ಯೋತಿಯ ಸಣ್ಣ ಕುಡಿಯೊಂದು ೧೭ನೆಯ ಶತಕದಲ್ಲಿ ಮೈಸೂರ ಚಿಕದೇವರಾಜರ ಪುಣ್ಯದಿಂದ ಮತ್ತೆ ಸ್ವಲ್ಪ ಹೊತ್ತಿಕೊಂಡಂತಾಗಿದ್ದಿತು. ಆದರೆ ೧೮ನೆಯ ಶತಮಾನದಲ್ಲಿ ಹೈದರ ಟಿಪ್ಪುಗಳ ಸುಳಿಗಾಳಿಯಿಂದ ಅದೂ ಆರಿತು. ಟಿಪ್ಪುವಿನ ಸಂತತಿಯೇ ಮೈಸೂರಿನಲ್ಲಿ ಈ ವರೆಗೆ ಆಳಿದ್ದುದಾಗಿದ್ದರೆ ಕನ್ನಡವು ರುಂಡವಿಲ್ಲದದೇಹದಂತಾಗುತ್ತಿದ್ದಿತೆಂಬಲ್ಲಿ ಸಂದೇಹವಿಲ್ಲ. ಟಿಪ್ಪುವಿನ ವಂಶಸ್ಥರ ಕೈಯೊಳಗಿನ ಮೈಸೂರು ಎಂದರೆ ನಿಜಾಂ ಕರ್ಣಾಟದ ಇನ್ನೊಂದು ಅಣ್ಣ ಅಥವಾ ತಮ್ಮನಾಗುತ್ತಿದ್ದಿತೆಂಬಲ್ಲಿ ಸಂದೇಹವಿಲ್ಲ.

ಆದರೆ ಕರ್ಣಾಟವು ಈ ಕುತ್ತಿನೊಳಗಿಂದಲೂ ದೇವರ ದಯದಿಂದ ಪಾರಾಯಿತು. ಮೈಸೂರ **ಒಡೆಯರೆ** ಮತ್ತೆ ಕರ್ಣಾಟಸಿಂಹಾಸನಾಧೀಶರಾದರು. ಕನ್ನಡಕ್ಕೆ ಮತ್ತೆ ಉತ್ತೇಜನವು ದೊರೆಯಲಾರಂಭಿಸಿತು. ಕನ್ನಡದ

*EC. VI Kp. 34; 111 Me. 121.

ಜೀವಜ್ಯೋತಿಯು ಪುನಃ ಚೇತರಿಸಿತು. ಮೈಸೂರ ಸ್ವಾಭಿಮಾನವೂ ಚಿಗುರಿತು. ಮೈಸೂರೇ ಕರ್ಣಾಟವೆಂಬಂತೆ ಭಾವನೆಯು ತಲೆದೋರಿತು; ಇದುವೆ ಕೆಲರ ನಂಬುಗೆಯೂ ಆಯ್ತು!

ಉತ್ತರಕರ್ಣಾಟಕದ ತರುಣರಲ್ಲಿ ಇಂದು ಹೊರಹೊಮ್ಮುತ್ತಿರುವ ಕನ್ನಡದ ಅಭಿಮಾನ ಆವೇಶಗಳು ಹಿಂದೆ ಹೊಯ್ಸಳರ ಕಾಲದಿಂದಲೇ ಕಾಣಿಸಿಕೊಂಡಿದ್ದರೆ ಕರ್ಣಾಟಕಕ್ಕೆ ಈಗಳಿನಂತಹ ಕ್ಷೀಣದೆಸೆಯು ಎಂದೂ ಪ್ರಾಪ್ತವಾಗುತ್ತಿರಲಿಲ್ಲ. ನೃಪತುಂಗನ ಹೇಳಿಕೆಯಂತೆ ಕರ್ಣಾಟದ ಉತ್ತರಮೇರೆಯು ಗೋದಾವರಿ. ಆದರೆ ಕಾಲಕ್ರಮದಲ್ಲಿ ಇದು ಹೇಗೆ ದಕ್ಷಿಣಕ್ಕೆ ಸರಿಯುತ್ತ ಬಂದಿತೆಂಬುದು ನಮ್ಮ ನಾಡಿನ ಆಯಾ ಕಾಲದ ಪ್ರಮುಖರಾದ ರಾಜರು ರಾಜಧಾನಿಗಳು ಬದಲಾದ ಕ್ರಮವನ್ನು ನಿರೀಕ್ಷಿಸಿದರೆ ತಾನೆ ಗೊತ್ತಾಗುವಂತಿದೆ. ಸಾತವಾಹನರ ರಾಜಧಾನಿಯು ಗೋದಾತೀರದ ಪೈಠಣವಾಗಿದ್ದರೆ ಹಿರಿಯ ಚಲುಕ್ಯರು ಬಾದಾಮಿಗೆ ಬಂದರು; ಬಳಿಕ ರಾಷ್ಟ್ರಕೂಟರು ಮತ್ತು ಕಿರಿಯ ಚಲುಕ್ಯರ ಕಾಲದಲ್ಲಿ ಉತ್ತರದ ಮೇರೆಯು ಹಾಗೆ ಸ್ಪಷ್ಟವಾಗಿ ಕುಗ್ಗಿತೆಂದು ಹೇಳಲಿಕ್ಕೆ ಆಗದಿದ್ದರೂ ಮುಂದೆ ಹೊಯ್ಸಳರ ಆಳಿಕೆಯಲ್ಲಿ ತುಂಗಾತೀರವೇ (ಒಮ್ಮೆ ವೀರಬಲ್ಲಾಳನ ಕಾಲಕ್ಕೆ ಕೆಲದಿನ ಕೃಷ್ಣಾ) ಸ್ಥಿರವಾಗಿ ಉತ್ತರದ ಸೀಮಾರೇಷೆ ಆಯ್ತು! ಇದರ ಮೇಲಿಂದ ೬ ರಿಂದ ೧೨ನೆಯ ಶತಮಾನದ ಮಧ್ಯದಲ್ಲಿ ಮೆಲ್ಲಮೆಲ್ಲನೆ 'ತಿರುಳ್ಗನ್ನಡರ' (ನಾಡಿನ) ಕನ್ನಡತನವು ಹೇಗೆ ಹುರುಳಿಲ್ಲದುದಾಗುತ್ತಾ ನಡೆದಿದ್ದಿತೆಂಬ ಕಲ್ಪನೆಯು ಬಾರದೆ ಇರದು. ವಿಜಯನಗರದವರ ಕಾಲದಲ್ಲಿಯೂ ಉತ್ತರಕರ್ಣಾಟದ ಪರಿಸ್ಥಿತಿಯು ಅಷ್ಟೊಂದು ಬದಲಾಗಲಿಲ್ಲ. ತುಂಗಾತೀರದ ವಿಜಯನಗರವೆ ಕನ್ನಡದ ಗಂಡುಮೆಟ್ಟು ಆಗಿದ್ದಿತು. ತಾಳೀಕೋಟೆಯ (ರಕ್ಕಸತಂಗಡಿ) ಕಾಳೆಗದ ಬಳಿಕ, ಪೇಶ್ವರ ಆಳಿಕೆಯ ಹೊತ್ತಿಗೆ ಉತ್ತರಕರ್ಣಾಟವೆಲ್ಲವೂ 'ಮರಾಠವಾಡಾ' ದಕ್ಷಿಣ ಮಹಾರಾಷ್ಟ್ರವಾಗಿ ಪರಿಣಮಿಸಿತು!

ಇದಕ್ಕೆ ಸೋಜಿಗಬಡುವ ಕಾರಣವಿಲ್ಲ. ಡಾ. ಗ್ರಿಯರಸನ್ ಇವರು ಇಡಿ ಹಿಂದುಸ್ತಾನದ ಭಾಷೆಗಳ ಸ್ಥಿತಿಗತಿಗಳನ್ನು ಕುರಿತು ಅಭ್ಯಾಸಮಾಡಿ ಅವರಲ್ಲಿ ಬಂದ ಅನುಭವದ ಒಂದು ಸಂಗತಿಯನ್ನು 'Linguistic Survey of India 'ಎಂಬ ಮಹಾಗ್ರಂಥದ ಸಂಪುಟಗಳಲ್ಲಿ ಬಹಳ ಸ್ಪಷ್ಟವಾಗಿ ವಿವರಿ

ಸಿದ್ದಾರೆ. ಅವರ ಅಭಿಪ್ರಾಯದಂತೆ ಆವುದೆ ಒಂದು ಆರ್ಯಭಾಷೆ ಮತ್ತು ದ್ರಾವಿಡವೇ ಮೊದಲಾದ ಒಂದು ಆರ್ಯೇತರ ಭಾಷೆ ಹೀಗೆ ಇವೆರಡರ ಸಂಬಂಧವುಂಟಾದಾಗ **ಆರ್ಯಭಾಷೆಯು ಅನಾರ್ಯಭಾಷೆಯನ್ನು ಹಿಮ್ಮೆಟ್ಟಿಸಿ ಆಸ್ಥಳವನ್ನು ತಾನೇ ಆಕ್ರಮಿಸಿಬಿಡುತ್ತದೆ.** ಏಕೆಂದರೆ ಆರ್ಯ ವರ್ಗದ ಭಾಷೆಯನ್ನು ಆಡುವುದರಲ್ಲಿ ಗೌರವವುಂಟೆಂದು ಭಾವಿಸಿದ ಆರ್ಯೇತರಭಾಷೆಯ ಜನಗಳು ತಮ್ಮ ಮಾತಿನಲ್ಲಿ ಆ ಆರ್ಯಭಾಷೆಯ ಶಬ್ದಗಳನ್ನೆ ಹೆಚ್ಚು ಹೆಚ್ಚು ಬಳಸುತ್ತ ಕೊನೆಗೆ ತಮ್ಮ ಭಾಷೆಯನ್ನೆ ಅವರು ಮರೆತು ಬಿಡುವರು. ಡಾ. ಗ್ರಿಯರಸನ್ ಇವರು ಬರೆದ ಈ ಅನುಭವದ ಮಾತುಗಳಿಂದ ' ಗೋದಾವರಿವರಂ ಇರ್ದ ಕನ್ನಡವು' ಕೃಷ್ಣೆ-ತುಂಗಭದ್ರೆಗಳ ವರೆಗೂ ಹೇಗೆನೂಕಲ್ಪಟ್ಟಿರಬಹುದೆಂಬ ಸಂಗತಿಯು ಚೆನ್ನಾಗಿ ಗೊತ್ತಾಗುತ್ತದೆ.

ಆದರೂ ಕೃಷ್ಣೆಯ ವರೆಗಿನ ಉತ್ತರಕರ್ಣಾಟವು ಅಲ್ಪಸ್ವಲ್ಪ ಎಚ್ಚತ್ತಿದ್ದು ೧೯ನೆಯ ಶತಮಾನದ ಕೊನೆಯ ಭಾಗದಲ್ಲಿ! ಕ್ರಿ. ಶ. ೧೮೯೦ರಲ್ಲಿ ಸ್ಥಾಪಿತವಾದ **'ಕರ್ಣಾಟಕ ವಿದ್ಯಾವರ್ಧಕ ಸಂಘ'**ವೆ ಆ ಎಚ್ಚತ್ತ ಕರ್ಣಾಟವು ಕಾರ್ಯರಂಗಕ್ಕಿಳಿದ ಮೊದಲನೆಯ ಕುರುಹು. ಈ ಕಾಲದಲ್ಲಿ ಉತ್ತರ ಕರ್ಣಾಟವು ಹೇಗೆ ಮತ್ತು ಏಕೆ ಎಚ್ಚತ್ತಿತೆಂಬ ವಿವರಣೆಯು ಒಂದು ಸ್ವತಂತ್ರ ಪ್ರಬಂಧವಾಗುವಂತಿದೆ. ಅಂತು ಉತ್ತರಕರ್ಣಾಟವು ಎಚ್ಚತ್ತಿತು. ಎಚ್ಚತ್ತ ಬಳಿಕ ಕೆಲದಿನ ಎರಡು ಕರ್ಣಾಟಗಳು ಇನ್ನು ಕೆಲದಿನ ಮೂರು ಕರ್ಣಾಟಗಳು ನಾಲ್ಕು ಕರ್ಣಾಟಗಳು (ಹೀಗೆ ಧಾರವಾಡ, ಮೈಸೂರ, ಮಂಗಳೂರು, ಕೊಡಗು....) ನೆರೆಯವರ ಅರಿವು ಇಲ್ಲದೆ ಬೇರೆಬೇರೆಯಾಗಿದ್ದು, ತಮ್ಮ ತಮ್ಮ ಬಿಡಗು ಬಿಂಕಗಳಲ್ಲಿಯೆ ಮೈಮರೆತುದು ಗಮನಕ್ಕೆ ಬಂತು! ೧೯೧೫ರಲ್ಲಿ **ಅಖಂಡ ಕರ್ಣಾಟದ** ಕಲ್ಪನೆಯೆ ಮೈವೆತ್ತು **ಕರ್ಣಾಟ ಸಾಹಿತ್ಯ ಪರಿಷತ್ತು** ಆಯಿತು. ಇನ್ನು ಮುಂದೆ ಕನ್ನಡವು ಭಾರತೀದೇವಿಯ ಗುಡಿಯೊಳಗಿನ ಎಂದೂ ನಂದದ ಒಂದು ನಂದಾದೀಪವಾಗಿ ಜಗತ್ತಿನಲ್ಲಿ ಈ ನಾಡಿನ ಹೆಸರು ಬೆಳಕಿಗೆ ಬರಬೇಕಾಗಿದ್ದರೆ ಕರ್ಣಾಟವು ಸ್ವತಂತ್ರ ಪ್ರಾಂತವಾಗುವುದೊಂದೇ ಉಪಾಯವು, ಎಂಬ ಮನವರಿಕೆಯಾಗಿ 'ಕರ್ಣಾಟ ಏಕೀಕರಣ'ದ ಚಳವಳಿಯೂ ಬೇಗನೆ ಆರಂಭವಾಯಿತು. 'ಕನ್ನಡಿಗ'ರೆಂಬ ಅಭಿಮಾನವು ಕರ್ಣಾಟದ ಎಲ್ಲ ಭಾಗಗಳಲ್ಲಿಯೂ ಮೊಳೆತು, ಬೆಳೆಯಲಾರಂಭಿಸಿತು.

ಈಗ ಸಹ ಕರ್ಣಾಟದಲ್ಲಿ ಈ ಬಗೆಯ ಜಾಗ್ರತಿಗೆ ಮುಖ್ಯವಾದ ಕಾರಣವು ತೆಲುಗು, ಮರಾಠಿಗಳ ವಿಶೇಷವಾದ ಆಕ್ರಮಣವೇ. ಕನ್ನಡಕ್ಕಾದ ಒಳಬೇನೆಯು ೧೯ನೆಯ ಶತಮಾನದಲ್ಲಿ ಸ್ಪಷ್ಟವಾಗಿ ಹೊರಗೆ ಕಾಣಿಸಿಕೊಂಡಿತು. ಆದರೆ ಆ ಬೇನೆಯ ಸರಿಯಾದ ಪರೀಕ್ಷೆಯಾಗಿ ಅದಕ್ಕೆ ಹೊತ್ತು ಹೊತ್ತಿಗೆ ಔಷಧೋಪಚಾರಗಳು ಒದಗಲಿಲ್ಲ. ಬೇನೆಯು ಮಾಣದೆ ಈ ವರೆಗೆ ಹಾಗೆ ಉಳಿದುಕೊಂಡು, ಕೆಲವಟ್ಟಿಗೆ ಬೆಳೆದುಕೊಂಡು ಬಿಟ್ಟಿದೆ. ಆದರೂ ಕರ್ಣಾಟವನ್ನು ಈ ಮೊದಲಿನ ೩–೪ ಕುತ್ತುಗಳೊಳಗಿಂದ ಬದುಕಿಸಿ ಉಳಿಸಿದ ದೇವರು ಈ ಬಿಕ್ಕಟ್ಟಿನೊಳಗಿಂದಲೂ ಪಾರುಮಾಡುವನೆಂಬ ದೃಢಶ್ರದ್ಧೆಯಿಂದಲೂ ಸ್ವಾಭಿಮಾನದಿಂದಲೂ ಕನ್ನಡಿಗರು ಪ್ರಾಂತೀಕರಣಕ್ಕಾಗಿ ಹೆಣಗುತ್ತಲಿದ್ದಾರೆ.

ನಾಡಿನಲ್ಲಿ ತನ್ನತನದ ಅರಿವು ಉಂಟಾದುದರಿಂದ ಕನ್ನಡಿಗನಿಗೆ ತನ್ನ ನಿಜಸ್ಥಿತಿಯನ್ನು ಅರಿತುಕೊಳ್ಳುವ ಕುತೂಹಲವು ತಲೆದೋರಿತು. 'ಕನ್ನಡದ ಕತೆ'ಏನೆಂಬ ವಿಚಾರ ವಿಮರ್ಶೆಗಳು ನಡೆದುವು' **'ಕರ್ನಾಟಕ'**ವೊ**'ಕರ್ಣಾಟಕ'**ವೊ ಎಂಬ ಅರೆದಾಟಕ್ಕೆ ಆರಂಭವಾಯಿತು. ಈ ನಾ-ಣಾಗಳ ವಾಗ್ವಾದವೇ ಬೇಡ; ನಮ್ಮ ನಾಡು 'ಕನ್ನಡ', ನಾವು 'ಕನ್ನಡಿಗರು'; ಎಂಬ ನಿರ್ಣಯಕ್ಕೂ ಬಂದುದಾಯ್ತು. ಆದರೆ **'ಕನ್ನಡ'** ಎಂಬುದರ ಗುಟ್ಟು ಮಾತ್ರ ಇನ್ನೂ ಗೊತ್ತಾಗಲಿಲ್ಲ!



## ೩. ಕನ್ನಡದ ಹುಟ್ಟು

'ಕನ್ನಡಿಗ' ಎಂಬ ಪದದ ಅರ್ಥವು ಸ್ಪಷ್ಟವಿದೆ. ಆದರೆ 'ಕನ್ನಡ, ಎಂದರೇನು? ಓ! ಕ-ನ್ನ-ಡ ಎಂದರೆ ಏನು, ಇದೇ ತಿಳಿಯದಾಗಿ ಇದರ ಅರೆದಾಟವು ಕಳೆದ ಎಷ್ಟೋ ವರುಷಗಳಿಂದ ನಡೆದೇ ನಡೆದಿದೆ; ಇನ್ನೂ ನೆಲೆ ಇಲ್ಲ. ಕನ್ನಡಿಗರಿಗೆ 'ಕನ್ನಡ' ಎಂದರೇನು, ಎಂಬುದರ ಅರಿವೂ ಉಳಿದಿರ ಬಾರದೇ? ಸಾವಿರಾರು ವರುಷಗಳಿಂದ ಕನ್ನಡಿಗರು ತಮ್ಮ ಸಂಸ್ಕೃತಿ- ಪರಂಪ ರೆಗಳನ್ನು ದುರ್ಲಕ್ಷಿಸುತ್ತ ಬಂದುದರ ಪರಿಣಾಮವಿದು. ಕನ್ನಡವು ಮೆಲ್ಲ-ಮೆಲ್ಲನೆ ಕಣ್ಮರೆ ಯಾಗುತ್ತ ನಡೆದಿರುವದೇಕೆ ಮತ್ತೆ?

ಆರಿಯರಿಗೂ ಕನ್ನಡಿಗರಿಗೂ ಸಾವಿರಾರು ವರುಷಗಳ ನಿಕಟ ಸಂಬಂಧ. ಆರಿಯ ಮಾತಿನಲ್ಲಿ 'ಕನ್ನಡ' ಎಂಬುದಕ್ಕೆ ಒಂದು ವಿಶಿಷ್ಟ ಅರ್ಥವಿದೆ. ಅದು ಒಂದು ಪಡೆನುಡಿ (idiom). ಕನ್ನಡ ಎಂಬುದಕ್ಕೆ ಆರಿಯುಮಾತಿನಲ್ಲಿರುವ ಆ ಅರ್ಥವಾದರೂ ಸರಿಯಿರಬಹುದೆ? ಜ್ಞಾನೇಶ್ವರರು (೧೨೯೬) 'ಕನ್ನಡ' ಎಂಬ ಪದವನ್ನು ಹೀಗೆ ಉಪಯೋಗಿಸಿದ್ದಾರೆ:

> ಹೇ ಪರಿಸತಾಂ ಜರೀ ಕಾನಡೇ ।
> ತರಿ ಜಾಣ ಪಾಂ ಪಾರ್ಥ ಉಘಡೇ । —ಜ್ಞಾನೇಶ್ವರಿ ೬.೧೨೦.

ಇಲ್ಲಿ 'ಕನ್ನಡ' ಶಬ್ದಕ್ಕೆ 'ತಿಳಿಯದುದು' 'ಅಗಮ್ಯ' ಎಂಬ ಅರ್ಥವು ಉಂಟು. ಆದುದರಿಂದಲೆ ಕನ್ನಡಿಗರಿಗೆ 'ಕನ್ನಡದ ಅರ್ಥವು ಅಗಮ್ಯವಾಗಿ ತಿಳಿಯದಾಗಿರಬಹುದೆ? ಆದರೆ ಇಂಗ್ಲಿಷಿನಲ್ಲಿಯೂ ಗ್ರೀಕ ಮತ್ತು ಲ್ಯಾಟಿನ್ (ಭಾಷೆ) ಎಂಬ ಪದಗಳಿಗೆ ತಿಳಿಯದುದೆಂಬ ಅರ್ಥವುಂಟು. "it is Greek (and Latin) to me" (ನನಗೆ ಇದರ ಅರ್ಥವಾಗುವದಿಲ್ಲ), ಇಂಗ್ಲೀಷಿನಲ್ಲಿ 'ಗ್ರೀಕ್- ಲ್ಯಾಟಿನ್' ಎಂಬ ಮಾತಿಗಾಗಲಿ ಆರೆಯಲ್ಲಿ 'ಕನ್ನಡ' ಎಂಬುದಕ್ಕೆ ಆಗಲಿ 'ತಿಳಿಯದ ಮಾತು' ಎಂಬ ಅರ್ಥವು ವಿಶೇಷ ಪರಿಸ್ಥಿತಿಯಲ್ಲಿ ಬಂದು ಅಂಟಿಕೊಂಡುದೇ ಹೊರತು ಅದು ಮೂಲಾರ್ಥವಲ್ಲ. ಅದು ಅಲಂಕಾರಿಕ ಅರ್ಥ. ಸಾಮಾನ್ಯ ಇಂಗ್ಲೀಷಮನುಷ್ಯನಿಗೆ ಗ್ರೀಕ್-ಲ್ಯಾಟಿನ್‌ಗಳೂ ತಿಳಿಯವು.

ಸಾಮಾನ್ಯ ಅರಿಯರಿಗೂ ಮೆಲ್ಲಮೆಲ್ಲನೆ ಕನ್ನಡವು 'ಅರಿಯದ ಭಾಷೆಯಾಯ್ತು. ಆದರಿಂದ ಈ ಪದಗಳಿಗೆ 'ಅರಿಯದ್ದು', 'ತಿಳಿಯದ್ದು', 'ಅರ್ಥವಾಗದ್ದು' ಎಂಬ ಅರ್ಥವು ಅಂಟಿಕೊಂಡು ಆ ಬಳಿಕ ಅದೊಂದು ಪಡೆನುಡಿಯಾಗಿ idiom ಪರಿಣಮಿಸಿತು.

ಹಾಗಾದರೆ 'ಕನ್ನಡ' ಎಂದರೇನು? 'ಕನ್ನಡ' ಎಂದರೆ ಅದೊಂದು ಭಾಷೆ. ಬಂಗಾಳಿ, ಗುಜರಾಥಿ, ಹಿಂದಿ, ತಮಿಳು, ಮೊದಲಾದುವುಗಳಂತೆ. ಈ ಅರ್ಥವು ಬಳಕೆಯ ಮಾತಿನಲ್ಲಿ ಅಡಿಗಡಿಗೆ ಅನುಭವಕ್ಕೆ ಬರುತ್ತಿದ್ದು 'ಕನ್ನಡ' ಎಂದರೇನು ಎಂದು ಕೇಳುವುದು ಅದಾವ ಜಾಣತನ? ಎಂದೆನ್ನಬಹುದು ಕೆಲರು. ನಿಜ ನಾಡಿನ ಹೆಸರು 'ಕರ್ಣಾ(ರ್ನಾ)ಟ' ಮತ್ತು ನುಡಿ 'ಕನ್ನಡ' ಎಂದು ಹೇಳುವವಾಡಿಕೆಯುಂಟು ಕರ್ಣಾಟಕ್ಕೆ 'ಕನ್ನಡ-ನಾಡು' ಎಂತಲೂ ಕರೆವ ಪರಿಪಾಠವು ಈಗ ಕಂಡುಬರುತ್ತಲಿದೆ. 'ಕನ್ನಡ-ನಾಡು' ಎಂದರೇನು? ಕನ್ನಡವನ್ನು (ಭಾಷೆಯನ್ನು) ಆಡುವ ನಾಡು ಎಂದು ತಾನೆ ಇದರ ಅರ್ಥ? ಕವಿರಾಜಮಾರ್ಗ (೮೧೫) ಮೊದಲಾದ ಪುರಾತನ ಗ್ರಂಥಗಳಲ್ಲಿ 'ಕನ್ನಡ'ವೆಂದೇ ಈ ನಾಡಿಗೆ ಹೆಸರಿಸಿದ್ದಾರೆ. ಅಂತೂ ನಮ್ಮ ಇಂದಿನ ರೂಢಾರ್ಥದ ಮೇಲಿಂದ ವಿಚಾರಿಸಿದರೆ ನೃಪತುಂಗನ ಕಾಲದಲ್ಲಿಯೂ ಈ ನಾಡಿಗೆ ಕನ್ನಡ'ವೆಂಬ ಹೆಸರುಇಲ್ಲಿ ನಡೆಯುತ್ತಲಿದ್ದ 'ಕನ್ನಡ' ಭಾಷೆಯಿಂದಲೆ ಬಂದಿತೆಂದು ಹೇಳಬೇಕಾಗುತ್ತದೆ.

ಆದರೆ ದುರ್ದೈವದ ಸಂಗತಿ: ಭಾಷೆಯ ಮೇಲಿಂದ ಹೆಸರುಗೊಂಡ ಒಂದು ದೇಶವೂ ಭೂಮಂಡಲದಲ್ಲಿ ದೊರೆಯುವದಿಲ್ಲ! ಜನಾಂಗ ಅಥವಾ ದೇಶದಿಂದ ಭಾಷೆಗೆ ಹೆಸರುಂಟಾದುದನ್ನು ಕಾಣಬಹುದೇ ವಿನಾ ಇದರ ವಿಪರೀತವಾದುದನ್ನು ಎಲ್ಲಿಯೂ ಕಾಣಲು ಸಿಕ್ಕುವುದಿಲ್ಲ. ಆದುದರಿಂದ 'ಕನ್ನಡದ ಮಟ್ಟಿಗೇ ಇದು ತಿರುವು ಮುರುವಾಗಿ ನುಡಿಯಿಂದ ನಾಡಿಗೆ ಹೆಸರು ಬಂದಿತೆಂದು ಬಗೆವ ಕಾರಣವೇನು? ಆದಕಾರಣ ಗತಾನುಗತಿಕತ್ವದಿಂದ, ಎಂದರೆ ಬ್ಯಾಂಬ್ಯಾ ಪದ್ಧತಿಯರೂಢಿಯಿಂದ ಬಂದಿರುವ ಅರ್ಥವು ತಪ್ಪು ಎನ್ನಲಿಕ್ಕಾಗದಿದ್ದರೂ (ಏಕೆಂದರೆ ರೂಢಿಯೇ ಭಾಷೆಗೆ ಮೂಲ) ಅದು ಪರಮ ಅರ್ಥವಲ್ಲ. 'ಕನ್ನಡ ಎಂಬುದಕ್ಕೆ ಮೊದಲಿನ ಅರ್ಥವು-ಪರಮ ಅರ್ಥವು ಭಾಷೆಯೆಂದು ಇರಲಾರದು; ಆದುದರಿಂದ ಕನ್ನಡಕ್ಕೆ ಜನಾಂಗ ಅಥವಾ

ದೇಶವೆಂಬ ಎರಡರಲ್ಲಿ ಯಾವುದಾದರೂ ಒಂದು ಅರ್ಥವು ಇರಬೇಕಾಯ್ತು.

'ಕನ್ನಡರು' ಅಥವಾ 'ಕನ್ನಡಿಗರು' ಎಂಬಲ್ಲಿ 'ಕನ್ನಡ' ಇದು ಜನಾಂಗದ ಹೆಸರೆಂದು ಗ್ರಹಿಸಬೇಕೆ? ಇದಕ್ಕೆ ವಿದ್ವಾಂಸರ ಒಪ್ಪಿಗೆ ಇಲ್ಲ. ಒಂದು ಅರಗಳಿಗೆ ಇದು ಜನಾಂಗದ ಹೆಸರೆಂದು ಗ್ರಹಿಸಿದರೂ 'ಕನ್ನಡ'ಕ್ಕೇನು ಅರ್ಥ? ಈ ಹೆಸರೇಕೆ ಬಂದಿತು, ಈ ಜನಾಂಗಕ್ಕೆ? ಮಾತು ಕಟ್ಟಾಯಿತು. ಇದಕ್ಕೆ ಜನಾಂಗ ವಾಚಕ ಅರ್ಥವನ್ನು ಹೇಳುವ ಸಂಶೋಧಕರು ಯಾರೂ ಮುಂದೆ ಬಂದು ತಮ್ಮ ಮಾತು ಬೆಳೆಯಿಸಿಲ್ಲ. ಅಲ್ಲದೆ ಹಿಂದಿನ ಗ್ರಂಥಗಳನ್ನು ಸ್ವಲ್ಪ ಪರಿಶೀಲಿಸಿದರೆ ಕನ್ನಡವು ಮುಖ್ಯವಾಗಿ ದೇಶವಾಚಕವಾಗಿರುವುದೆ ಕಂಡುಬರುತ್ತದೆ.

ನೃಪತುಂಗನ (೮೧೫) ಕವಿರಾಜಮಾರ್ಗದಲ್ಲಿ 'ಕನ್ನಡ' ಎಂಬುದನ್ನು ನುಡಿ ಎಂಬ ಅರ್ಥದಲ್ಲಿ ಉಪಯೋಗಿಸಿರುವಂತೆ ನಾಡು ಎಂಬರ್ಥದಲ್ಲಿಯೂ ಪ್ರಯೋಗಿಸಿದ್ದುದನ್ನು ಕಾಣಬಹುದು. "ಕಾವೇರಿಯಿಂದ ಆ ಗೋದಾವರಿಯು ವರಂ ಇರ್ದ ನಾಡು ಅದು ಆ **ಕನ್ನಡ**ದೊಳ್ ಭಾವಿಸಿದ ಜನಪದಂ;" "ಪುಲಿಗೆರೆ, ಕಿಸುವೊಳಲ್, ಒಕುಂದ, ಕೊಪಣನಗರದ, ಈ ನಾಡು **ಕನ್ನಡ**ದ ತಿರುಳ್" ಎಂಬಲ್ಲಿ ಕನ್ನಡಕ್ಕೆ ದೇಶವೆಂದಲ್ಲದೆ ಬೇರೆ ಅರ್ಥವೆ ಸಾಧ್ಯವಿಲ್ಲ. ಆಂಡಯ್ಯನು ೧೨೩೫ 'ಮೆಲ್ಲಿಲರಿಂ ಪೂತ ಕೊಳಂಗಳಿಂ. . . . ಕನ್ನಡಂ ಎನಿಪ್ಪ ಆ ನಾಡು ಚೆಲ್ವಾಯ್ತು' ಎಂಬಲ್ಲಿ ಕನ್ನಡದ ಅರ್ಥವು ನಾಡು ಎಂದು ಆಹುದೊ ಅಲ್ಲವೊ ಎಂಬ ಬಗೆಗೆ ಸಂದೇಹಕ್ಕೆ ಇಂಬೇ ಇಲ್ಲ. ತಮಿಳ ಬೃಹತ್ ಕೋಶದಲ್ಲಿ* ಕನ್ನಡಂ ಎಂಬುದಕ್ಕೆ ದೇಶವೆಂದು ಅರ್ಥವನ್ನು ಕೊಟ್ಟಿದ್ದಾರೆ. ನನ್ನೂಲ್ ಎಂಬ ತಮಿಳ ವ್ಯಾಕರಣಕ್ಕೆ ೧೩ನೇ ಶತಮಾನದಲ್ಲಿ ಮಲ್ಲಿನಾಥರು ಬರೆದ ಟೀಕೆಯಲ್ಲಿ 'ಕನ್ನಡಂ' ಎಂಬ ಶಬ್ದವು ಬಂದಿದ್ದು, 'ಕನ್ನಡಂ' ಎಂದರೆ ಭರತಖಂಡದ ೫೬ ದೇಶಗಳಲ್ಲಿ ಒಂದು ದೇಶವೆಂದೂ ೧೮ ಭಾಷೆಗಳಲ್ಲಿ ಒಂದು ಭಾಷೆಯೆಂದೂ ಹೇಳಿದ್ದಾಗಿದೆ. ಇಷ್ಟು ಸುತ್ತು ಮಾತುಗಳೇತಕ್ಕೆ? ಈಗ ದಿನದ ಬಳಕೆ ಮಾತಿನಲ್ಲಿರುವ 'ಕನ್ನಡಿಗ' ಎಂಬುದರ ಅರ್ಥವಾದರೂ ಏನು? 'ಮೂಲದ ನರನಂ ಪೇಳ್ವಲ್ಲಿ ಇಗ ಪ್ರತ್ಯಯಂ' ಎಂದು ಕೇಶಿರಾಜನು (೧೨೬೦) ಹೇಳುತ್ತಾನೆ. ಕೇಶಿರಾಜನ ಅಭಿಪ್ರಾಯದಂತೆ ಕನ್ನಡಿಗರು ಎಂದರೆ ಕನ್ನಡದ ಮೂಲಿಗರು–ಮೊದಲಿಗರು; ಕನ್ನಡದ ಮೂಲಜನಾಂಗ.

*Tamil lexicon, (Madras University Publication)

ಆದರೆ ಇಂದು ಕನ್ನಡದ ಮೂಲ ಜನಾಂಗವು ಇಂತಹದೆ ಎಂದು ಪ್ರತ್ಯೇಕವಾಗಿ ಉಳಿದಿಲ್ಲ; ಉಳಿಯುವುದು ಸಾಧ್ಯವೂ ಇಲ್ಲ. ಆದುದರಿಂದ ಭಟ್ಟಾಕಲಂಕನು (೧೬೦೦) ಕೇಶಿರಾಜನಿಂದಲೂ ಸ್ವಲ್ಪ ಹೆಚ್ಚು ಸೂಕ್ಷ್ಮವಿಚಾರವನ್ನು ಮಾಡಿ ಕರ್ಣಾಟಕ ಶಬ್ದಾನುಶಾಸನದಲ್ಲಿ ಅದರ ವಿವರ ಕೊಟ್ಟಿದ್ದಾನೆ. ಅದು:

ಸೂತ್ರಂ || ಭವಜಾತಯೋಃ |೪೧೯||

ವೃತ್ತಿಃ || ತತ್ರೇತಿ ಸಪ್ತಮ್ಯಾ ಸಮರ್ಥಾತ್ ಭವ ಇತ್ಯರ್ಥೇ ಜಾತ ಇತ್ಯರ್ಥೆ ಚ ಇಗ ಪ್ರತ್ಯಯೋ ಭವತಿ.

ವ್ಯಾಖ್ಯಾ|| ಅತ್ರ ಭವ ಜಾತಯೋಃ ಇತಿ ಸ್ವರೂಪ ನಿರ್ದೇಶಃ ಕಿಮರ್ಥ ನಿರ್ದೇಶೋವಾ? ನಾದ್ಯಃ ನಹಿ ಅನಯೋಃ ಇಗ ಪ್ರತ್ಯಯಃ ಕುತ್ರಾಪ್ಯಶ್ರವಣಾತ್, ನ ದ್ವಿತೀಯಃ ಪದಾರ್ಥ ಭೇದಾಭಾವೇನದ್ವನ್ದ್ವಾ ಪ್ರಾಪ್ತಿ ಪ್ರಸಂಗಾತ್—ಇತಿ ಚೇನ್ನ. ಅರ್ಥ ಭೇದಸ್ಯ ಸತ್ತ್ವಾತ್, ನಹಿ ತತ್ರ ಭವಃ, ತತ್ರ ಜಾತ ಇತಿ ಚ ಪರ್ಯಾಯಃ ಭವನಂ ಹಿ ಸತ್ತಾ ಚಿರಸ್ಥಿತಿಃ ಸಾಚ ಅನ್ಯತ್ರ ಉತ್ಪನ್ನಸ್ಯಾಪಿ ಘಟತೇ; ನ ತತ್ರೋತ್ಪನ್ನಸ್ಯೈವೇತಿ. ಜನನಂ ಹಿ ಪ್ರಾದುರ್ಭಾವಃ ತತ್ರೈವೋತ್ಪತ್ತಿಃ ಇತಿ ಅಸ್ತಿ ಏವ ಅರ್ಥ ಭೇದೇತಿ ನ ಇತಿ ನ ದ್ವಂದ್ವಾನುಪಪತ್ತಿಃ ಇತಿ ಆಹ—ಕರಹಡಿಗಂ, ಕರಹಡೋ ದೇಶವಿಶೇಷಃ....

ಅಂತು ಕೇಶಿರಾಜ ಮತ್ತು ಭಟ್ಟಾಕಲಂಕದೇವ ಇವರಿಬ್ಬರ ಅಭಿಪ್ರಾಯವನ್ನು ನೋಡಿದರೂ 'ಕನ್ನಡ' ಎಂಬುದು ದೇಶವಾಚಕವೆಂಬ ಮಾತೇ ಸಿದ್ಧವಾಗುತ್ತದೆ. ಕನ್ನಡದ ಮೂಲಿಗರು —ಮೊದಲಿಗರು ಕನ್ನಡಿಗರು; ಕನ್ನಡದಲ್ಲಿ ಹುಟ್ಟಿದವರೂ ಕನ್ನಡಿಗರು; ಅದರಂತೆ ಕನ್ನಡದಲ್ಲಿ ಬಂದುನೆಲಿಸಿ ಬೆಳೆದವರೂ ಕನ್ನಡಿಗರೇ ಎಂದು ಭಟ್ಟಾಕಲಂಕನು ಹೇಳುತ್ತಾನೆ. ಆದುದರಿಂದ ಯಾವ ಬಗೆಯಿಂದ ವಿಚಾರಿಸಿದರೂ 'ಕನ್ನಡಿಗ' ಎಂಬ ಹೆಸರು ಆವ ನಾಡುವ ಮಾತಿನಿಂದ ಬಂದುದಲ್ಲ; ಆತನು ನೆಲಸಿದ ನಾಡಿನಿಂದ, ಎಂಬುದು ಸ್ಪಷ್ಟವಾಗುತ್ತದೆ. ಆದಕಾರಣ 'ಕನ್ನಡ' ಎಂದರೆ ಭಾಷೆಯಲ್ಲ; ದೇಶ.

ಹಳ್ಳಿಪಳ್ಳಿಗಳ ಹೆಸರುಗಳು ಕನ್ನಡದಲ್ಲಿರುವುದು ಎಷ್ಟು ಸಹಜ, ಸ್ವಾಭಾವಿಕವೋ ಅಷ್ಟು ಸಂಸ್ಕೃತದಿಂದ ಇರುವುದು ಸಂಭವನೀಯವಾಗಿಲ್ಲ. ಹಲಸಿಗೆಯು 'ಪಲಾಸಿಕಾ' ಎಂದು ಅಲ್ಪಸ್ವಲ್ಪ ಮಾರ್ಪಟ್ಟಿದೆ; ಆದರೆ 'ಮುಳುಬಾಗಿಲು' ಸಂಸ್ಕೃತದಲ್ಲಿ ಕಂಟಕಾನನ ಪಟ್ಟಣವಾಯ್ತು! ಕನ್ನಡದ ಊರುಕೇರಿಗಳ ಹೆಸರುಗಳನ್ನು ಹೀಗೆ ಎಳೆದಾಡಿ ಸಂಸ್ಕೃತಕ್ಕೆ ತಿರುಗಿಸಿಕೊಂಡು ಬರೆಯುವುದಕ್ಕಿಂತಲೂ ಮೂಲ ಕನ್ನಡದಲ್ಲಿಯೇ ಬರೆಯುವುದು ಲೇಸೆಂದು ಹಲವರು (ಶಾಸನವು ಸಂಸ್ಕೃತದಲ್ಲಿದ್ದರೂ ಭೂಮಿ ಸೀಮೆಗಳ ಹೆಸರನ್ನು ಕನ್ನಡದಲ್ಲಿ ಬರೆವ) ಈ ಪದ್ಧತಿಯನ್ನು ಸ್ವೀಕರಿಸುವಂತೆ ಕಂಡುಬರುತ್ತದೆ. ಗಂಗ ಭೂವಿಕ್ರಮನ ಶಾಸನದಲ್ಲಿ ಇದೆ ಪದ್ಧತಿಯಿದೆ. ಈ ಶಾಸನವು ಸಂಸ್ಕೃತ ಭಾಷೆಯಲ್ಲಿದ್ದರೂ ದೇಶದ ಹೆಸರನ್ನು 'ಕರ್ಣಾಟಕ' ಎಂದು ಬರೆಯದೆ 'ಕನ್ನಾಟಕ' ಎಂಬುದಾಗಿ ಹೇಳಿರುವ ಕಾರಣವೇನು? 'ಕನ್ನಾಡು' ಎಂದು ಪ್ರಾಚೀನಕಾಲದಿಂದ ರೂಢವಾಗಿದ್ದ ದೇಶೀಯ ನಾಮವನ್ನು 'ಕನ್ನಾಟಕ' ಎಂದು ಸಂಸ್ಕೃತಕ್ಕೆ ಒಗ್ಗಿಸಿಕೊಂಡಿರಬಹುದೆ? ಏಕೆಂದರೆ ದೇಶಭಾಷೆಯೊಳಗಿನ ಪ್ರಾದೇಶಿಕ ಹೆಸರುಗಳನ್ನು ಈ ಬಗೆಯಾಗಿ ಸಂಸ್ಕೃತೀಕರಿಸಿಕೊಳ್ಳುವ ಪರಿಪಾಠವು ಆ ಕಾಲದಲ್ಲಿದ್ದುದು ನಿಶ್ಚಿತವಾಗಿ ಗೊತ್ತಾಗಿದೆ. ಅಲ್ಲದೆ 'ಕನ್ನಾಡು' ಎಂಬ ರೂಪವು ತಮಿಳ ಶಾಸನ, ಸಾಹಿತ್ಯಗಳಲ್ಲಿ ಹಲವೆಡೆಗೆ ಗೋಚರವಾಗುತ್ತದೆ. ಪ್ರಾಕೃತ ಗ್ರಂಥದಲ್ಲಿಯೂ 'ಕನ್ನಾಡ' ಎಂಬ ಪ್ರಯೋಗವು ದೊರೆಯುತ್ತದೆ; ಅದರಂತೆ 'ಕಣ್ಣಾಡ' ಎಂಬ ಪ್ರಯೋಗಗಳುಂಟು. (ಇದರ ವಿಶೇಷ ವಿಚಾರವು ಮುಂದೆ ಬಂದಿದೆ.)

'ಪುನ್ನಾಡು' ಎಂಬ ಹೆಸರಿನ ಒಂದು ಪ್ರಾಚೀನ ದೇಶವಿತ್ತು. ಆ 'ಪುನ್ನಾಡು' ಎಂಬ ಹೆಸರು 'ಪುನ್ನಾಡ, ಪುಣ್ಣಾಡ, ಪುನ್ನಡ, ಪುನ್ನಾಟ' ಎಂದ್ಧು ಮುಂತಾಗಿ ಬದಲಾವಣೆಗಳನ್ನು ಹೊಂದಿದುದನ್ನು ಶ್ರೀ. ರಾಜರತ್ನರು ಹಲವು ಆಧಾರಗಳಿಂದ ಸಿದ್ಧಪಡಿಸಿದ್ದಾರೆ.* ಇದೇ ಮೇರೆಗೆ 'ಕನ್ನಾಡು' ಎಂಬ ಹೆಸರು ಕ್ರಮವಾಗಿ ಮಾರ್ಪಟ್ಟು **'ಕನ್ನಡ'** ಎಂಬ ಇಂದಿನ ರೂಪವನ್ನು ತಾಳಿತೆಂದು ಹೇಳಬಹುದಾಗಿದೆ. ನೃಪತುಂಗನ ಕಾಲದಲ್ಲಿ (೮೧೫) ಕನ್ನಡ ಶಬ್ದದ ಮೂಲಾರ್ಥವನ್ನು ಜನಗಳು ಇನ್ನೂ ಮರೆತಿದ್ದಿಲ್ಲ. ಕನ್ನಡವು

† ಕಸಾಪ. XXIII ಪುಟ ೧೬೦, ೧೮೪--೨೫೫.

ದೇಶವಾಚಕ ಶಬ್ದ; ನಾಡು ಅರ್ಥದ ಪದವನ್ನು ಅದು ಒಳಗೊಂಡಿದೆ ಎಂಬ ಅರಿವು ಆ ಕಾಲದಲ್ಲಿ ಇತ್ತು. ಈಗ ಈ ವಿಷಯಕ್ಕೆ ಕಗ್ಗತ್ತಲೆ! ಈಗಿನಂತಹ ಪರಿಸ್ಥಿತಿಯೆ ಆಗ ನೃಪತುಂಗನ ಕಾಲದಲ್ಲಿಯೂ ಇದ್ದರೆ "ಕಾವೇರಿಯಿಂದಂ ಗೋದಾವರಿಯು ವರಂ ಇರ್ದ ನಾಡು ಅದು ಕನ್ನಡಂ", "ಕನ್ನಡದ ತಿರುಳ್" ಎಂಬೀ ಬಗೆಯ ಮಾತಿನ ಅರ್ಥವೆ ಆಗುವ ಸಂಭವವಿದ್ದಿಲ್ಲ. ಹಾಗಿದ್ದಲ್ಲಿ ನೃಪತುಂಗನಿಗೆ 'ಕನ್ನಡನಾಡು', 'ಕನ್ನಡ ನಾಡಿನ ತಿರುಳ್ ಅಥವಾ ಕರ್ಣಾಟ ದೇಶ,' 'ಕರ್ಣಾಟದ ದೇಶದ ತಿರುಳ್' ಎಂಬೀ ರೀತಿಯಲ್ಲಿ ವರ್ಣಿಸಿ ಹೇಳ ಬೇಕಾಗುತ್ತಿತ್ತು!

ನೃಪತುಂಗನ ಕಾಲದಲ್ಲಿ 'ಕನ್ನಡ' ಪದವು ನಾಡು ಎಂಬ ಅರ್ಥವನ್ನೆ ನಿಶ್ಚಿತವಾಗಿ ವ್ಯಕ್ತಪಡಿಸುತ್ತಿದ್ದುದರಿಂದ ಈಗಿನವರಿಗೆ 'ಕನ್ನಡ' ದ ಮುಂದೆ ನಾಡು ಎಂಬ ಪದವನ್ನು ಮತ್ತೆ ಸೇರಿಸುವ ಅವಶ್ಯಕತೆಯು ತೋರಲಿಲ್ಲ. 'ಕನ್ನಡ–ನಾಡು' ಎಂದು ಹೇಳುವುದೂ 'ಚಾತುರ್ಮಾಸ್ಯ–ನಾಲ್ಕು ತಿಂಗಳು' ಎನ್ನುವುದೂ ಒಂದೆ! ಒಂದು ಶಬ್ದದ ಮೂಲಾರ್ಥದ ಮರೆವು ಹೆಚ್ಚಾದಂತೆ ಈ ಬಗೆಯ ದ್ವಿರುಕ್ತಿದೋಷದ ಪದಗಳು ತಲೆದೋರುತ್ತವೆ. ನೃಪತುಂಗನ ಕಾಲದಲ್ಲಿ 'ಕನ್ನಡ'ವು ನಾಡು—ಕನ್ನಾಡು ಎಂಬ ಮಾತಿನ ಸಂಪೂರ್ಣ ಎಚ್ಚರವಿದ್ದುದರಿಂದಲೆ ಆತನು ಈಗಿನವರಂತೆ ತನ್ನ ಗ್ರಂಥದಲ್ಲಿ 'ಕನ್ನಡ–ನಾಡು' ಎಂಬೀ ಬಗೆಯ ಪ್ರಯೋಗವನ್ನು ಮಾಡಲಿಲ್ಲ. 'ಕನ್ನಡ–ನಾಡು' ಎಂಬಲ್ಲಿ ಆಡಿದ್ದನ್ನೇ ಆಡುವ ಮರುಳತನವು ಬಯಲಿಗೆ ಬರುತ್ತಲಿದೆ. ಆಕಳ ಗೋಮೂತ್ರ, ಛಪ್ಪನ್ನೈವತ್ತಾರು, ಸಹ್ಯಾದ್ರಿ ಪರ್ವತ ಎಂಬೀ ಬಗೆಯ ಮಾತುಗಳೆಲ್ಲವೂ ಇದೇ ತೆರನಾದ ಉದಾಹರಣಗಳಾಗಿವೆ. ಕಂನಾಡವರು ತಮ್ಮ ದೇಶ, ಭಾಷೆಗಳ ವಿಷಯಕ್ಕೆ ತಾವು ಸರಿಯಾದ ಅರಿವನ್ನು ತಂದು ಕೊಂಡುದರ ಸೂಚಕವೆಂದು-ಕನ್ನಡ ನಾಡು ಎಂಬೀ ಬಗೆಯ ಅರಿವುಗೇಡಿ ತನದ ಪ್ರಯೋಗಗಳನ್ನು ಬಿಟ್ಟುಕೊಡಲಾರರೆ?

ಇಂದಿನವರಂತೆ ನೃಪತುಂಗನು (೮೧೫) 'ಕನ್ನಡ–ನಾಡು' ಎಂಬೀ ಬಗೆಯ ಶಬ್ದಪ್ರಯೋಗವನ್ನು ಮಾಡದೆ ದೇಶವೆಂಬ ಅರ್ಥದಲ್ಲಿ ಕೇವಲ 'ಕನ್ನಡ' ಎಂದು ಮಾತ್ರ ಹೇಳಿದ್ದಾನೆ. ಕನ್ನಡವೆಂದರೆ ನಾಡು ಎಂಬ ಅರಿವು ೧೫ನೆಯ ಶತಮಾನದ ವರೆಗಂತು ಉಳಿದಿತ್ತೆಂದು ಊಹಿಸಬಹುದಾಗಿದೆ.

ಆಂಡಯ್ಯನು (೧೨೩೫) 'ಕನ್ನಡಂ ಎನಿಪ್ಪ ಆ ನಾಡು ಚೆಲ್ವಾಯ್ತು' ಎಂದು ಹೇಳುತ್ತಾನೆ. ಆದರೆ ೧೭ನೆಯ ಶತಮಾನದ ಹೊತ್ತಿಗೆ ಇದರ ಅರಿಮರವಿಗೆ ಆರಂಭವಾಗಿ ಬಿಟ್ಟಿದ್ದಿತು. ಚಿಕ್ಕುಪಾಧ್ಯಾಯನು (೧೬೭೨) 'ಕನ್ನಡದ ನಾಡು ವಿರಾಜಿಪುದೆಂತು ಬಣ್ಣಿಪೆಂ' ಎಂಬಲ್ಲಿ ಷಷ್ಠಿವಿಭಕ್ತಿಯನ್ನು ಉಪಯೋಗಿಸುವದರಿಂದ ಈತನಿಗೂ ಮೂಲಾರ್ಥದ ನೆನಪು ಮಸಮಸಕಾಗಿ ಇನ್ನೂ ಉಳಿದಿತ್ತೇನೊ ಎಂಬ ಸಂಶಯವು ಉಂಟಾಗುವ ಹಾಗಿದೆ. ೧೩ನೆಯ ಶತಮಾನದ ಹಳೆಗನ್ನಡದ 'ಕನ್ನಡಂ ಎನಿಪ್ಪ ನಾಡು' ಎಂಬುದೆ ೧೭ನೆಯ ಶತಮಾನದ ನಡುಗನ್ನಡದಲ್ಲಿ 'ಕನ್ನಡದ ನಾಡು ಎಂಬುದಾಗಿ ಬಳಿಕೆಯಲ್ಲಿ ಬಂದಿರಬಹುದೆ? ೧೭ನೆಯ ಶತಮಾನದ ಬಳಕೆಯಲ್ಲಿದ್ದ 'ಕನ್ನಡದ ನಾಡು' ಎಂಬುದೂ ಹೋಗಿ ಇಂದು 'ಕನ್ನಡ–ನಾಡು' ಎಂದು ಹೇಳುವ ರೂಢಿಯು ಬಲವತ್ತರವಾಗಿದ್ದು, ಇದು ಕನ್ನಡದ ಮೂಲಾರ್ಥವನ್ನು ಸಂಪೂರ್ಣ ಮರೆತು ಬಿಟ್ಟುದರ ಕುರುಹಾಗಿದೆ. ಈ ಬಗೆಯಾಗಿ ಮರೆವು ಹೆಚ್ಚಾಗಿ ನುಡಿ ಎಂಬ ಅರ್ಥವೇ ಪ್ರಮುಖವಾಯಿತು. ದೇಶವೆಂಬ ಅರ್ಥದಲ್ಲಿ ಕರ್ಣಾಟ ಎಂಬ ಪದವು ಕನ್ನಡದ ಸ್ಥಾನವನ್ನು ಆಕ್ರಮಿಸಿತು.

ಒಟ್ಟಿನಲ್ಲಿ ಹೇಳಬೇಕಾಗಿದ್ದರೆ 'ಕನ್ನಡ' ಎಂಬುದಕ್ಕೆ, ಮೊದಲು ದೇಶವೆಂಬ ಅರ್ಥವೆ ಹೊರತು ಭಾಷೆ ಅಥವಾ ಜನಾಂಗ ಎಂದಲ್ಲ. 'ಕನ್ನಡ' ಎಂಬುದಕ್ಕೆ ನುಡಿ ಮತ್ತು ಜನ ಎಂಬ ಅರ್ಥಗಳು ಅಂಟಿಕೊಂಡುದು ಮುಂದೆ ಕಾಲಾಂತರದಲ್ಲಿ; ರೂಢಿಯಿಂದ.

'ಕನ್ನಡ'ವು ಮೂಲದಲ್ಲಿ ದೇಶವಾಚಕ ಎಂಬ ಮಾತನ್ನು ಇಂದು ಸಾಧಾರಣವಾಗಿ ಎಲ್ಲ ವಿದ್ವಾಂಸರು ಒಪ್ಪುವರು. ಆದರೂ ಅದರ ಹುಟ್ಟಿನ ಬಗೆಗೆ ಮಾತ್ರ ಇನ್ನೂ ಒಮ್ಮತವಾಗಿಲ್ಲ. ಎಷ್ಟು ಜನ ವಿಚಾರಿಗಳೊ ಅಷ್ಟು ಅಭಿಪ್ರಾಯಗಳು, ಎಂದು ಹೇಳಿದರೆ ಸ್ವಲ್ಪ ಅತಿಶಯೋಕ್ತಿಯಾಗಬಹುದು. ಕನ್ನಡ ಶಬ್ದವು ಹೇಗೆ ಬಳಿಕೆಯಲ್ಲಿ ಬಂದಿರಬೇಕೆಂಬ ವಿಚಾರದಲ್ಲಿ ಹಲವು ಬಗೆಯ ಅಭಿಪ್ರಾಯಗಳು ಮುಂದೆ ಬಂದಿವೆ. ಅವೆಲ್ಲವುಗಳನ್ನು ಪರ್ಯಾಲೋಚಿಸಿ ಕೆಳಗೆ ಕಾಣಿಸಿದಂತೆ ವಿಂಗಡಿಸಿ ಹೇಳಬಹುದು

೧. 'ಕನ್ನಡ'ವೆಂಬುದು ಮೂಲ ಶಬ್ದವಲ್ಲ. 'ಕರ್ಣಾಟ' ದಿಂದ 'ಕನ್ನಡ' ವಾಗಿದೆ. 'ಕರ್ಣಾಟ'ವು ಸಂಸ್ಕೃತ ಶಬ್ದ.

೩. ಕರ್ನಾಡು ( **ಕರ್ + ನಾಡು** ) ಎಂಬುದು ಮೂಲ ರೂಪ. ಕರ್ನಾಡು—ಕರ್ನಾಟ ( ಕನ್ನಾಡ, ಕನ್ನಡ )— ಮುಂದೆ ಸಂಸ್ಕೃತದಲ್ಲಿ ಕರ್ಣಾಟ(ಕ) ವಾಯಿತು. ಆದರೆ ಮೂಲಪದವು ಅಚ್ಚಗನ್ನಡ; 'ಕರ್ನಾಡು' ಎಂಬುದು.

೪. 'ಕರ್ನಾಡು' ಎಂಬುದು ಮೂಲಶಬ್ದ; ನಿಜ; ಆದರೆ ಅದನ್ನು ಬಿಡಿಸುವುದು ' ಕರ್ + ನಾಡು ' ಎಂದಲ್ಲ; ' ಕರು + ನಾಡು ' ಎಂದು. 'ಕರು' ಎಂದರೆ ಎತ್ತರ ಎಂಬರ್ಥ. ಕರು+ನಾಡು ( ಕರ್ನಾಡು, ಕರ್ಣಾಟ ) ಎಂದರೆ ಎತ್ತರದ ಸೀಮೆ; ತಪ್ಪಲು ಪ್ರದೇಶ.

೪. ಕರ್ನಾಡು ಮೊದಲಿನ ರೂಪ; ಸರಿ; ಆದರೆ ಅದರ ವಿಗ್ರಹವು ಕರಂ+ನಾಡು; ಕರು + ನಾಡು ಅಥವಾ ಕಡು + ನಾಡು ಎಂದೂ ಆಗ ಬಹುದು. ಆದರೆ ಕರಂ, ಕಡು, ಕರು ಇವೆಲ್ಲವುಗಳಿಗೂ ವಿಸ್ತೀರ್ಣ, ದೊಡ್ಡ, ಮಹಾ ಎಂದರ್ಥ. ಆದುದರಿಂದ ಕರ್ಣಾಟ=ಮಹಾರಾಷ್ಟ್ರ.

೫. ಕನ್ನಡ ( ಕನ್ನಾಡು ) ಎಂಬುದೇ ಮೂಲ ಶಬ್ದ. ಅದರಲ್ಲಿ ಕಪ್ಪುಮಣ್ಣು+ನಾಡು ಎಂಬ ಎರಡು ಪದಗಳು ಒಂದುಗೂಡಿವೆ. ಸಂಸ್ಕೃತ ಭಾಷೆಯಲ್ಲಿ ಕನ್ನಡವು ಕರ್ಣಾಟವಾಯ್ತು.

೬. ಕನ್ನಡವೆಂಬುದೇ ಮೊದಲಿನದಾದರೂ ಅದರಲ್ಲಿ ಹುದುಗಿ ಕೊಂಡು ಇರುವ ಪದಗಳು ಕನ್+ಅಳ್= ಕನ್+ಅಡ್= ಕನ್ನಡ.

೭. ಇವೆಲ್ಲ ಸುಳ್ಳು. ಕರ್ನಾಟಕವು ಮೂಲರೂಪ. ಕರ್+ನಾಟ್+ ಅಕ ಎಂಬ ಮೂರು ಪದಗಳಿಂದಾದ ಶಬ್ದವಿದು. 'ಕರ್ನಾಟಕ' ಎಂಬ ಪದವು ಅಚ್ಚಕನ್ನಡ. 'ಕರ್ನಾಟಕ' ಎಂಬ ಕನ್ನಡ ಶಬ್ದವೆ ಸಂಸ್ಕೃತದಲ್ಲಿ ಕರ್ಣಾಟಕ ಎಂದು ಆಯಿತು. ಬಳಿಕ ಕರ್ಣಾಟ ( ಕ ) ದ ತದ್ಭವವಾಗಿ ಕನ್ನಡವೆಂದಾಗಿರಬೇಕು.

ಇಂತಿವು ಕನ್ನಡದ ಹುಟ್ಟನ್ನು ಹೇಳಲು ಯತ್ನಿಸುವ ಏಳು ಬಣಗಳು. ಇವುಗಳ ಯುಕ್ತಾಯುಕ್ತತೆಯನ್ನು ಆರೆದು, ಒರೆದು ನೋಡುವ ಮೊದಲು ಒಂದು ಮಾತನ್ನು ಅರಿಕೆಮಾಡಿಕೊಳ್ಳುವುದು ಆವಶ್ಯವಾಗಿದೆ. ಪರಿಶ್ರಮಬಟ್ಟು ಕನ್ನಡದ ಹುಟ್ಟನ್ನು ಕಂಡುಹಿಡಿಯಲು ಹವಣಿಸಿ, ಈವಿಷಯದಲ್ಲಿ ಎಷ್ಟೋ ಹೊಸ ವಿಚಾರಗಳನ್ನು ಬೆಳಕಿಗೆ ತಂದ ಮೇಲಣ ಎಲ್ಲ ಹಿರಿಯ ವಿದ್ವಾಂಸರೂ

ಸಂಶೋಧಕರೂ ನನಗೆ ವಂದ್ಯರಾಗಿದ್ದಾರೆ. ಅವರ ದನಿಯಲ್ಲಿ ದನಿಗೂಡಿಸಿ ನುಡಿವ ಸಂದರ್ಭಗಳು ದೊರೆತಾಗಲೆಲ್ಲ ನನಗಾಗುವ ಹಿಗ್ಗು ಹೇಳಲಾಸಲ್ಲ; ಅವರಿಂದ ನನ್ನ ಅಭಿಪ್ರಾಯವು ಬೇರೆಯೆಂದು ಹೇಳುವಾಗ—ಸತ್ಯವೆಂದು ನನಗೆ ಹೊಳೆದ, ತಿಳಿದ ಸಂಗತಿಗಳು ಹಾಗೆ ಮಾಡಲು ಒತ್ತಾಯಪಡಿಸುತ್ತಿರು ವಾಗಲೂ, ಮನಸಿಗೆ ಸೊಗಸದು. ಆದರೂ ಇದು ಅನಿವಾರ್ಯ ಕಾರ್ಯ. ಶಾಂತವಾದ ವಿಚಾರ ವಿಮರ್ಶೆಗಳ ತರುವಾಯ ಸರಿಯೆಂದು ಎನಿಸಿದುದನ್ನು ಹಿರಿಯರ ಗೌರವವನ್ನು ಕಾಯುವದಕ್ಕಾಗಿ ಎಂಬ ಗ್ರಹಿಕೆಯಿಂದ ಆಡದೆ ಇದ್ದರೆ, ಅದರಿಂದ ಹಿರಿಯರಿಗೆ—ಹಿರಿಯರ ಸತ್ಯಕ್ಕೆ ಅನ್ಯಾಯ ಮಾಡಿದಂತೆ ಆಗುವುದು; ಹೊಸ ಸಂಗತಿಗಳು ಮುಂದೆ ಬಂದರೆ ಬಲ್ಲಿದರಾದ ಹಿರಿಯರಿಗೆ ಸಂತೋಷವೇ ಅಲ್ಲದೆ ಅಸಮಾಧಾನಕ್ಕೆ ಕಾರಣವಿಲ್ಲ; ಎಂಬ ನಂಬುಗೆಯಿಂದ ಈ ಚರ್ಚೆಯಲ್ಲಿ ಬಾಯಿಹಾಕುವ ಸಾಹಸ ಮಾಡಿದ್ದೇನೆ.

೧. ಈ ಮೊದಲನೆಯ ಪಂಥದಲ್ಲಿಯೆ ಮತ್ತೆ ಕೆಲವು ಒಳಪಂಗಡ ಗಳಿವೆ. ಇವರಲ್ಲಿ ಒಂದು ಪಕ್ಷದವರು ಪ್ರತಿಪಾದಿಸುವದೇನೆಂದರೆ: ಈ ಭಾಷೆಗೆ ಮೂಲವು ಸಂಸ್ಕೃತ. 'ಕನ್ನಡ' ಎಂಬುದು ತದ್ಭವವಾಗಿರುವುದರಿಂದ, ಇದಕ್ಕೆ ಮೂಲವಾದ 'ಕರ್ಣಾಟ' ಶಬ್ದವು ಸಂಸ್ಕೃತವೇ ಆಗಿರಬೇಕು ‡

ಈ ಪಕ್ಷದ ಮೂಲ ಗ್ರಹಿಕೆಯೆ ತಪ್ಪಿದೆ. ಕನ್ನಡವು ದ್ರಾವಿಡಭಾಷಾ ವರ್ಗಕ್ಕೆ ಸಂಬಂಧಪಟ್ಟುದೆಂದು, ಈಗ ತುಲನಾತ್ಮಕ ಭಾಷಾಶಾಸ್ತ್ರಜ್ಞರೆಲ್ಲರೂ ಬಹುತರವಾಗಿ ಒಪ್ಪಿಕೊಂಡಿದ್ದಾರೆ. ಆದುದರಿಂದ ಕನ್ನಡಕ್ಕೆ ಸಂಸ್ಕೃತವು ಮೂಲವೆಂಬ ಗ್ರಹಿಕೆಯೇ ನಿರಾಧಾರವಾದುದು. ಆದಕಾರಣ 'ಕರ್ಣಾಟ' ದ ತದ್ಭವನಾಗಿ ಕನ್ನಡವು ಹುಟ್ಟಿತೆಂಬ ಊಹೆಯು ಬಲವಿಲ್ಲದ್ದಾಯ್ತು. ಕೇಶಿರಾಜನೂ (ಕ್ರಿ ಶ. ೧೨೬೦), ಭಟ್ಟಾಕಲಂಕನೂ (೧೬೦೦) ಕರ್ಣಾಟವು ಮೂಲವೆಂದು ತಿಳಿದು ಅದರ ತದ್ಭವವೇ ಕನ್ನಡವಾಯಿತೆಂದು ಹೇಳಿದ್ದುದು ನಿಜ.‡ ಆದರೆ ತುಲನಾತ್ಮಕ ಭಾಷಾಶಾಸ್ತ್ರವು ಈಗಿನಷ್ಟು ಆ ಕಾಲದಲ್ಲಿ ಬೆಳವಣಿಗೆಯನ್ನು ಹೊಂದಿರಲಿಲ್ಲ. ಕೇಶಿರಾಜನ ಶಬ್ದಮಣಿದರ್ಪಣವಾಗಲಿ, ಭಟ್ಟಾಕಲಂಕನ ಶಬ್ದಾನುಶಾಸನವಾಗಲಿ ಸಂಸ್ಕೃತದ ಮಾದರಿಯಲ್ಲಿ ಬರೆಯ ಲ್ಪಟ್ಟಿದ್ದು, ಅವು ತಮಿಳು, ತೆಲುಗು, ತುಳು ಮೊದಲಾದ ಭಾಷೆಗಳೊಡನೆ

‡ ಕರ್ಣಾ—ಕರ್ನಾ. ಪುಟ ೧೩. ‡ ಶಮದ. ಮತ್ತು ಶಶಾ. ಗಳಲ್ಲಿ ತದ್ಭವ ಪ್ರಕರಣ.

ತೂಗಿ, ಅಳೆದು ರಚಿಸಲ್ಪಟ್ಟ ಕನ್ನಡ ವ್ಯಾಕರಣ ಗ್ರಂಥಗಳಲ್ಲ. ಆದುದರಿಂದ ಕೇಶಿರಾಜ, ಭಟ್ಟಾಕಲಂಕಾದಿಗಳ ಮಾತನ್ನು ಸತ್ಯಸಿದ್ಧಾಂತವೆಂದು ತಲೆಯ ಮೇಲಿಟ್ಟುಕೊಳ್ಳುವ ಮೊದಲು, ಈ ವಿಷಯವನ್ನು ಆಧುನಿಕ ತುಲನಾತ್ಮಕ ವಿಚಾರ ಪದ್ಧತಿಯಿಂದಲೂ ಚೆನ್ನಾಗಿ ವಿಮರ್ಶಿಸಿ ನೋಡುವುದು ಕರ್ತವ್ಯ ವಾಗಿದೆ.

ಕನ್ನಡವು ಕರ್ಣಾಟದ ತದ್ಭವವೆಂದು ನಿರ್ಧರಿಸಲು ಒಂದು ದೊಡ್ಡ ಅನುಕೂಲತೆಯಿದೆ. ಗ್ರಂಥಸ್ಥ ಪ್ರಮಾಣಗಳನ್ನು ನೋಡಿದರೆ ಸಂಸ್ಕೃತ ಸಾಹಿತ್ಯವೆ ಅತಿ ಪ್ರಾಚೀನ ಕಾಲದಿಂದಲೂ ದೊರೆಯುತ್ತಿರುವುದರಿಂದ 'ಕರ್ಣಾಟ' ವೆಂಬುದೇ ಕನ್ನಡಕ್ಕಿಂತ ಮೊದಲಿನದೆಂದು ಹೇಳಬೇಕಾಗುತ್ತದೆ. ಕ್ರಿ. ಶ ಮೊದಲು ೩ನೆಯ ಶತಮಾನದ ಸುಮಾರಿಗೆ ಈಗಿನ ರೂಪದಲ್ಲಿ ರಚಿಸಲ್ಪಟ್ಟಿತೆಂದು ಹೇಳುವ ಮಹಾಭಾರತದಲ್ಲಿ ಕರ್ಣಾಟ(ಕ) ಎಂಬ ಪದವು ಸಿಕ್ಕುತ್ತದೆಂಬುದನ್ನು ಈ ಮೊದಲೆ ಸೂಚಿಸಿದ್ದಾಗಿದೆ. ( ಪುಟ ೭ ). ಆದರೆ 'ಕನ್ನಡ'ವೆಂಬುದು ದೊರೆಯುವುದು ಕ್ರಿ. ಶ. ೯ನೆಯ ಶತಮಾನದ ಕವಿರಾಜ ಮಾರ್ಗದಲ್ಲಿ !

ಇದು ನಿಜ. ಆದರೆ ಕನ್ನಡ ಮತ್ತು ಸಂಸ್ಕೃತಗಳ ವಯಸ್ಸಿನ ಹಿರಿ–ಕಿರಿತನವನ್ನು ಕೇವಲ ಉಪಲಬ್ಧ ಗ್ರಂಥಗಳ ಆಧಾರದಿಂದಲೇ ನಿರ್ಣಯಿಸಲಿಕ್ಕೆ ಆಗುವುದಿಲ್ಲ. ಸಂಸ್ಕೃತದವರು ಸಾಹಿತ್ಯ ಸೃಷ್ಟಿಯಿಂದ ಹಿರಿಯರಾಗಿದ್ದರೂ ಹಿಂದೂ ದೇಶದಲ್ಲಿ ವಯೋಮಾನದಿಂದ ಕನ್ನಡದ ಮೊದಲಿಗರು ಹಿರಿಯರು ಆಗಿದ್ದಾರೆ; ದ್ರಾವಿಡರು ಆರ್ಯ ಪೂರ್ವ ಜನಾಂಗ, ಎಂಬುದು ಈಗ ಸಾಮಾನ್ಯವಾಗಿ ಸರ್ವಮಾನ್ಯವಾದ ಸಂಗತಿಯಾಗಿದೆ.

ಆರ್ಯರ ಪ್ರಾಚೀನತಮ ಗ್ರಂಥಗಳೆನಿಸಿದ ವೇದ, ಉಪನಿಷತ್ತುಗಳಲ್ಲಿರುವ ಎಷ್ಟೋ ಶಬ್ದಗಳು ದ್ರಾವಿಡ ಭಾಷಾವರ್ಗದುವೆಂದು ಸಂಶೋಧಕರು ನಿರ್ಧರಿಸಿದ್ದಾರೆ.* ಮೂಲ ದ್ರಾವಿಡದ ಶೆನ್ ( ಶ್ಚಂದ್ರ ) ಎಂಬುದು ಚೆನ್ (ಚಂದ್ರ) ಎಂದು ಉಚ್ಚಾರದಲ್ಲಿ ಬದಲಾವಣೆಯಾದ ಋಗ್ವೇದ ಕಾಲದಲ್ಲಿಯೆ ಕನ್ನಡ ನುಡಿಯು ತಲೆದೋರಲಾರಂಭಿಸಿತು.‡ ಛಾಂದೋಗ್ಯ (೧.೧೦. ೧)

* Dr. S. K. Chatterjee, D. B. L.; Prof. Levi, Bloch etc. PAPD.

‡ ಕವೀಕ್ಷ. ಪುಟ ೬೪–೬೬.

ದಲ್ಲಿ ಬಂದ 'ಮಟಚಿ' ಎಂಬ ಶಬ್ದವು ಕನ್ನಡದಲ್ಲಿ ಈಗಲೂ ಬಳಕೆಯಲ್ಲಿರುವ ಮಿಡಿಚೆಯೆಂಬ ಶಬ್ದವೆ ಎಂದು ಡಾ. ಜಾಕೋಬಿ, ಡಾ. ಪಾಠಕ ಮೊದಲಾದವರು ಗೊತ್ತುಪಡಿಸಿದ್ದಾರೆ. ಡಾ. ದೇವದತ್ತ ಭಂಡಾರಕರರು ಇದನ್ನು ಕುರಿತು ಹೇಳುವುದೇನಂದರೆ:

Matachi is a Sanskritised form of the well-known Canarese word 'midiche' which Is explained by Kittel's Dictionary as ' a grass-hopper, a locust ' and which is used in this sense to this day in the Dharwar District. Scholars are unanimous on the point thaf Chhandogya Upanishad is one of the earliest of the Upanishads. Nobody douts that this Upanishad was put together in the North of India, especially in the Punjab, and that Sanskrit language in which it is composed represents the current speech of the day. And yet we find in it a term which is a genuinely Dravidian word. †

ಅಲ್ಲದೆ ಇನ್ನೂ ಒಂದು ಮಾತು ವಿಚಾರಣೀಯವಾಗಿದೆ. ಕನ್ನಡವನ್ನು ಆಡುವ ಜನಾಂಗವು ಹಿಂದೂದೇಶಕ್ಕೆ ಹೊಸತಾಗಿ ಕ್ರಿ. ಶ. ಕ್ಕೆ ಮೊದಲು ೩–೪ನೆಯ ಶತಮಾನದ ಸುಮಾರಿಗೆ (ಮಾರ್ಸಟ್ಟಿ–ಮಹಾಭಾರತದ ರಚನಾ ಕಾಲದಲ್ಲಿ) ಬಂದು ನೆಲಸಿತೆಂದು ಇತಿಹಾಸವು ಹೇಳುವುದಿಲ್ಲ. ಬಂದರಗಳಿಗೆ ಆಗ ತಾನೆ ಈ ದೇಶಕ್ಕೆ ಬಂದ ಜನಾಂಗವಿದೆಯೆಂದು ಗ್ರಹಿಸಿದರೂ ಈ ಜನಾಂಗಕ್ಕೆ ತನ್ನ ಭಾಷೆಯೊಳಗಿನದೆ ಆದ ಯಾವುದಾದರೂ ಒಂದು ಹೆಸರು ಇರಬೇಕಲ್ಲವೆ? ಶಕ, ಯವನ, ಪಾರಸಿಕ ಮೊದಲಾದ ಹೆಸರುಗಳಂತೆ ಈ ಸಂಸ್ಕೃತೇತರ ಭಾಷೆಯ ಜನಾಂಗದ ಸ್ವಭಾಷೆಯೊಳಗಿನ ಮೂಲ ಹೆಸರಾವುದು? ಈ ಜನಾಂಗಕ್ಕೆ ಇವರ ನಾಡಿಗೆ ಇರಬಹುದಾದ ಹೆಸರು ಈ ವರ್ಗದವರ ಭಾಷೆಗೆ ಸಂಬಂಧಪಟ್ಟುದೇ ಇರುವುದು ಹೆಚ್ಚು ಸಂಭವನೀಯವೂ ಸಮಂಜಸವೂ ಆಗಿಲ್ಲವೇ ?

ಮಹಾಭಾರತವು ಈಗಿನ ರೂಪದಲ್ಲಿ ಕ್ರಿ. ಶ. ಕ್ಕೆ ಮೊದಲು ೩ನೆಯ

† CL. pp. 25–27.

ಶತಮಾನದಲ್ಲಿ ಪೂರ್ವಟ್ಟಿತೆಂದೂ ಅದಕ್ಕೂ ಮೊದಲು ಅದು ಇಷ್ಟು ದೊಡ್ಡ ದಾಗಿರಲಿಲ್ಲವೆಂದೂ ಹಲವರು ಊಹಿಸಿದ್ದಾರೆ.* ಈಗಿನ ಮಹಾಭಾರತದಲ್ಲಿ ಕರ್ಣಾಟದ ಹೆಸರು ಇರುವುದರಿಂದ ಈ ನಾಡು ಕ್ರಿ. ಶ. ಕ್ಕೆ ಮೊದಲು ೩೦೦ ವರುಷಗಳಿಂದಲೂ ತಲೆಯೆತ್ತಿ ಬಾಳುತ್ತಿದ್ದಿತೆಂದು ನಿಶ್ಚಿತವಾಗಿ ಅರಿತುಕೊಳ್ಳ ಬಹುದಾಗಿದೆ; ಅದಕ್ಕೂ ಮೊದಲಿನ ಭಾರತದ ಪ್ರತಿಯಲ್ಲಿ ಕರ್ಣಾಟದ ಹೆಸರು ಇರುವ ಸಂಭವವು ಹೆಚ್ಚಾಗಿದೆ, ಎಂಬ ವಿಚಾರವು ಹಿಂದೊಮ್ಮೆ ಬಂದಿದೆ. ಆದುದರಿಂದ ಭಾರತದ ಆಗಿನ ಘಟನೆಗಳಲ್ಲಿ ಕನ್ನಡರೂ ಅಂಶಭಾಗಿಗಳಾಗಿರ ಲಿಕ್ಕೆ ಸಾಕು. ಅದೇನೆ ಇರಲಿ; ಕ್ರಿ. ಶ. ಕ್ಕೆ ಮೊದಲು ೩೦೦ ರಲ್ಲಿ ಸಿದ್ಧವಾದ ಮಹಾಭಾರತದ ಪ್ರತಿಯಲ್ಲಿ ಕರ್ಣಾಟದ ಉಲ್ಲೇಖವಿರುವುದರಿಂದ ಕನಿಷ್ಠ ಆ ಕಾಲದಲ್ಲಂತೂ ಈ ನಾಡು ಇದ್ದೇ ಇರಬೇಕಷ್ಟೆ ? ನಾಡು ಇದ್ದಬಳಿಕ ನಡೆ (ಜನ) ಯಿರಬೇಕು; ಆದಕಾರಣ ನುಡಿಯಿರಲೇ ಬೇಕು. ಕನ್ನಡ ಸಾಹಿತ್ಯವು ಕ್ರಿ. ಶ. ೪-೫ನೆಯ ಶತಮಾನದಿಂದ ಮುಂದೆ ದೊರೆಯುತ್ತಲಿದ್ದರೂ ಕ್ರಿ. ಶ. ಮೊದಲು ೩೦೦ ವರುಷಗಳಿಂದ ನಾಡು ಕಟ್ಟಿಕೊಂಡು ನೆಲಸಿದ್ದ (ಏಕೆಂದರೆ ಮಹಾಭಾರತದಲ್ಲಿ ಉಳಿದ ಹಲವು ನಾಡುಗಳಂತೆ ಕರ್ಣಾಟದ ಉಲ್ಲೇಖವೂ ಇರುವುದರಿಂದ) ಈ ಜನಗಳ ದೇಶಕ್ಕೂ ಭಾಷೆಗೂ ಅವರದೇ ಆದ ಒಂದು ಹೆಸರು ಇದ್ದಿಲ್ಲವೆಂದು ಊಹಿಸುವುದೆಂದರೆ ಸ್ವಲ್ಪ ಅಸಮಂಜಸವಾಗುವ ಹಾಗಿದೆ.

ಹಿಂದೂದೇಶದಲ್ಲಿ ಆರ್ಯರ ಮೊದಲು ಬೇರೂರಿದ್ದ ಜನಾಂಗಗಳು ಎರಡು. (೧) ಕೋಲರ ಕುಲ (Austro-Asiatic) ಮತ್ತು (೨) ದ್ರಾವಿಡ ಕುಲ (ಇವರೆ ಹಾಲುಮತದವರು). ಇವರಲ್ಲಿ ಕೋಲರ ನಂತರ ದ್ರಾವಿಡರು ಬಂದರೆಂದು ಬಲ್ಲಿದರ ಅಭಿಪ್ರಾಯ. ಕೋಲರ ಹಂಗಡಗಳು ನೆಲಸಿದ ನಾಡು ಗಳು ಮುಖ್ಯವಾಗಿ ಹಿಂದೂದೇಶದ ಪೂರ್ವ ದಿಕ್ಕಿಗಿವೆ. ದ್ರಾವಿಡ ವರ್ಗದವರ ದೇಶಗಳು ವಿಂಧ್ಯದಿಂದ ದಕ್ಷಿಣಕ್ಕೆ ಉಳಿದಿವೆ.

ಪ್ರೊ. ಲೆವಿ ಎಂಬ ವಿದ್ವಾಂಸರಾದ ಸಂಶೋಧಕರ ಅಭಿಪ್ರಾಯದಮೇರೆಗೆ ಹಿಂದೂದೇಶದ ಪೂರ್ವದಿಕ್ಕಿನ ಹಲವು ದೇಶಗಳ ಹೆಸರುಗಳು ಕೋಲರಭಾಷಾ ವರ್ಗಕ್ಕೆ ಸೇರಿದವುಗಳೆ ಆಗಿವೆ. ತಮ್ಮ ಒಂದು ಮನನೀಯ ಪ್ರಬಂಧದಲ್ಲಿ

* Prof Sylvain Levi, BCV.p.99; ಚಿ. ವಿ. ವೈದ್ಯ ಮಭಾವು; ಟಿಳಕ ಗೀ,ರ.

ಅವರು ಇದನ್ನು ಸಿದ್ಧಪಡಿಸಿದ್ದಾರೆ.* ಕೋಸಲ–ತೋಸಲ, ಅಂಗ–ವಂಗ, ಕಲಿಂಗ–ತ್ರಿಲಿಂಗ, ಉತ್ಕಲ–ಮೇಕಲ, ಪುಲಿಂದ–ಕುಲಿಂದ ಇವುಗಳು ಸಂಸ್ಕೃತ ಭಾಷೆಯ ಪದಗಳಲ್ಲ. ಕೋಲರ ಪಂಗಡದವರು ನೆಲಸಿದ್ದ ಆ ನಾಡಿಗೆ ಆ ಕೋಲರ ವರ್ಗದ ಭಾಷೆಯೊಳಗಿಂದಲೆ ಬಂದ ಭಾಷೆಯ ಹೆಸರುಗಳೆಂಬ ಮಾತನ್ನು ಅನೇಕಾನೇಕ ಪ್ರಮಾಣಗಳನ್ನು ಕೊಟ್ಟು ಮನವರಿಕೆಯಾಗುವಂತೆ ವಿವರಿಸಿದ್ದಾರೆ. ಕೋಲರ ಪಂಗಡದ ನೆಲೆವೀಡುಗಳಿಗೆ ಅವರ ಭಾಷೆಯೊಳಗಿಂದಲೆ ಹೆಸರು ಬಂದಿರುವಂತೆ ದ್ರಾವಿಡ ವರ್ಗದ ಜನಾಂಗಗಳು ಬೇರೂರಿ ಕೊಂಡಿರುವ ನಾಡುಗಳಿಗೂ ಅವರ ಭಾಷೆಯೊಳಗಿನ ಹೆಸರುಗಳು ಬಂದಿವೆ ಯೆಂದು ಊಹಿಸಲು ತುಂಬ ಇಂಬಿದೆ. ಆದುದರಿಂದಲೆ ಆರ್ಯಾವರ್ತದ ಹೊರಗಿನ–ದ್ರಾವಿಡ ದೇಶದೊಳಗಿನ ಲಾಟ, ಮರಹಟ್ಟ, ಕನ್ನಡ, ಆಂಧ್ರ (ತೆಲುಗು ಆಂಧ್ರದಿಂದ ಬೇರೆ), ತಮಿಳ ಮಲೆಯಾಳು ಮತ್ತು ಕೊಂಕಣ ಈ ನಾಡುಗಳ ಹೆಸರುಗಳು ಸಂಸ್ಕೃತದಿಂದ ಬಂದಿರದೆ ದ್ರಾವಿಡ ಭಾಷಾ ವರ್ಗಕ್ಕೆ ಸಂಬಂಧಪಟ್ಟವುಗಳೇ ಆಗಿರಬೇಕೆಂದು ಸಹಜವಾಗಿ ಊಹಿಸಬಹುದಾಗಿದೆ. ಈ ನಾಡುಗಳ ಹೆಸರುಗಳನ್ನು ವ್ಯುತ್ಪತ್ತಿಶಾಸ್ತ್ರದ ದೃಷ್ಟಿಯಿಂದ ಪರೀಕ್ಷಿಸಿ ನೋಡಿದರೆ ಅವುಗಳು ಸಂಸ್ಕೃತದುವು ಅಲ್ಲವೆಂದೇ ಸಿದ್ಧವಾಗುತ್ತಲಿದೆ. ಏಕೆಂದರೆ ಸಂಸ್ಕೃತ ಭಾಷೆಯಿಂದ ಈ ದೇಶ-ನಾಮಗಳಿಗೆ ಸಮರ್ಪಕವಾಗಿ ಅರ್ಥವೆ ಲಗುವುದಿಲ್ಲ. ಅಲ್ಲದೆ ಈ ನಾಡುಗಳ ಮೂಲನಿವಾಸಿಗಳು, ಅವರ ಸಂಸ್ಕೃತಿಯ ಐತಿಹ್ಯವು ಇವರ ಬೆಂಬಲಕ್ಕಿದೆ.

ಕನ್ನಡ (ಕನ್ನಾಡು) ಶಬ್ದಕ್ಕಿರುವ ಅರ್ಥವು ಅಸಂಬದ್ಧವಾಗಿಲ್ಲ. ಇದು ಒಂದು ದೇಶವೆಂಬ ಅರ್ಥವನ್ನು ಹೇಳುವುದು. ಆದರೆ ಸಂಸ್ಕೃತವೆಂದು ಹೇಳುವ 'ಕರ್ನಾಟ (ಕ)' ವೆಂಬ ಶಬ್ದಕ್ಕೆ ಹಿಂದಿನವರು ಮಾಡಿದ ಅರ್ಥಗಳು ಎಷ್ಟು ಅಸಂಬದ್ಧವಾದವುಗಳೂ ಅಸಮಂಜಸವೆನಿಸುವಂತಹವುಗಳೂ ಆಗಿವೆ ಯೆಂಬುದನ್ನು ಕೆಳಗಿನ ಅವತರಣಿಕೆಗಳಿಂದ ಅರಿತುಕೊಳ್ಳಬಹುದು.

i " ಕರ್ಣೇಷು ಅಟತಿ, ಪ್ರಭೂತ ಯಶಸ್ವಿನ ಏತದ್ದೇಶಸ್ಥ
ರಾಜ್ಞಃ ಗುಣಾದಿ ಕೀರ್ತನೇನ ಸರ್ವೇಷಾಂ ಕರ್ಣೇಷು

* PAPD. pp. 63-126.

ಭ್ರಮತೀತಿ—ಕರ್ಣ+ಅಟ್+ಅಚ್– ಸ್ವನಾಮ ಖ್ಯಾತ ದೇಶವಿಶೇಷಃ (ಇತಿ ಶಬ್ದರತ್ನಾವಲೀ) *

ii 'ಕೇಶವವರ್ಣಿ (೧೩೫೯) ಎಂಬ ಜೈನ ಪಂಡಿತನು ಭೇದನಾರ್ಥಕವಾದ ಕರ್ಣ ಧಾತುವಿನಿಂದ ಹುಟ್ಟಿತೆಂದು ಭಾವಿಸಿ ದಿವ್ಯಭಾಷೆ (?ಸಂಸ್ಕೃತ ಭಾಷೆ) ಯಿಂದ ಬೇರೆಯಾಗಿ ವ್ಯವಹಾರದಲ್ಲಿರುವ ಭಾಷೆಯಾದ ಕಾರಣ ಇದಕ್ಕೆ 'ಕರ್ಣಾಟ' ಎಂಬ ಹೆಸರು ಬಂದಿತೆಂದು ಹೇಳುತ್ತಾನೆ. §

iii 'ವಿಶ್ವಗುಣಾದರ್ಶ' ಎಂಬ ಸಂಸ್ಕೃತ ಗ್ರಂಥವನ್ನು ಬರೆದ ವೆಂಕಟಾಧ್ವರಿಯು (ಸು. ೧೭೦೦ ?) ಮೊದಲು ಹೇಳಿದ 'ಶಬ್ದರತ್ನಾವಲಿ' ಯೊಳಗಿನ ಅಭಿಪ್ರಾಯದಂತೆಯೆ ತಾನೂ ಅರ್ಥ ಮಾಡಿದ್ದಾನೆ.

ಕರ್ಣಾಟದೇಶೋಽಯಃ ಪೂರ್ವಂ ಕರ್ಣದೇಶಮಭೂಯತ್
ಸ ಏಷ ಸಾಂಪ್ರತಂ ಪಶ್ಯ ಚಕ್ಷುಷೋ ಭೂಷಣಾಯತೇ ||೨೨೩||

'ಈ ನಾಡಿನ ಹೆಸರು ಕರ್ಣಗಳಲ್ಲಿ ಅಟನ ಮಾಡುವುದರಿಂದ (ಎಂದರೆ ಎಲ್ಲರ ಕಿವಿಗಳಲ್ಲಿ ಬಿದ್ದು ಪ್ರಸಿದ್ಧವಾದುದರಿಂದ) ಇದಕ್ಕೆ ಕರ್ಣಾಟವೆಂಬ ಹೆಸರು ಉಂಟಾಯಿತೆಂದು ಹೇಳುತ್ತಾನೆ.'

ಎಂದು ವಿವರಿಸಿ ಕೊನೆಗೆ ಶ್ರೀಮಾನ್ ಆರ್. ನರಸಿಂಹಾಚಾರ್ಯರು "ಈ ಎರಡು ವ್ಯುತ್ಪತ್ತಿಗಳೂ ಕವಿಕಲ್ಪನೆ" ಎಂಬುದಾಗಿ ಅಪ್ಪಣೆಕೊಡಿಸಿದ್ದಾರೆ.† 'ಕರ್ಣಾಟ' ಎಂದು, ಕರ್ಣಗಳಲ್ಲಿ ಅಟನ ಮಾಡಲಾರಂಭಿಸಿದ ಬಳಿಕ ಎಂದರೆ ಸುಪ್ರಸಿದ್ಧವಾದ ಮೇಲೆ, ಹೆಸರು ಬಂದಿತೆಂದು ಹೇಳುವುದಾದರೆ ಈ ನಾಡು ಸುಪ್ರಸಿದ್ಧನಾಗುವ ಮೊದಲು ಇದ್ದ ಹೆಸರಾವುದು ? ಇದಕ್ಕಿಂತಲೂ ಕೇಶವವರ್ಣಿಯ ನಿರುಕ್ತವೆ ಬೇಕು; ಅವನು ಒಂದು ಧಾತುವಿನಿಂದ ಈ ಶಬ್ದವು ಹುಟ್ಟಿತೆಂದು ಹೇಳಲು ಹವಣಿಸಿದ್ದಾನೆ. ಆದರೆ ನಾಡುಗಳಿಗೆ ಅತಿ ಪುರಾತನ ಕಾಲದಿಂದಲೂ ಹೆಸರುಗಳು ಬರುವ ಬಗೆಯನ್ನು ನಿರೀಕ್ಷಿಸಿದರೆ ಈ ವ್ಯುತ್ಪತ್ತಿಗಳು

* ಕರ್ಣಾ—ಕರ್ನಾ. ಪುಟ ೫೫.

† ಕಜ. III, ಮುನ್ನುಡಿ

§ ಕಜ. III, ಮುನ್ನುಡಿ

ಆಧಾರಗಳು ಸ್ಪಷ್ಟವಾಗಿ ಇಲ್ಲ. ಒಂದು ಮಹಾವ್ಯಕ್ತಿಯಿಂದ ಒಂದು ಮನೆತನಕ್ಕೆ ಹೆಸರು ಬರುವುದು. ಒಂದು ಹೆಸರಾದ ಮನೆತನವು ಹಲವು ದಿನಗಳವರೆಗೆ ಒಂದೆಡೆಯಲ್ಲಿ ಆಳಿದರೆ ಆ ನಾಡಿಗೆ ಆ ಮನೆತನದ ಹೆಸರೆ ಕೆಲ ದಿನಗಳವರೆಗೆ ನಡೆದುದನ್ನು ಇತಿಹಾಸದಲ್ಲಿ ಕಾಣಬಹುದು. 'ಗಂಗವಾಡಿ', 'ರಟ್ಟಪಾಡಿ', 'ಕದಂಬ ದೇಶ', 'ಹೊಯ್ಸಣ ದೇಶ' ಇವೆ ಮೊದಲಾದುವು ಇದಕ್ಕೆ ದೃಷ್ಟಾಂತ. ಆದರೆ ಇವುಗಳಲ್ಲಿ ಆವುದೊಂದೂ ಹೆಚ್ಚು ದಿನ ಆಳಿ ಬಾಳಿಲ್ಲ; ಅಥವಾ ಬದುಕಿಲ್ಲ. ಒಂದುವೇಳೆ ಸ್ಕಂಧಪುರಾಣವು ಹೇಳುವಂತೆ, ಈ ನಾಡಿಗೆ 'ಕರ್ಣಾಟ' ರಕ್ಕಸನಿಂದಲೆ ಹೆಸರು ಬಂದಿತೆಂದು ನಂಬಲು ಅಡ್ಡಿಯಿದ್ದಿಲ್ಲ. ವ್ಯಕ್ತಿಯಿಂದ ನಾಡಿಗೆ ಹೆಸರು ಬರಬೇಕಾಗಿದ್ದರೂ ಆ ವ್ಯಕ್ತಿಯು ಸುಪ್ರಸಿದ್ಧ–ಕುಪ್ರಸಿದ್ಧ ಅಂತೂ ಪ್ರಸಿದ್ಧವಾಗಿರಬೇಕಲ್ಲವೆ? ಕರ್ಣಾಟ ರಕ್ಕಸನು ಬಹಳ ಪೀಡಾಕರನಾಗಿದ್ದನೆಂದು ಸ್ಕಂಧ ಪುರಾಣವು ಹೇಳುತ್ತದೆ. ಆದರೂ ಅವನು ನೀಚ ಕೃತಿಗಳಲ್ಲಿ, ಕಾಟದಲ್ಲಿ ರಾವಣ ಜರಾಸಂಧಾದಿಗಳನ್ನು ಮೀರಿಸಿದಂತೆ ತೋರಲಿಲ್ಲ. ಹಾಗಿದ್ದರೆ 'ರಾವಣ-ವಧ' 'ಜರಾಸಂಧ ಸಂಹಾರ' ಗಳಂತೆ 'ಕರ್ನಾಟ-ರಾಕ್ಷಸ-ವಿಧ್ವಂಸನ' ಎಂಬ ಒಂದು ಮಹಾಕಾವ್ಯವು ಸಿದ್ಧವಾಗದೆ ಎಂದೂ ಇರುತ್ತಿರಲಿಲ್ಲ. ದೇವಾಧಿದೇವತೆಗಳನ್ನೂ ಮೆಟ್ಟಿ ನಿಂತ ರಾವಣಾದಿಗಳು ಆಳಿದ ನಾಡಿಗೆ ಅವರ ಹೆಸರು ಬರಲಿಲ್ಲ. ಅವರಿಂದ ಅಲ್ಪನಾದ 'ಕರ್ಣಾಟ–ರಕ್ಕಸ' ನಿಂದ ಅವನ ನಾಡಿಗೆ ಹೆಸರಾಯಿತೆಂಬುದು ಸಯುಕ್ತಿಕವಾದೀತೆ? 'ಕರ್ಣಾಟ-ರಕ್ಕಸನು' ಆಗಿ ಹೋದ ಕತೆಯನ್ನು ಸ್ಕಂಧಪುರಾಣವೊಂದೇ ಹೇಳುತ್ತದೆ. ಬೇರೆ ಪುರಾಣಗಳಲ್ಲಿ ಇದಕ್ಕೆ ಎಲ್ಲಿಯೂ ಆಧಾರಗಳು ದೊರೆತಿಲ್ಲ. ಆದುದರಿಂದ ರಾವಣಾದಿಗಳಂತೆ ಇದೊಂದು ಐತಿಹಾಸಿಕ ವ್ಯಕ್ತಿಯೆಂದು ಗ್ರಹಿಸಲಿಕ್ಕಾಗದು. 'ಕರ್ಣಾಟರು ರಕ್ಕಸರಾಗಿದ್ದರು ಅಥವಾ ರಕ್ಕಸಂತಹರಿದ್ದರು' ಎಂಬೀ ತೆರನಾಗಿ ಹೇಳದೆ ಆ ಪೌರಾಣಿಕರು 'ಕರ್ಣಾಟನೆಂಬ ಒಬ್ಬ ರಕ್ಕಸನಿದ್ದನೆಂ' ದು ಹೇಳಿದಂತೆ ತೋರುತ್ತದೆ.

ನಮ್ಮ ನಾಡಿನ ಹಿಂದಿನ ಸಾಹಿತ್ಯದಲ್ಲಿ 'ರಾಕ್ಷಸರ' ವರ್ಣನೆ, ಕತೆಗಳು ಹೇರಳವಾಗಿವೆ. ಆದರೆ ಅಲ್ಲಿ 'ರಾಕ್ಷಸ' ಎಂದರೆ ಹಗೆ, ವೈರಿ ಎಂದು ಮಾತ್ರ ಅರ್ಥ. ಇದನ್ನು ಕುರಿತು ಅಭ್ಯಾಸಿಗಳಾದ ಹಲವು ವಿದ್ವಾಂಸರು ಸ್ಪಷ್ಟವಾಗಿ

ತಮ್ಮ ಅಭಿಪ್ರಾಯವನ್ನು ಹೇಳಿಬಿಟ್ಟಿದ್ದಾರೆ.* ಆದುದರಿಂದ ಸ್ಕಂಧ ಪುರಾಣದ ಉಲ್ಲೇಖದ ಮೇಲಿಂದ ಪೌರಾಣಿಕರಿಗೆ ಕರ್ಣಾಟದ ಮೊದಲಿಗರ ವಿಷಯಕ್ಕೆ ತಿರಸ್ಕಾರವು ಇಲ್ಲವೆ ಶತ್ರುಭಾವವು ಇದ್ದಿತೆಂದು ಮಾತ್ರ ವ್ಯಕ್ತವಾಗುವುದು ಹೊರತು ಈ ಹೆಸರಿನ ಒಬ್ಬನೆ ರಕ್ಕಸನಿದ್ದನೆಂದು ಹೇಳುವುದು ಅರ್ಥವಿಹೀನ. 'ಲಂಕೆಯಲ್ಲಿರುವವರೆಲ್ಲ ರಾವಣರೇ' ಎಂಬುದೊಂದು ಗಾದೆ. ಈ ಗಾದೆಯಲ್ಲಿ 'ರಾವಣ' ಎಂಬುದು ಲಂಕೆಯ ಎಲ್ಲ ಜನಗಳ ಪ್ರಾತಿನಿಧಿಕವಾದ ಹೆಸರು. ಅದರಂತೆ ಈ ನಾಡಿನೊಳಗಿನ ಎಲ್ಲ ರಕ್ಕಸರ ಪ್ರತಿನಿಧಿಯೆಂದು 'ಕರ್ಣಾಟ ರಕ್ಕಸ' ಎಂಬ ಒಂದೇ ವ್ಯಕ್ತಿಯನ್ನು ಸ್ಕಂಧಪುರಾಣ ಕರ್ತನು ನಿರ್ಮಿಸಿರಬೇಕೆಂದು ತೋರುತ್ತದೆ. ಆದುದರಿಂದ ಸ್ಕಂಧ ಪುರಾಣದಲ್ಲಿ 'ಕರ್ಣಾಟ' ಎಂಬುದು ಒಂದು ವ್ಯಕ್ತಿಯ ಹೆಸರಾಗಿರದೆ ಇಲ್ಲಿಯ ಮೂಲ ಜನಾಂಗವೆ ಆ ತೆರನಾಗಿ ಉಲ್ಲೇಖಿತವಾಗಿದೆ.

vi ಏಕೆಂದರೆ ಸಂಸ್ಕೃತದಲ್ಲಿ 'ಆಂಧ್ರಾಃ', 'ಅಂಗಾಃ' 'ಕರ್ಣಾಟಾಃ' ಎಂಬೀ ಬಗೆಯಾಗಿ ಹೇಳುವ ರೂಢಿ ಉಂಟು. ನಾಡುಗಳಿಗೆ ಅಲ್ಲಿಯ ಜನಾಂಗದಿಂದ ಆಯಾ ಹೆಸರುಗಳು ಬಂದುವೆಂಬ ಭಾವನೆಯೆ ಇದಕ್ಕೆ ಕಾರಣವಿರಬೇಕೆಂದು ತೋರುತ್ತದೆ. ಮಹಾಭಾರತಾದಿ ಎಲ್ಲ ಸಂಸ್ಕೃತ ಗ್ರಂಥದೊಳಗಣ ಉಲ್ಲೇಖಗಳು 'ಕರ್ಣಾಟಾಃ' ಎಂದು ಜನಾಂಗವಾಚಕಗಳೇ ಆಗಿವೆ. ಈ ವಿಚಾರವು ಮಾನ್ಯ ಸಂಶೋಧಕರಾದ ಶ್ರೀಮಾನ್ ಗೋವಿಂದ ಪೈಗಳಿಗೆ ಸ್ವಲ್ಪ ಮಸಮಸಕಾಗಿ ಒಮ್ಮೆ ಹೊಳೆದುಹೋಗಿದೆ.‡ ಆದರೆ ಅವರು ಈ ವಿಚಾರವನ್ನು ಮುಂದೆ ವಿಸ್ತರಿಸದೆ ಬೇರೊಂದು ದಿಕ್ಕಿನಲ್ಲಿಯೆ ಹೊರಟರು. ಮಹಾರಾಷ್ಟ್ರದ ಇತಿಹಾಸಾಚಾರ್ಯ ಶ್ರೀಮಾನ್ ರಾಜವಾಡೆಯವರು ಮಾತ್ರ ಜನಾಂಗ ವಾಚಕವಾಗಿ ಅರ್ಥ ಮಾಡುವ ಪ್ರಾಚೀನ ಪರಂಪರೆಯು

* Vedic Index II, p. 516, AIHT, p. 291.

‡ ಪ್ರ. ಕ. ೧೯೩೦

ಅನುಸಂಧಾನದಲ್ಲಿ ಕರ್ಣಾಟಕ್ಕೆ ಮನುಸ್ಮೃತಿಯ ಆಧಾರದಿಂದ ಹೊಸ ನಿರುಕ್ತವನ್ನು ಹೇಳಿದರು.

ಶ್ರೀ. ರಾಜವಾಡೆಯವರ ಈ ಊಹೆಯನ್ನು 'ಕರ್ಣಾಟಕದ ವೀರ ಕ್ಷತ್ರಿಯರು' ಎಂಬ ಪುಸ್ತಕದಲ್ಲಿ ಉಲ್ಲೇಖಿಸಲಾಗಿದೆ (೧೩೧). ಶ್ರೀಮಾನ್ ಪಂಡಿತ ಶ್ರೀರಂಗ ಭೀಮಾಚಾರ್ಯರು 'ಕರ್ಣಾಟ' ಶಬ್ದವೇ ಸಾಧು, ಎಂದು ಪ್ರತಿಪಾದಿಸುವಾಗ ಈ ವ್ಯುತ್ಪತ್ತಿಯನ್ನೆ ಆಧಾರವಾಗಿ ಇಟ್ಟುಕೊಂಡಿದ್ದಾರೆ.* ಪ್ರಾಚೀನ ಹಿಂದೂಸಮಾಜಶಾಸ್ತ್ರಜ್ಞನಾದ ಮನುವು ಹಲವು ಜಾತಿ, ಕುಲಗಳ ವಿಷಯಕ್ಕೆ ತಾನು ಅರಿತ ಪರಂಪರಾಗತವಾದ ಐತಿಹ್ಯವನ್ನು ಬರೆದಿಟ್ಟಿದ್ದಾನೆ. ಅದು 'ಸ್ಮೃತಿ' ( ನೆನಪು ); ತಲೆತಲಾಂತರಗಳಿಂದ-ನೆನಪಿನಿಂದ ಹೇಳುತ್ತ ಬಂದುದನ್ನು ನೆನಪಿನಿಂದ ಬರೆದಿಟ್ಟುದರಲ್ಲಿ ಕೆಲವೊಂದು ತಪ್ಪುತಡೆಗಳು ಉಳಿದಿರುವ ಸಂಭವವು ಇಲ್ಲದಿಲ್ಲ. ಹಲವು ದಿನಗಳ ಹಿಂದಿನ ಮಸಮಸಕಾದ ನೆನಪಿನ ಸಂಗತಿಯನ್ನು ಬರೆದಿಟ್ಟುದರ ಸ್ಪಷ್ಟವಾದ ಅರ್ಥವು ಈಗ ಗೊತ್ತಾಗುತ್ತಿರಲಿಕ್ಕಿಲ್ಲ. ಆದರೂ ಸಂಪೂರ್ಣ ನೆನವು ಆಗಲೊಲ್ಲದೆಂದು ಇದ್ದ ಸ್ವಲ್ಪ ಸ್ಮೃತಿಯನ್ನೂ ದುರ್ಲಕ್ಷಿಸುವುದು ಜಾಣ್ಮೆಯೆನಿಸದು. ಆದಕಾರಣ ಮನುವು ಹೇಳುವುದನ್ನು ಎಣಿಕೆಯಲ್ಲಿ ಹಿಡಿಯದೆ ಮುಂದೆ ಸಾಗುವುದು ಸರಿಯಲ್ಲ. ಮನುವು ಹೇಳುವುದೇನಂದರೆ:

ಝುಲ್ಲೋ ಮಲ್ಲಶ್ಚ ರಾಜನ್ಯಾತ್ ವ್ರಾತ್ಯಾನ್ನಿಚ್ಛಿವಿರೇವಚ ।
ನಟಶ್ಚ ಕರಣಶ್ಚೈವ ಖಸೋ ದ್ರವಿಡ ಏವ ಚ ॥ ೧೦.೨೨ ॥

ಮನುವು ತನ್ನ ಕಾಲದ ವ್ರಾತ್ಯಕ್ಷತ್ರಿಯರ ಪಂಗಡಗಳನ್ನು ವಿವರಿಸುತ್ತ ಅವರಲ್ಲಿ ಕರಣರು ಮತ್ತು ನಟರು ಎಂಬ ಎರಡು ಬಗೆಗಳು ಇದ್ದುದನ್ನು ಹೇಳುತ್ತಾನೆ. ಶ್ರೀ. ರಾಜವಾಡೆಯವರ ಅಭಿಪ್ರಾಯದಂತೆ ಕರಣರು ಮತ್ತು ನಟರು ಸೇರಿ ಒಂದೇ ಜನಾಂಗವಾಗಿ ಅದುವೆ ಕರ್ಣಾಟವಾಯ್ತು. 'ಕರ್ಣಾಟಾಃ' ಎಂದರೆ ಜನಾಂಗ; ಕರಣ ಮತ್ತು ನಟರ ಸಮ್ಮಿಶ್ರ ಪಂಗಡ; ಎಂದು ಶ್ರೀ. ರಾಜವಾಡೆಯವರ ಊಹೆ.

ಅವುದೊಂದು ಮಾತನ್ನು ಬೇರೆ ಬೇರೆ ಪ್ರಮಾಣಗಳ ಆಧಾರದಿಂದ

* ಕರ್ಣಾ-ಕರ್ನಾ. ಪುಟ ೨೬

ವಿಮರ್ಶಿಸಿ ಸತ್ಯಾಸತ್ಯತೆಗಳನ್ನು ನಿರ್ಧರಿಸದೆ ಒಮ್ಮೆಲೆ ಸ್ವೀಕರಿಸುವುದು ಅಥವಾ ತಿರಸ್ಕರಿಸುವುದು ಅವಿಚಾರವು. 'ಕರ್ಣಾಟ' ವೇ ಮೂಲ ಶಬ್ದ; ಮತ್ತು ಅದು ಸಂಸ್ಕೃತ; ಎಂದು ಪ್ರತಿಪಾದಿಸುವ ಪಂಥದಲ್ಲಿರುವ ಆರು ಒಳಪಂಗಡ ಗಳಲ್ಲಿ ಮೊದಲಿನ ನಾಲ್ಕು ಬಗೆಗಳು ತೀರ ಹುರುಳಿಲ್ಲದುವೆಂದು ಕಾರಣಸಹಿತ ವಾಗಿ ಈ ಮೊದಲೆ ಹೇಳಿದ್ದಾಗಿದೆ. ಐದನೆಯದು ಅಕ್ಷರಶಃ ನಿಜವಲ್ಲದಿದ್ದರೂ ಅದರಲ್ಲಿ ಸತ್ಯಾಂಶವು ಇಲ್ಲದೆ ಇಲ್ಲವೆಂಬುದನ್ನೂ ಕಂಡುದಾಯ್ತು. ಈ ಐದು ಪ್ರಕಾರಗಳಿಗಿಂತಲೂ ಆರನೆಯ ಮಾತು ಬಹಳ ಹುರುಳುಳ್ಳದ್ದಾಗಿದೆಯೆಂದು ಒಪ್ಪಿಕೊಳ್ಳದೆ ಗತಿಯಿಲ್ಲ. ಏಕೆಂದರೆ ಈ ಬಗೆಯಾಗಿ ಎರಡು ಜನಾಂಗಗಳ ಬೆರಕೆಯಾಗುವುದು ಅಸಂಭವನೀಯವಾಗಿಲ್ಲ. ಕರಣರು ಮತ್ತು ನಟರು ಒಂದುಗೂಡಿ ಕರ್ಣಾಟರಾಗಿರುವ ಸಂಭವವು ಇಲ್ಲದಿಲ್ಲ.

ಆದರೆ ಕರಣರು ಮತ್ತು ನಟರು ಯಾರು ? ಯಾವ ಬಗೆಯವರು ಆರ್ಯರೊ ? ದ್ರಾವಿಡರೊ ? ಎಲ್ಲಿ ನೆಲಸಿದವರು ? ಎಂದು ಇದ್ದರು ? ಈ ಸಂಗತಿಗಳು ಇನ್ನೂ ಕಗ್ಗತ್ತಲೆಯಲ್ಲಿದ್ದು ಇವನ್ನು ಯಾರೂ ಬೆಳಕಿಗೆ ತಂದಿಲ್ಲ. ಕರಣ ಮತ್ತು ನಟ ಎಂಬ ಹೆಸರಿನ ಜನಾಂಗಗಳು ಹಿಂದಕ್ಕೆ ವಾಸಿ ಸುತ್ತಿದ್ದುವೆಂಬುದಕ್ಕೆ ಇನ್ನೂ ಬೇರೆ ಬೇರೆ ಗ್ರಂಥಸ್ಥಪ್ರಮಾಣಗಳನ್ನು ಶೋಧಿ ಸದೆ ಇದ್ದರೆ ಮನುಸ್ಮೃತಿಯ ವಚನವು ನಂಬುಗೆಗೆ ಅಷ್ಟು ಅರ್ಹವಾಗಲಾ ರದು.

'ನಟ'ರು ಎಂಬ ಜನಾಂಗವು ಇದ್ದಿತೆಂದು ಮನುವಿನ ಹೊರತು ಇನ್ನೂ ಕೆಲರು ಹೇಳುತ್ತಾರೆ. ಮನುವು ನಟರನ್ನು ವ್ರಾತ್ಯಕ್ಷತ್ರಿಯರಲ್ಲಿ ಎಣಿಸಿದ್ದಾನೆ. ವ್ರಾತ್ಯರು ಎಂದರೆ ಆಚಾರಹೀನರು. ವ್ರಾತ್ಯಕ್ಷತ್ರಿಯರು ಎಂದರೆ ಅನಾಚಾರಿ ಗಳಾದ ಕ್ಷತ್ರಿಯರೆಂದು ಅರ್ಥವಾಗುವುದು. ನಟರು ಆಚಾರಹೀನರೆಂದು ಸೂಚಿಸಿದರೂ ಮನುವಿನ ಅಭಿಪ್ರಾಯದಂತೆ ಅವರು ಕ್ಷತ್ರಿಯರು. ಆದರೆ ಯಮ ಮತ್ತು ಪಿತಾಮಹರು ಇವರನ್ನು ಇನ್ನೂ ತೀರ ಹೀನರನ್ನಾಗಿ ಪರಿಗಣಿ ಸಿದ್ದಾರೆ.†

ರಜಕಶ್ಚರ್ಮಕಾರಶ್ಚ ನಟೋ ಬುರುಡ ಏವಚ ।
ಕೈವರ್ತಮೇದ ಭಿಲ್ಲಾಶ್ಚ ಸಪ್ತೈತೇ ಅಂತ್ಯಜಾಃ ಸ್ಮೃತಾಃ । –ಯಮಃ

† HDS. p. 228; 232

ಪಿತಾಮಹನು ಇವೇ ಹೆಸರುಗಳನ್ನು ಹೇಳಿ ಇವರನ್ನು ಮ್ಲೇಚ್ಛರೆಂದು ಕರೆದಿದ್ದಾನೆ! ಆದರೆ ಈ 'ನಟರು' ಮನುಸ್ಮೃತಿಯ ನಟರ ಕುಲದವರಾಗಿರದೆ ಬೇರೊಂದು ಹೀನ ಜಾತಿಯವರಾಗಿರುವ ಸಂಭವವೂ ಉಂಟು. ನಾಟ್ಯ ಮಾಡಿ ಜೀವಿಸುವ 'ದಾಸ'ರ ಹಿಂದುಳಿದ ಗುಂಪೊಂದು ಹಿಂದೆ ತಿರುಕು (ಗುತ್ತಿ)ತ್ತು. ಬುರುಡ (ಮೇದ) ರ ಪಂಕ್ತಿಯಲ್ಲಿ ಬಂದ 'ನಟ' ರು ರಾಜನ್ಯರಾಗಿರಲಾರರೆಂಬುದು ಸ್ಪಷ್ಟ.

'ನಟ'ರಂತೆ 'ಕರಣ'ರ ಉಲ್ಲೇಖಗಳೂ ಹೆಚ್ಚು ಇಲ್ಲ. ಆದರೂ ಮತ್ಸ್ಯಪುರಾಣದಲ್ಲಿ ದೊರೆವ ಒಂದು ಆಧಾರವು ಅತ್ಯಂತ ಮಹತ್ತ್ವದ್ದಾಗಿದೆ. ತುರ್ವಸುವಿನ ವಂಶಜರಿಂದಾದ ದಕ್ಷಿಣದ ಜನಾಂಗ—ದೇಶಗಳನ್ನು ಹೇಳುವಾಗ ಈ ಉಲ್ಲೇಖವು ಬಂದಿದೆ.* (ಹಿಂದೆ ಕನ್ನಡರು ತುರುವಸುವಿನ ಸಂತತಿಯವರು ಎಂದು ಬರೆದುದನ್ನು ಇದರೊಡನೆ ಓದಬೇಕು. ಪುಟ ೪೨ )

ತುರ್ವಸೋಸ್ತು ಸುತೋ ಗರ್ಭೋ ಗೋಭಾನುಸ್ತಸ್ಯ ಚಾತ್ಮಜಃ ।
ಗೋಭಾನೋಸ್ತು ಸುತೋವೀರಃ ತ್ರಿಸಾರಿ ಅಪರಾಜಿತಃ ॥

ಈ ಬಗೆಯಾಗಿ ವಂಶವೃಕ್ಷವನ್ನು ವಿವರಿಸುತ್ತ ಮುಂದೆ ಈ ಪುರಾಣವು ಹೇಳುವುದೇನೆಂದರೆ :

ಪಾಂಡ್ಯಶ್ಚ ಕೇರಲಶ್ಚೈವ ಚೋಲಃ ಕರ್ಣಸ್ತಥೈವ ಚ ।
ತೇಷಾಂ ಜನಪದಾಃ ಸೀತಾಃ ಪಾಂಡ್ಯಾಃ ಚೋಲಾಃ ಸಕೇರಲಾಃ
॥ ೪೮.೫ ॥

ಮನುವು 'ಕರಣ' ಎಂದು ಹೇಳುವನು. ಮತ್ಸ್ಯಪುರಾಣದಲ್ಲಿ 'ಕರ್ಣ' ಎಂದಿದೆ. ಇವೆರಡೂ ಹೆಸರುಗಳು ಒಂದೆ? ಬೇರೆಯೆ? ಮನುಸ್ಮೃತಿಯಲ್ಲಿ ಕರಣ ಮತ್ತು ನಟ ಎಂಬ ಎರಡು ಹೆಸರುಗಳು (ನಟಕರಣರೆಂದು) ಹತ್ತಿರ ಬಂದಿದ್ದು ವಿಚಾರಾರ್ಹವಾಗಿದೆ. ಕರಣರು ಮತ್ತು ನಟರು ಸೇರಿ ಒಂದಾದ ಜನಾಂಗದ ಹೆಸರು 'ಕರಣನಟ' ಎಂದಾಗುವುದು. ಇದು ಕರಣಾಟ–ಕರ್ಣ್ನಾಟ–ಕರ್ಣಾಟ ಎಂದು ಈಗಿನ ರೂಪವನ್ನು ತಾಳಿರಬಹುದೆಂದು ಹೊಂದಿಸಿ ಹೇಳಬಹುದಾಗಿದೆ. ಆದರೆ ಮತ್ಸ್ಯಪುರಾಣದಲ್ಲಿ 'ಕರ್ಣ' ಎಂಬೇ

* Mr. A. P. Karmarkar, M. A., LL. B.

ಜನಾಂಗದ ಹೆಸರು ಹೇಳಿರುವುದರಿಂದ ಕರ್ಣ+ನಟ ಸೇರಿ ಕರ್ಣಾಟವಾಯ್ತೆನ್ನ ಬಹುದು. ಕರ್ಣರನ್ನು ಮತ್ಸ್ಯಪುರಾಣವು ಪಾಂಡ್ಯ, ಚೋಳ, ಕೇರಳ ರೊಡನೆ ಹೇಳುತ್ತಿದೆ. ಇದು, ಕರ್ಣರು ಯಾರಿರಬಹುದೆಂದು ನಿರ್ಧರಿಸಲು ಸಹಾಯಕವಾದ ಮಹತ್ವದ ಆಧಾರವಾಗಿದೆ. ಪಾಂಡ್ಯ, ಚೋಳ, ಕೇರಳರ ಹತ್ತರಿನ ಕರ್ಣರೆಂದರೆ ಕರ್ಣಾಟರೇ ಅಲ್ಲದೆ, ಬೇರಿನ್ನಾರೂ ಆಗಿರಲಾರರು. ಆದುದರಿಂದ ಮನುಸ್ಮೃತಿಯ ಕರಣ, ಮತ್ತು ಮತ್ಸ್ಯಪುರಾಣದ ಕರ್ಣ ಇವೆರಡು ಶಬ್ದಗಳನ್ನು ಬರೆವುದರಲ್ಲಿ ಸ್ವಲ್ಪ ವ್ಯತ್ಯಾಸವಿದೆಯಲ್ಲದೆ ಅರ್ಥದಲ್ಲಿ ಭೇದವಿಲ್ಲ.

ಇಂತಿವೆಲ್ಲ ಉಲ್ಲೇಖಗಳು ದೊರೆಯುತ್ತಿರುವಾಗ ಕರ್ಣ ಮತ್ತು ನಟ ಇವೆರಡು ಜನಾಂಗಗಳು ಹಿಂದಿನಕಾಲದಲ್ಲಿ ಇರಲೇ ಇಲ್ಲವೆಂದು ಹೇಳುವುದಕ್ಕೆ ಇನ್ನು ಮೇಲೆ ಬಾಯಿ ಬಾರದು. ಕರ್ಣ ಮತ್ತು ನಟರ ಸೇರುವೆಯಿಂದ ಕರ್ಣಾಟವೆಂದು ಈ ನಾಡಿನ ಹೆಸರಾಯಿತೆಂಬುದೆ ನಿಜವಿದ್ದರೆ 'ಕರ್ಣಾಟ' ವೆಂಬುದೆ ಮೂಲ ಶಬ್ದವಾಯಿತು.

ಆದರೆ ಕರ್ಣರು ಮತ್ತು ನಟರು ಯಾವ ಜನಾಂಗ? ಇವು ಸಂಸ್ಕೃತ ಹೆಸರುಗಳೊ? ಕರ್ಣ ಮತ್ತು ನಟ ಎಂಬಿವು ಸಂಸ್ಕೃತಭಾಷೆಗೆ ಸಂಬಂಧ ಪಟ್ಟ ಶಬ್ದಗಳೆಂದ. ಸಿದ್ಧವಾದರೆ ಕರ್ಣಾಟವು ಮೂಲತಃ ಸಂಸ್ಕೃತಪದವೆಂದು ಒಪ್ಪಿಕೊಳ್ಳಲೇಬೇಕಾಗುವುದು.

ಕರಣ ಅಥವಾ ಕರ್ಣ ಮತ್ತು ನಟ ಈ ಶಬ್ದಗಳು ಸಂಸ್ಕೃತ ಭಾಷೆಯ ವೆಂದು ಸ್ಥೂಲವಾಗಿ ಹೇಳಬಹುದು. ಆದರೆ ಇದರ ಎರಡೆರಡು ರೂಪಗಳು ದೊರೆಯುತ್ತವೆ. ಕರಣವು ಕರ್ಣವಾಗುವುದು; ನಟವು ನಾಟವಾಗುವುದು. ಇವುಗಳಲ್ಲಿ ಕರಣ ಎಂಬುದರ ಅರ್ಥವು ನಿಜವೊ? ಕರ್ಣ ಎಂಬುದು ನಿಜವೊ? ಇವು ಕರಣ—ಕರ್ಣ, ನಟ—ನಾಟ ಎಂಬೀ ಬಗೆಯಾಗಿ ಮೋರೆ ಬದಲಿಸುವ ಕಾರಣವೇನು? ಆದುದರಿಂದ ಸ್ಥೂಲವಾಗಿ ಒಮ್ಮೆಲೆ ಮೋರೆಯ ಮೇಲಿಂದಲೆ ಬೆಲೆ ಕಟ್ಟಿದರೆ ಲೆಕ್ಕವು ತಪ್ಪದಿರಲಾರದು.

'ಕರಣ' ಎಂದರೇನು? ಇವರು ಕೈಯವರು-ಗೆಯ್ಮೆಯವರು, ಕಾಯಕ ದವರು ಎಂದು ಅರ್ಥವೆ? ಇಲ್ಲವೆ 'ಕರ್ಣ' ಎಂದರೇನು? ಕಿವಿಗಳಿದ್ದವ ರೆಂಬ ಭಾವವೊ? ಕಿವಿಗಳು ಯಾರಿಗೆ ಇಲ್ಲ? . 'ಮಹಾನಾಸಾಃ', 'ದೀರ್ಘ

ಕೇಶಾಃ' ಎಂದು ಮುಂತಾಗಿ ನಗೆಬರುವಂತಹ ಎಷ್ಟೋ ಬಗೆಯ ನಾಡಿಗರ ಹೆಸರುಗಳನ್ನು ಬೃಹತ್‌ಸಂಹಿತೆ ಮೊದಲಾದ ಗ್ರಂಥಗಳಲ್ಲಿ ಕಾಣಬಹುದು. 'ಕರ್ಣ'ರ ಹೆಸರೂ ಇದೇ ಬಗೆಯದು. 'ದೀರ್ಘಕೇಶಾಃ', ಕೇಶಗಳು ದೀರ್ಘವಾಗಿದ್ದವರು; 'ಮಹಾನಾಸಾಃ' ಹಿರಿಮೂಗಿನವರು. ಅದರಂತೆ ಕರ್ಣರೆಂದು ಏಕೆ ಹೆಸರು ? ಈ ಜನಗಳ ಕಿವಿಗಳು ದೊಡ್ಡವು ಸ್ವಲ್ಪ ಉದ್ದ ವಾಗಿದ್ದುವೆಂಬರ್ಥವೊ ? 'ನಟರು' ಎಂದರೇನು ? ನಟರು ಎಂದರೆ ಕುಣಿ ವವರೆಂದು ಗ್ರಹಿಸಬೇಕೆ? 'ಕರ್—ನಾಟಕರು' ಎಂದು ವಿಗ್ರಹಿಸಿದರೆ 'ನಟ' ಶಬ್ದದ ಅರ್ಥವು ಇನ್ನಿಷ್ಟು ಪುಷ್ಟಿಗೊಳ್ಳುತ್ತದೆ! ಸರಿ, ನಾಟ್ಯಸೃಷ್ಟಿಯ ಜನಕರು ಕರ್—ನಾಟಕರೇ. ಏಕೆಂದರೆ 'ನಟರು' ಇವರ ಮೊದಲಿಗರು.

ಈ ತೆರನಾಗಿ ಕರಣ ಅಥವಾ ಕರ್ಣ ಹಾಗೂ ನಟ ಶಬ್ದಗಳಿಗೆ ಸಂಸ್ಕೃತ ದಿಂದ ಹೊರಡುವ ಅರ್ಥವು ನಗೆಬರಿಹಗಳಲ್ಲಿ ಮಾತ್ರ ಒಪ್ಪುವಂತಹದಾಗಿದೆ. ಇತಿಹಾಸಶಾಸ್ತ್ರಕ್ಕೆ ಅಸಮ್ಮತವಾದ ಅರ್ಥವಿದು. ಕರಣ ( ಕರ್ಣ ) ಮತ್ತು ನಟ (ನಾಟ) ಶಬ್ದಗಳಿಗೆ ಸಂಸ್ಕೃತದಿಂದ ಸಮರ್ಪಕವಾಗಿ ಅರ್ಥವಾಗುವುದಿಲ್ಲ ವಾದುದರಿಂದಲೂ, ಇವೆರಡೂ ಶಬ್ದಗಳ ರೂಪಗಳು (ಕರಣ—ಕರ್ಣ; ನಟ—ನಾಟ) ಅನಿಶ್ಚಿತವಾಗಿರುವುದರಿಂದಲೂ ಇವು ಮೂಲತಃ ಸಂಸ್ಕೃತಭಾಷೆಯ ಪದಗಳಾಗಿರದೆ ಬೇರೆ ಇನ್ನಾವುದಾದರೂ ಭಾಷೆಗೆ ಸಂಬಂಧಪಟ್ಟವುಗಳಾಗಿ ರುವ ಸಂಭವವಿದೆ. ಕರಣ—ನಟರನ್ನು ವ್ರಾತ್ಯರೆಂದು ಮನುವು ಹೇಳುತ್ತಾನೆ. ಹೀನರು, ಮ್ಲೇಚ್ಛರೆಂದು ಇನ್ನುಳಿದವರು ಅಭಿಪ್ರಾಯಪಡುತ್ತಾರೆ. ಇದರ ಮೇಲಿಂದ ಇವೆರಡೂ ಜನಾಂಗಗಳು ಆರ್ಯಪಂಗಡಕ್ಕೆ ಸೇರಿದವುಗಳಲ್ಲವೆಂದು ನಿರ್ಧರಿಸಬಹುದಾಗಿದೆ. ಆರ್ಯಪಂಗಡದ ಹೊರಗಿನ ಜನಗಳ ಹೆಸರುಗಳು ಆರ್ಯಭಾಷೆಯವು ಆಗಿರದಿರುವ ಸಂಭವವೇ ಹೆಚ್ಚಾಗಿದೆ. ಈ ಕಾರಣದಿಂದಲೆ ಕರಣ (ಕರ್ಣ) ಮತ್ತು ನಟ ಈ ಪದಗಳಿಗೆ ಸಂಸ್ಕೃತದಿಂದ ಸಮಾಧಾನಕರ ವಾದ ಅರ್ಥವು ಹೊರಡಲೊಲ್ಲದಾಗಿದೆ.

ಕರ್ನಾಟದ ಜನಾಂಗದ ಈ ಹೆಸರುಗಳು ಕನ್ನಡಿಗೆ ಸಂಬಂಧಪಟ್ಟವು ಗಳಾಗಿರುವುದೇ ಹೆಚ್ಚು ಸಂಭವನೀಯವಾಗಿಲ್ಲವೆ ? ಈ ದೃಷ್ಟಿಯಿಂದ ಇವು ಕನ್ನಡದ ಪದಗಳಾಗಿದ್ದು, ಸಂಸ್ಕೃತಕ್ಕೆ ಮಾರ್ಪಡುವಾಗ ಕರಣ ( ಕರ್ಣ ) ಮತ್ತು ನಟ ಎಂಬ ರೂಪವನ್ನು ತಾಳಿರಬೇಕು. ಮನುಸ್ಮೃತಿ, ಮತ್ಸ್ಯ

ಪುರಾಣಾದಿಗಳ ಹೇಳಿಕೆಯಂತೆ ಈ ನಾಡಿನ ಮೂಲಜನಾಂಗವು ಕರ್ಣ (ಕರಣ) ಮತ್ತು ನಟ ಇವರೆ ಆಗಿರಬಹುದು. ಆದರೆ ಕರ್ಣ (ಕರಣ) ಮತ್ತು ನಟ ಎಂಬ ಈ ಹೆಸರುಗಳು ಮಾತ್ರ ಸಂಸ್ಕೃತಭಾಷೆಯವಾಗಿರುವ ಸಂಭವವಿಲ್ಲ. ಆದುದರಿಂದ ಕರ್ಣಾಟದ ವ್ಯುತ್ಪತ್ತಿಯ ವಿಷಯಕವಾಗಿರುವ ಮನು–ಮತ್ಸ್ಯ ಪುರಾಣಗಳ ಅವಿರೋಧವಾದ ಪ್ರಾಚೀನಪರಂಪರೆಯು ತುಂಬ ಹುರುಳುಳ್ಳುದು ಆಗಿದ್ದರೂ 'ಕರ್ಣಾಟ'ವೆಂಬ ಪದವು ಮೂಲತಃ ಸಂಸ್ಕೃತವೆಂದು ನಮ್ಮವರು ಹಲಕೆಲರು ಗ್ರಹಿಸಿದ್ದುದಕ್ಕೆ ಏನೂ ಆಧಾರವಿಲ್ಲ. ಈ ಗ್ರಹಿಕೆಯು ಅರ್ವಾಚೀನಕಾಲದಲ್ಲಿ ತಲೆದೋರಿರಬೇಕು. ಕರ್ಣ (ಕರಣ) ಮತ್ತು ನಟ ಇವು ಮೊದಲು ಸಂಸ್ಕೃತ ಶಬ್ದಗಳಲ್ಲವಾಗಿದ್ದರೆ ಕನ್ನಡದ ಯಾವ ಪದಗಳು ಮಾರ್ಪಟ್ಟು ಸಂಸ್ಕೃತದಲ್ಲಿ ಕರ್ಣ (ಕರಣ) ಮತ್ತು ನಟ ಎಂದಾದುವು? ಹಾಗಾದರೆ ಆ ಮೂಲ ಕನ್ನಡ ಶಬ್ದಗಳು ಆವುವು?

---

# ೪. ಕನ್ನಡದ ಹುಟ್ಟು

( ಮುಂದುವರಿದುದು )

ಹಿಂದಿನ ಅಧ್ಯಾಯದಲ್ಲಿ ಕನ್ನಡದ ಹುಟ್ಟನ್ನು ಕುರಿತು ಇರುವ ಪ್ರಾಚೀನ ಪರಂಪರೆಯನ್ನು ವಿಮರ್ಶಿಸಿದ್ದಾಯಿತು. ಅದರಂತೆ ಆಧುನಿಕ ಕಾಲದಲ್ಲಿ 'ಕನ್ನಡ' ಎಂಬ ಪದದ ಅರ್ಥವನ್ನು ಅರಿತುಕೊಳ್ಳಲು ಆದ ಪ್ರಯತ್ನಗಳ ವಿಚಾರ ಮಾಡುವುದೂ ಅವಶ್ಯವಾಗಿದೆ.

ಆಧುನಿಕರ ವಿಚಾರಸರಣಿಯಲ್ಲಿ ಕೆಲವೊಂದು ಹೋಲಿಕೆಯಿದೆ ಇವರಲ್ಲಿ ಕನ್ನಡ ಅಥವಾ ಕರ್ಣಾಟ ಶಬ್ದದ ಅರ್ಥದ ಬಗೆಗೆ ತುಂಬ ಭಿನ್ನಾಭಿಪ್ರಾಯಗಳು ಇರುವುವಾದರೂ, ಈ ನಾಡಿನ ಅಥವಾ ನುಡಿಯ ಹೆಸರುಗಳಲ್ಲಿ ಆವುದೊಂದೂ ಸಂಸ್ಕೃತವಲ್ಲ; ಅಚ್ಚ ಕನ್ನಡದಿಂದ ಹುಟ್ಟಿದ ಪದಗಳಿವು, ಎಂದು ಒಂದೆ ಕೊರಲಿನಿಂದ ಎಲ್ಲರೂ ಹೇಳುವರು. ಇನ್ನೊಂದು ದೃಷ್ಟಿಯಿಂದ ವಿಭಾಗಿಸಿದರೆ ಆಧುನಿಕರಲ್ಲಿ ಎರಡು ಪಂಗಡಗಳನ್ನು ಮಾಡಬಹುದು ಕರ್ಣಾ(ರ್ನಾ)ಟ ಮತ್ತು ಕನ್ನಡ ಇವೆರಡೂ ಕನ್ನಡ ಭಾಷೆಯ ಪದಗಳೇ ಆಗಿದ್ದರೂ, ಕರ್ಣಾ(ರ್ನಾ)ಟವೇ ಮೂಲಶಬ್ದ, ಅದರಿಂದ ಕನ್ನಡ ಎಂಬ ಪದವು ಆಯ್ತೆಂಬವರ ಪಕ್ಷವೊಂದು; ಕನ್ನಡ ಎಂಬುದೇ ಮೊದಲು ಅದರ ಸಂಸ್ಕೃತೀಕರಣವಾಗಿ ಕರ್ಣಾಟವಾಯ್ತೆಂಬವರ ಪಕ್ಷವು ಇನ್ನೊಂದು. ಇನ್ನು ಇವೆಲ್ಲ ಪಕ್ಷೋಪಪಕ್ಷಗಳನ್ನು ಹಿಂದಿನ ಅಧ್ಯಾಯದಲ್ಲಿ ಹೇಳಿದ ಅನುಕ್ರಮದಲ್ಲಿಯೆ ವಿವರಿಸುವುದು ಲೇಸು.

೧. ಕರ್ಣಾಟ—ಕನ್ನಡದ ನಿರುಕ್ತವನ್ನು ಕಂಡುಹಿಡಿಯಲು ಹವಣಿಸಿ ಈ ಪಂಥಕ್ಕೆ ವಿಶೇಷ ಪ್ರಸಿದ್ಧಿಯನ್ನು ಕೊಟ್ಟವರು ಡಾ. ಕಾಲ್ಡವೆಲ್ಲರು. ಇವರಿಗೆ ಆಧುನಿಕ ಪಂಥದ ತಲೆಯಾಳುಗಳೆಂದರೂ ಸಲ್ಲುವುದು. ಆದರೂ ಡಾ. ಕಾಲ್ಡವೆಲ್ಲರು, ತಾವು ಈ ವಿಚಾರವನ್ನು ಡಾ. ಗುಂಡರ್ಟರಿಂದ ಎತ್ತಿಕೊಂಡಿರುವುದಾಗಿ ಹೇಳಿದ್ದಾರೆ. ಅವರು ಕರ್ಣಾಟಕ ಇದರ—ಶಬ್ದ—ಸಿದ್ಧಿ—ಕ್ರಮವನ್ನು ಕುರಿತು ಬರೆದಿರುವುದೇನೆಂದರೆ: *

† CGDL. pp. 30-31

> Karnataka is regarded as a Sanskrit word by native pandits, but I agree with Dr. Gundert in preferring to derive it from the Dravidian words as ಕರ್ black, ನಾಡು country—that is, the black country—a term very suitable to designate the 'black cotton soil' as it is called of the plateau of the Southern Deccan.

ಅದೇ ಗ್ರಂಥದಲ್ಲಿ ಮುಂದೆ ಮತ್ತೆ ಅವರು ಅಭಿಪ್ರಾಯಪಡುವುದೇನೆಂದರೆ :

> The word Karnataka was further corrupted by the Canarese people themselves into Kannad from which the language is styled by the English "Canarese".

ಆರ್ಯಾವರ್ತದಿಂದ ಹೊರಗಿರುವ, ದಕ್ಷಿಣಾಪಥದ ಈ ನಾಡಿನ ಹೆಸರು ಸಂಸ್ಕೃತವಾಗಿರದೆ ದ್ರಾವಿಡ ಭಾಷೆಗೆ ಸಂಬಂಧಪಟ್ಟುದು ಇರುವ ಸಂಭವವೇ ಹೆಚ್ಚು ಎಂಬ ವಿಚಾರಸರಣಿಯೇ ಡಾ. ಕಾಲ್ಡವೆಲ್ಲ ( ಗುಂಡರ್ಟ ) ರ ಹೊಸ ನಿರುಕ್ತಕ್ಕೆ ಮೂಲ ಕಾರಣವಾಗಿದೆ. ಆದುದರಿಂದ ಇವರು ಕರ್ಣಾಟ ಮತ್ತು ಕನ್ನಡ ಎಂಬುವು ಸಂಸ್ಕೃತಜನ್ಯವಲ್ಲವೆಂದು ಪ್ರತಿಪಾದಿಸಿದ್ದು ಸಹಜ. ಇನ್ನು 'ಕನ್ನಡ' ಎಂಬುದಕ್ಕೆ ಅವರಿಗೆ ಒಪ್ಪಂತೆ ಅರ್ಥವು ಹೊಳೆದಂತೆ ತೋರಲಿಲ್ಲ. ಕರ್ಣಾಟ ಶಬ್ದದಲ್ಲಿಯೇ ಏನೋ ಒಂದು ಅರ್ಥವಿದ್ದಂತೆ ತೋರಿ, ಕರ್+ ನಾಡು ಎಂದು ಅದನ್ನು ಬಿಡಿಸಿರಬೇಕು. ಮುಖ್ಯವಾಗಿ ಕರಿಯ ನೆಲದ ನಾಡಿದು. ಹತ್ತಿಯ ಬೆಳೆಗಾಗಿ ಹೆಸರಾದುದು. ಆದುದರಿಂದ ಇಲ್ಲಿಯ ಕರಿಯ ನೆಲದಿಂದಲೇ ಈ ನಾಡಿಗೆ ಕರ್‌ನಾಡು—ಕರ್‌ನಾಟವೆಂದು ಹೆಸರು ಬಂದಿರಬೇಕೆಂದು ಡಾ. ಕಾಲ್ಡವೆಲ್ಲರು ಪ್ರತಿಪಾದಿಸಿದ್ದಾರೆ.

ಆದರೆ ಕರ್ಣಾಟದಲ್ಲಿ ಬರಿ ಕರಿ ನೆಲವೆ ಇಲ್ಲ. ಕೆಂಪು ನೆಲವಿದೆ. ಕೆಂಪು ಕರಿಯ ಸಮ್ಮಿಶ್ರ ಬಣ್ಣದ 'ಮಸಾರಿ' ಭೂಮಿಯಿದೆ. ಕರಿಯ ನೆಲದ

ಬಯಲು ಸೀಮೆಯಂತೆ ಕೆಂಪು ನೆಲದ ಮಲೆನಾಡು ಹುಲಸಾದ ಬೆಳೆಗೆ ಹೆಸರಾಗಿದೆ. ಈ ನಮ್ಮ ನಾಡಿನ ಜನಗಳಿಗೆ ಅನ್ನ-ನೀರು ಕೊಡುವುದಕ್ಕೆ ಬಯಲು ಸೀಮೆಯು ಕೆಲಸಾರೆ ತಪ್ಪಬಹುದು. ಆದರೆ ಮಲೆನಾಡು ಎಂದೂ ಈ ಹೊಣೆಯನ್ನು ತಪ್ಪಿಸಿಕೊಂಡಿಲ್ಲ, ಆದುದರಿಂದ ಕರ್ಣಾಟದಲ್ಲಿ ಎರೆನಾಡಿನ ಕರಿನೆಲಕ್ಕಿಂತಲೂ ಮಲೆನಾಡಿನ ಕೆಂಪು ನೆಲವು ಸ್ವಲ್ಪವೂ ಕಡಿಮೆ ಮಹತ್ತ್ವದ್ದೆಂದು ಎಣಿಸಲ್ಪಟ್ಟಿಲ್ಲ. ಕರ್ಣಾಟದ ಕಲಿಪುಂಗವರಿಗೆ ಸ್ಫೂರ್ತಿಯನ್ನು ಕೊಟ್ಟ ನಾಡಾವುದು ? ಕರಿಯ ಮಣ್ಣಿನ ಭೂಮಿಗೆ 'ಬೆಳವೊಲ ಸೀಮೆ' ಎಂಬುದು ಹೆಸರು. ಆದರೆ ಕನ್ನಡ ಸಾಹಿತ್ಯದಲ್ಲಿ ಮಲೆನಾಡಿಗಿರುವ ಇಂಬು ಅದಕ್ಕಿಲ್ಲ. ಕೆಂಪು ನೆಲದ ನಾಡನ್ನು 'ಜಲವುಂ ನಾಲಿಗೆಯುಳ್ಳವಂ ಬಗೆವೊಡೆ ಎಂದುಂ ಬಣ್ಣಿಸಲ್ಕಾರನ್' ಎಂದು ಆಂಡಯ್ಯನ ಹೊಗಳಿಕೆ. 'ಮರಿತುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದುಂ ನಂದನದೊಳ್ ಬನವಾಸಿ ದೇಶದೊಳ್' ಎಂದು ಆದಿಪಂಪನ ಪ್ರಾರ್ಥನೆ ದೇವದೇವನಲ್ಲಿ. ನಮ್ಮ ನಾಡಿನ ಈ ಪರಂಪರೆಯನ್ನೂ ಮತ್ತು ಸಂಪೂರ್ಣ ನಿಜಸ್ಥಿತಿಯನ್ನೂ ಅರಿಯದ ಡಾ. ಕಾಲ್ಡ್‌ವೆಲ್ಲರು ಕರ್ಣಾಟದಲ್ಲಿ ಕರಿಯ ನೆಲದ ಸೀಮೆಯೆ ಹೆಚ್ಚು ಮಹತ್ತ್ವದ್ದೆಂದು ಅರ್ಥ ಮಾಡುವಲ್ಲಿ 'ಕರ್—ನಾಟ' ದೊಳಗಿನ ಕರ್ ಶಬ್ದದಿಂದ ದೊರೆವ ಸೂಚನೆಗೆ ಮೋಹಗೊಂಡು ಮೋಸ ಹೋಗಿದ್ದಾರೆ. 'ಕನ್ನಡ' ಎಂಬ ಪದವು ಮೂಲಾರ್ಥದಲ್ಲಿ ಇನ್ನೂ ಜೀವಂತವಾಗಿದ್ದುದು ಕೆಂಪು ನೆಲದ ನಾಡಿನಲ್ಲಿಯೇ ! 'ಕನ್ನಡ' (ಜಿಲ್ಲೆ) ಎಂದು ಕರೆಯಿಸಿಕೊಳ್ಳುವ ಭಾಗ್ಯವು ಈ ಸೀಮೆಗೇ ಇದೆ. ಈ ನಾಡಿಗೆ ಭೂಗುಣದಿಂದಲೆ ಹೆಸರು ಬಂದಿತೆನ್ನುವದಾದರೆ ಕರಿಮಣ್ಣಿನ ಎರೆನಾಡಿಗಿಂತಲೂ ಕೆಂಪು ಮಣ್ಣಿನ ಮಲೆನಾಡಿಗೆ—ಕನ್ನಡ ಜಿಲ್ಲೆಗೆ—ಈ ಹೆಸರು ದೊರೆಯಲು ಕಾರಣವೇನು ?

೩. ಆದುದರಿಂದಲೇ ಕರ್+ನಾಡು ಎಂಬ ವ್ಯುತ್ಪತ್ತಿಯು ಕನ್ನಡ ಜಿಲ್ಲೆಯ ಸುಪ್ರಸಿದ್ಧ ವಿದ್ವಾಂಸರಾದ ಕೈ. ವಾ. ಹತ್ತಂಗಡಿ ನಾರಾಯಣ ರಾಯರು ಎಂ. ಎ; ಎಲ್.ಎಲ್. ಬಿ. ಇವರ ಮನಸಿಗೆ ಬರಲಿಲ್ಲ. ವಾಗ್ಭೂಷಣ ಮಾಸಪತ್ರಿಕೆಯಲ್ಲಿ ಪ್ರಕಟವಾದ 'ಕನ್ನಡದ ಕಥೆ' ಎಂಬ ಪ್ರಬಂಧದಲ್ಲಿ ಅವರು ಬರೆದಿರುವುದೇನೆಂದರೆ:

"ಕರ್ಣಾಟ ದೇಶವು ಸಮುದ್ರದ ಮಟ್ಟಕ್ಕಿಂತ ೧೫೦೦

ಅಡಿಯಷ್ಟಾದರೂ ಎತ್ತರವಾಗಿ 'ಘಟ್ಟದ ಮೇಲೆ' ಇತ್ತು; ಆದ್ದರಿಂದ ಉಪ್ಪರಿಗೆಯುಮನೆಗೆ ಕರುಮಾಡ ಅನ್ನುವಂತೆ ದೇಶೀಯರು ತಮ್ಮ ನಾಡಿಗೆ ' ಕರುನಾಡು ' ಎಂದು ನಾಮಕರಣವನ್ನು ಮಾಡಿ, ಇದು ದ್ರಾವಿಡ ಭಾಷೆಗಳಲ್ಲಿ 'ಕನ್ನಡ' ಎಂಬಂತೆಯೂ ಸಂಸ್ಕೃತದಲ್ಲಿ ಕರ್ಣಾಟ ಎಂಬುದಾಗಿಯೂ ಪರಿವರ್ತಿಸಿರಬಹುದು. ಇದಕ್ಕೆ ಕರಿ ನೆಲದ ನಾಡು ( ಕರ್+ನಾಡು ) ಎಂಬ ಅರ್ಥವನ್ನು ಪ್ರತೀಚ್ಯರು ಸೂಚಿಸಿದ್ದಾರೆ. " §

ಕರ್+ನಾಡು ಎನ್ನುವುದರಲ್ಲಿರುವ ಕೆಲವು ಕೊರತೆಗಳನ್ನು ಕರುನಾಡು ಪಕ್ಷದವರು ಎತ್ತಿಹೇಳಿದ್ದಾರೆ. ಇವರ ಅಭಿಪ್ರಾಯದಂತೆ ಕನ್ನಡಿಗರು ತಮ್ಮ ನಾಡಿಗೆ ತಾವೆ 'ಕರಿದು' ಎಂದುಕೊಳ್ಳಲಾರರು, ಎಂಬುದು ಮೊದಲನೆಯ ಕುಂದು. ಆದರೆ ದ್ರಾವಿಡ ಭಾಷೆಯಲ್ಲಿ ಕರಿದಕ್ಕೆ ಕೆಲರು ಭಾವಿಸಿರುವಷ್ಟು ಅಪಾರ್ಥವಿಲ್ಲ. ಕರಿದರ ಬಗ್ಗೆ ಆರ್ಯರಿಗೆ ಮಾತ್ರ ಸಂಪೂರ್ಣ ತಿರಸ್ಕಾರ. ಆರ್ಯರ ಮತ್ತು ದ್ರಾವಿಡರ ವಿಚಾರದರೀತಿಗಳಲ್ಲಿ ಕೆಲವೊಂದು ಹೆಚ್ಚುಕಡಿಮೆಯಿರುವುದನ್ನು ಕಾಣಬಹುದು. ಆರ್ಯರಿಗೆ ಗೌರ(ಬಿಳಿ) ವರ್ಣವು ಪ್ರಿಯಕರ. ದ್ರಾವಿಡರಿಗೆ ಶೆನ್—ಚೆನ್ (ಚೆಲುವ ಚಂದ್ರಾಮ), ಕೆನ್—ಕೆಂಪು ಬಹಳ ಮೆಚ್ಚಿಕೆ.* ಆರ್ಯರ ಕಲ್ಪನಾಸರಣಿಯಲ್ಲಿ ಉತ್ತರ ದಿಕ್ಕು ಶುಭ. 'ದಕ್ಷಿಣಕ್ಕೆ ಹೋಗು' ಎಂದರೆ ಶಾಪ. ನಿನಗೆ ಉತ್ತರೋತ್ತರವಾಗಲಿ ಎಂದರೆ ಹರಕೆ. ಹಳೆಯ ತಮಿಳ ಕಾವ್ಯದಲ್ಲಿ 'ಉತ್ತರಕ್ಕೆ ಹೋದನು' ಎಂದರೆ ಸಾಯುವುದಕ್ಕೆ ಹೋದನೆಂದು ಅರ್ಥವಿರುವುದೆಂದು ಪ್ರೊ. ಪಿ. ಟಿ. ಶ್ರೀನಿವಾಸಅಯ್ಯಂಗಾರರು ಹೇಳುತ್ತಾರೆ.† ಕರಿದು, ಅಷ್ಟು ಅಶುಭಸೂಚಕವಾಗಿದ್ದರೆ ಕರಿಯಪ್ಪ, ಕಾಳಪ್ಪ

§ And BRASJ· L XXIII, p. 491.

* ಶಿವರಹಸ್ಯ ಪುಟ ೨೭-೨೮

† The suicide of a king who was wounded in the back by cutting his throat on the battle field is technically called in old Tamil poetry, 'Being in the north with the sword'; the phrase 'being in the north' means the giving up of one's own life by either turning to the north and killing

ಮೊದಲಾದವುಗಳಿಗೆ ದೇವತ್ವವು ಪ್ರಾಪ್ತವಾಗುತ್ತಿದ್ದಿಲ್ಲ. ಕಾರಿಕಾಲವನ್ನು, ಕರಿಕಾಲ ಚೋಳನೆಂಬ ಹೆಸರುಗಳನ್ನು ಮಹಾಜನರು ಎಂದೂ ಇಟ್ಟುಕೊಳ್ಳು ತ್ತಿದ್ದಿಲ್ಲ. ಕರಿಯಪ್ಪ, ಕಾಳಮ್ಮ ಎಂಬ ಹೆಸರುಗಳು ಈಗಲೂ ಇವೆ. ಕರಿಯಪ್ಪ ನೆಂದರೆ ಬಹಳ 'ದೇಸಿ'ಯಾಯ್ತು. 'ಕೃಷ್ಣ' ನೆಂದರೆ ಅದುವೆ ಮಾನ್ಯಮಾರ್ಗ ವಾಗುವುದು! ಯಾದವರ ಕರಿಯಪ್ಪನು ಕೃಷ್ಣನೆನಿಸಿ ತನ್ನ ಹೆಸರಿಗೆ ಸಂಸ್ಕೃತ ದಲ್ಲಿಯೂ (ಕರಿದಕ್ಕಲ್ಲದಿದ್ದರೂ 'ಕೃಷ್ಣ' ಎಂಬುದಕ್ಕೆ) ಮರ್ಯಾದೆಯನ್ನು ತಂದನು!

ಆದಕಾರಣ ಕರಿದು ಎಂಬುದು ಅಶುಭವಾಗಿರುವುದರಿಂದ ಈ ಪ್ರದೇಶಕ್ಕೆ ಕರಿದು ನಾಡೆಂಬ ಹೆಸರು ಬಂದಿರಲಿಕ್ಕಿಲ್ಲವೆಂದು ಪ್ರತಿಪಾದಿಸುವುದು ಸರಿಯಾಗ ಲಾರದು. ಆದರೆ ಈ ಸಂಬಂಧದಲ್ಲಿ ಎತ್ತಿದ ಇನ್ನೊಂದು ಆಕ್ಷೇಪಣೆಯು ವಿಚಾರಣೀಯವಾಗಿದೆ. ಕರ್ಣಾಟದಲ್ಲಿ ಒಳನಾಡುಗಳನ್ನು ಹೇಳುವಾಗ ಬಯಲುಸೀಮೆ, ಮಲೆನಾಡು ಎಂಬಂತೆ ಕರಿದುನಾಡು ಅಥವಾ ಕರ್ನಾಡು ಎಂದು ಹೇಳುವುದನ್ನು ಎಲ್ಲಿಯೂ ಕೇಳಿಲ್ಲ; ಕಂಡಿಲ್ಲ. ಅಥವಾ ಈ ಬಗೆಯ ಹಳೆಯ ಹೆಸರಿನ ಊರುಗಳೂ ದೊರೆತಿಲ್ಲ. ಕಾರ್ನಾಡು ಎಂಬ ಹೆಸರಿನ ಒಂದು ಊರು ಕೆಂಪುಮಣ್ಣಿನ ಕನ್ನಡ ಜಿಲ್ಲೆಯಲ್ಲಿದೆ! 'ಕರಿಯ ಭೂಮಿಯ ಸೀಮೆಗೆ ಎರೆನಾಡೆಂದು ಹೇಳುವರು, ಕರಿಯನಾಡೆಂದಲ್ಲ.' ಇದು ನಿಜ. ಶ್ರೀಮಾನ್ ಹೆ. ನಾರಾಯಣರಾಯರು ಎತ್ತಿದ ಈ ಆಕ್ಷೇಪಣೆಯು ವಿಚಾರಾರ್ಹವಾಗಿದೆ.

ಆದರೆ ಕರಿದು ನಾಡು ಎಂಬ ವ್ಯುತ್ಪತ್ತಿಯು ಸುಳ್ಳಾದರೆ 'ಕರುನಾಡು' ನಿಜವೆಂದು ಸಿದ್ಧವಾಗಲಿಲ್ಲ. ಶ್ರೀ. ನಾರಾಯಣರಾಯರು ತಮ್ಮ ಪಕ್ಷ ವನ್ನು ಸಮರ್ಥಿಸಿ ಬರೆವಾಗ 'ದೇಶೀಯರು' ತಮ್ಮ ನಾಡಿಗೆ ಕರುನಾಡುಎಂಬ ನಾಮಕರಣವನ್ನು ಮಾಡಿರಬೇಕೆಂದಿದ್ದಾರೆ. ದೇಶೀಯರು ಎಂದರೆ ಇಲ್ಲಿ ಕನ್ನಡರೆಂದೇ ಅರ್ಥವು ನಿಶ್ಚಿತವಿದೆ. ಆದರೆ ದುರ್ದೈವದಿಂದ 'ಕರುನಾಡು' ಎಂಬ ಪದವು ಕನ್ನಡಸಾಹಿತ್ಯದಲ್ಲಿಯೇ ದೊರೆಯುವುದಿಲ್ಲ! ಹಿಂದಕ್ಕೆ ನಮ್ಮ ನಾಡಿಗೆ 'ಕರುನಾಡು' ಎಂದು ಹೇಳಿದವರು ತಮಿಳರು. ತಮಿಳಶಾಸನ

---

oneself or going to a northern place dying their by starvation.

—History of Tamils pp. 336-37

ಸಾಹಿತ್ಯಗಳಲ್ಲಿ ‘ ಕರುನಾಡು’ ಎಂಬ ಪದವು ಹಲವೆಡೆಗೆ ಬಂದಿದೆ.* ಕನ್ನಡದಲ್ಲಿ ಒಂದೆಡೆಯಲ್ಲಿಯೂ ಇಲ್ಲ. ಡಾ. ಹಟ್ಟಿ ಕೃಷ್ಣರು ಈ ಮಾತನ್ನು ಸ್ಪಷ್ಟವಾಗಿ ಹೀಗೆ ಹೇಳಿದ್ದಾರೆ.†

> Tamil tradition appears to spell the word as ‘ ಕರುನಾಡ ’........No instance has been found of the use of this form by Kannada people themselves.

ಈನಾಡಿನ ಅಚ್ಚ ಹೆಸರೆಂದು ಹೇಳುವ ‘ ಕರುನಾಡ’ ಎಂಬ ಪದವು ಈ ನಾಡಿನ ಜನರಿಗೇ ಅಪರಿಚಿತವಾಗಿರಬೇಕೆ ? ಅರ್ವಾಚೀನರು ಈ ಹೆಸರನ್ನು ಮರೆತಿರುವರೆಂದು ಬಾಯಿಕಟ್ಟಬಹುದು. ಆದರೆ ನಮ್ಮ ಪ್ರಾಚೀನ ಸಾಹಿತ್ಯದಲ್ಲಿಯೂ ಇದು ಕಾಣದಿರುವುದಕ್ಕೆ ಕಾರಣವೇನು? ಅಲ್ಲದೆ ತಮಿಳರ ಹೊರತು ಕರುನಾಡಿಗರೆಂದು ಕನ್ನಡಿಗರನ್ನು ಕರೆದವರು ನೆರೆಹೊರೆಯ ನಾಡಿನಲ್ಲಿ ಬೇರೆ ಯಾರೂ ಇಲ್ಲ. ಸಂಸ್ಕೃತ ಅಥವಾ ಪ್ರಾಕೃತಸಾಹಿತ್ಯದಲ್ಲಿಯೂ ಈ ಬಗೆಯ ಪ್ರಯೋಗಗಳು ಇದ್ದುದು ಬೆಳಕಿಗೆ ಬಂದಿಲ್ಲ. ಆದುದರಿಂದ ‘ ಕರುನಾಡ ’ ಎಂಬ ಪದವು ಕೇವಲ ತಮಿಳರ ಪ್ರಯೋಗವೆಂದೇ ನಿಶ್ಚಿತವಾಗುತ್ತದೆ.

ತಮಿಳಿನಲ್ಲಿಯೆ ಈಬಗೆಯ ಶಬ್ದವು ಕಾಣಿಸಿಕೊಳ್ಳಲಿಕ್ಕೆ ಕಾರಣವೇನು? ತಮಿಳಿನಲ್ಲಿರುವ ‘ ಕರುನಾಡ’ ಶಬ್ದದ ನಿಜಸ್ವರೂಪವು ತಿಳಿಯಬೇಕಾಗಿದ್ದರೆ ಆ ಭಾಷೆಯ ಉಚ್ಚಾರ ಮತ್ತು ಲಿಪಿಗಳ ವೈಶಿಷ್ಟ್ಯಗಳನ್ನು ಮೊದಲು ಅರಿತುಕೊಳ್ಳಬೇಕು.

ತಮಿಳಿನ ವರ್ಗೀಯ ವ್ಯಂಜನಗಳಲ್ಲಿ ಮೊದಲ ಮತ್ತು ಕೊನೆಯವೆರಡೆ ಅಕ್ಷರಗಳುಂಟು. ವರ್ಗದ ಮೊದಲಕ್ಕರವು ಶಬ್ದದ ನಡುವೆಬಂದಾಗ (ಅದು ದ್ವಿತ್ತ್ವವಾಗಿಲ್ಲದಿದ್ದರೆ) ಮೂರನೆಯ ಅಕ್ಷರದಂತೆ ಉಚ್ಚರಿಸುವುದು ಅವರ ರೂಢಿ. ‘ ದಾತ’ ಶಬ್ದವನ್ನು ತಮಿಳಿನಲ್ಲಿ ‘ ತಾತ’ ಎಂದೆ ಬರೆಯಬೇಕಾಗುವುದು ಏಕೆಂದರೆ ಅವರಲ್ಲಿ ಮೂರನೆಯ ವರ್ಗೀಯ ವ್ಯಂಜನಕ್ಕೆ ಬರೆಹದ ಗುರುತು ಇಲ್ಲ. ಬರೆಯುವುದು ತಾತವಾಗಿದ್ದರೂ ‘ ದಾತ’ ಎಂದು ಓದಬೇಕಾಗುವುದು. ಏಕೆಂದರೆ ಶಬ್ದದ ನಡುವೆ ಬರುವ ವರ್ಗದ ಮೊದಲನೆಯ ಅಕ್ಷರವನ್ನು

† See Tamil Lexicon.

* ಕರ್ಣಾ—ಕರ್ನಾ. ಪುಟ ೪೫.

ಮೂರನೆಯ ಅಕ್ಷರದಂತೆ ಉಚ್ಚರಿಸುವುದು ಅವರ್ಕೆರೂಢಿ. ಇಂತಹ ವಿಚಿತ್ರ ಪರಿಸ್ಥಿತಿಯಿರುವುದರಿಂದ ಸಂಸ್ಕೃತ ಮೊದಲಾದ ಪರಭಾಷೆಗಳಿಂದ ತಮಿಳಿನಲ್ಲಿ ಸೇರಿದ ಶಬ್ದಗಳ ಮೂಲಸ್ವರೂಪವೆ ಬದಲಾಗಿ ಅವು ಮೂಲ ತಮಿಳ ನುಡಿಗಳೆಂಬ ಭ್ರಾಂತಿಯುಂಟಾದ ಉದಾಹರಣೆಗಳಿಗೆ ಕೊರತೆಯಿಲ್ಲ ಆ ಶಬ್ದಗಳಿಗೆ ತಮಿಳಿನಿಂದಲೂ ಅರ್ಥವಾಗುತ್ತಿದ್ದರಂತೂ ಮಾತೆ ಮುಗಿಯಿತು ! ಈಗ 'ಕರುನಾಡ' ಶಬ್ದದ ಹಣೆಬರೆಹವು ಹೀಗೆಯೆ ಆಗಿದೆ. ಸಂಸ್ಕೃತ ನಾಟ ಶಬ್ದವನ್ನು ತಮಿಳಿನಲ್ಲಿ 'ನಾಟ' ಎಂದೇ ಬರೆದರೂ ಉಚ್ಚರಿಸುವುದು 'ನಾಡ' ಎಂದು. ಈ ಬಗೆಯಾಗಿ ಕರ್ಣಾಟದೊಳಗಿನ ನಾಟವು ತಮಿಳಿನಲ್ಲಿ ನಾಡವಾಗಿರಲಿಕ್ಕೆ ಸಾಕು.

ಸಂಸ್ಕೃತದೊಳಗಿನ ಸಂಯುಕ್ತಾಕ್ಷರಗಳನ್ನು ಉಚ್ಚರಿಸಲು ಸುಲಭವಾಗಬೇಕೆಂದು ಅವನ್ನು ಬಿಡಿಸಿಹೇಳುವ ಪರಿಪಾಠವು ತಮಿಳಿನ ಬಳಗದ ಎಲ್ಲ ಭಾಷೆಗಳಲ್ಲಿಯೂ ಉಂಟು. ಅದರಲ್ಲಿಯೂ ತಮಿಳಿನಲ್ಲಿ ವಿಶೇಷ. 'ಕರ್ಣಿಕಾ' ಶಬ್ದದ ತದ್ಭವವು ತಮಿಳಿನಲ್ಲಿ ಕರುಣಿಕೈ(ಗೈ) ಆಗದ್ದುದನ್ನು ಕಾಣಬಹುದು. 'ಗರ್ಭ' ದಿಂದ 'ಕರು' ಆಗಿದೆ. ಕರ್ತಾ ಶಬ್ದವು ಕರುತ್ತಾ ಎಂದು ರೂಪುಗೊಂಡಿದೆ * ಇದೇ ವೇರಿಗೆ ತಮಿಳಿನಲ್ಲಿ ಒತ್ತಕ್ಷರವನ್ನು ಉಚ್ಚರಿಸಲಿಕ್ಕಾಗದೆ 'ಕರ್ಣಾಟ' (ಕರ್=ಕರು, ನಾಟ=ನಾಡ ) ಕರುನಾಡ(ಟ) ಎಂಬುದಾಗಿ ಅದು ಪರಿಣಮಿಸಿದ್ದರೆ ಸೋಜಿಗವೇನು ?

ಆದುದರಿಂದ 'ಕರುನಾಡು' ಎಂಬುದು ತಮಿಳಭಾಷೆಯೊಳಗಿನ ಶಬ್ದವೆಂಬುದು ನಿಜವಿದ್ದರೂ ತಮಿಳಭಾಷೆಯ ಮೂಲಶಬ್ದವಲ್ಲ; ಅದು ಸಂಸ್ಕೃತ ತದ್ಭವ, ಕರ್+ನಾಡು ಎಂಬುದನ್ನು ಖಂಡಿಸಿ 'ಕರುನಾಡು' ಎಂಬ ವ್ಯುತ್ಪತ್ತಿಯನ್ನು ಮುಂದೆತಂದ ಶ್ರೀಮಾನ್ ಹತ್ತಂಗಡಿ ನಾರಾಯಣರಾಯರಿಗೆ ಅವರ ನಿರುಕ್ತದಲ್ಲಿ ಅವರಿಗೆ ಸಂಪೂರ್ಣನಂಬುಗೆಯಿಲ್ಲ. ಇದು ಸಂಸ್ಕೃತದಿಂದ ಕೆಟ್ಟು ತಮಿಳಿನಲ್ಲಿ ಬಂದು ಪದವಾಗಿರಬೇಕೆಂದು ತಾವೆ ಮನಬಿಚ್ಚಿ, ಸಂಶೋಧಕನಿಗೆ ಒಪ್ಪುವ ಸರಲಮನಸಿನಿಂದ ಯಾವ ಅಡೆತಡೆಗಳನ್ನೊಡ್ಡದೆ ಒಪ್ಪಿಕೊಂಡಿದ್ದಾರೆ. †

† ಇವುಗಳಿಗೆಲ್ಲ Tamil Lexicon ನೋಡಿ. + JA, 1923; p. 17

> The Tamil word ( ಕರುನಾಡಗನ್ ) may, however be a corruption of the Sanskrit name.

ಈ ಬಗೆಯಾಗಿ 'ಕರುನಾಡ' ನ್ನು ಎತ್ತಿ ಹಿಡಿದವರೇ ಆದರ ಕೈಬಿಟ್ಟಿದ್ದಾರೆ. ಇಂತಹ ಸಂದಿಗ್ಧ ಸ್ಥಿತಿಯಲ್ಲಿ ಮೇಲೆ ಹೇಳಿದ ಎಲ್ಲ ಕಾರಣಗಳ ಸಲುವಾಗಿಯೂ 'ಕರುನಾಡು'(ತಪ್ಪುಲಸೀಪು) ಎಂಬ ಪಕ್ಷವು ಬಹಳ ದುರ್ಬಲವಾಗಿದೆಯೆಂದು ಹೇಳದೆ ಗತಿಯಿಲ್ಲ.

೪. ಇನ್ನು ಕರಂ + ನಾಡು ಎಂಬ ಪಕ್ಷ. ಈ ಪಕ್ಷದ ಪ್ರಮುಖ ನೇತಾರರು ಮಾನ್ಯ ಶ್ರೀ. ಎಂ. ಗೋವಿಂದ ಪೈಗಳವರು. ಇವರು ೧೯೩೦ ರ ಪ್ರಬುದ್ಧ ಕರ್ಣಾಟಕದ ಒಂದು ಲೇಖನದಲ್ಲಿ ಈ ಮಾತನ್ನು ಸ್ವಲ್ಪ ಸೂಚಿಸಿದ್ದರು. ಆದರೆ ಕರ್ಣಾಟ—ಕರ್ನಾಟ ವಾದದ ಪ್ರಸಂಗದಲ್ಲಿ ತಮ್ಮ ವಿಚಾರಗಳನ್ನೆಲ್ಲ ಸಂಪೂರ್ಣವಾಗಿ ವಿವರಿಸಿ ಅನೇಕ ಆಧಾರಗಳೊಡನೆ ಬಹಳ ಪ್ರೌಢವಾದ ಲೇಖನವನ್ನು ಪ್ರಕಟಿಸಿದ್ದಾರೆ.† ಶ್ರೀ. ರಾ. ಹ. ದೇಶಪಾಂಡೆಯವರು ತಾವು ಬರೆದ ಕರ್ನಾಟಕ ಸಾಮ್ರಾಜ್ಯವೆಂಬ ಗ್ರಂಥದಲ್ಲಿ ಮೂರು ಮಹಾರಾಷ್ಟ್ರಗಳನ್ನು ಕುರಿತು ಅಡಿಟಿಪ್ಪಣಿ ಬರೆವಾಗ ಕರು=ಮಹಾ, ನಾಡು=ರಾಷ್ಟ್ರ; ಕರುನಾಡು—ಕರ್ನಾಟವೆಂದರೆ ಮಹಾರಾಷ್ಟ್ರವೆಂಬ ಮಾತನ್ನು ಕಾಣಿಸಿದ್ದಾರೆ (೧೯೩೬) * ಮತ್ತು ಮಿ. ಎ. ಮಾಸ್ಟರ, I. C. S. ಇವರು ೧೯೩೮ ರಲ್ಲಿ ಒಂದು ಲೇಖನವನ್ನು ಬರೆದು ಇದೇ ಮಾತನ್ನೇ ಇನ್ನೊಂದಿಷ್ಟು ಸ್ಪಷ್ಟೀಕರಿಸಿರುವರು.‡

> Karu means not only tall but great, and it seems highly probable that the Prakrit-speeking inhabitants of the north of Deccan high lands simply translated the word ಕರುನಾಡು into Maharashtra ( ಮಹಾರಾಷ್ಟ್ರ ) or Maratha (ಮರಾಠಾ) to designate the area from which they came.

ಶ್ರೀ. ಎಂ. ಗೋವಿಂದ ಪೈಗಳ ಅಭ್ಯಾಸವು ಅಗಾಧವಾದುದು. ಅವರ

† ಕಂಠೀರವ ದಸರಾ ಸಂಚಿಕೆ (೧೯೪೮)

* ಕಸಾಮ್ರಾ I, ಪುಟ ೨೪೦

‡ IA- L, VII p. 175

ಅಧ್ಯಯನವು ಎಷ್ಟೊಂದು ವಿಶಾಲವಾದದ್ದಿರುವುದೆಂಬುದಕ್ಕೆ ಅವರ ಬರೆಹಗಳೇ ಸಾಕ್ಷಿ. ಮೊದಲಿನ ಇಬ್ಬರ ಲೇಖನಗಳು ಬರಿ ಟಿಪ್ಪಣಿಗಾಗಿದ್ದು, ಶ್ರೀ. ಪೈಗಳವರ ಈ ಬರೆಹವು ಬಹಳ ವಿಸ್ತೃತವಾಗಿದೆ. ಪ್ರಾಚೀನ ಕಾಲದಲ್ಲಿ ಮಹಾರಾಷ್ಟ್ರಕ್ಕೆ ಕರ್ಣಾಟದಿಂದ ಭಿನ್ನವಾದ ಸ್ವತಂತ್ರ ಅಸ್ತಿತ್ವವೇ ಇದ್ದಿಲ್ಲವೆಂಬ ಮಾತು ಶ್ರೀ. ಪೈಗಳ ಈ ಲೇಖನದಲ್ಲಿ ಬಹಳ ಚೆನ್ನಾಗಿ ಹೊರಬಂದಿದೆ ಇದನ್ನು ಮೂಲದಲ್ಲಿ ಓದುವುದರಲ್ಲಿಯೆ ಸ್ವಾರಸ್ಯವಿದೆ.

ಶ್ರೀ. ಪೈಗಳವರು ಕರ್ಣಾಟ ಶಬ್ದದ ನಿಷ್ಪತ್ತಿಯನ್ನು ಕುರಿತು ಹೇಳಿದ ಮುಖ್ಯಾಂಶಗಳೇನೆಂದರೆ:

> ಕರಂ, ಕರು, ಕಡು ಎಂಬಿವೆಲ್ಲವೂ ದೊಡ್ಡ, ವಿಸ್ತೀರ್ಣ ಮಹಾ ಎಂಬ ಅರ್ಥದ ಪದಗಳು ಆದುದರಿಂದ ಕರುನಾಡು ಎಂದರೆ ಮಹಾರಾಷ್ಟ್ರವೆಂದರ್ಥ. ಕರು+ನಾಡು. ಕರ್+ನಾಡು=ಕರ್ನಾಡು (ದೊಡ್ಡ ದೇಶ) ಎಂಬ ಕನ್ನಡ ಸಮಾಸಪದವೆ ಸಂಸ್ಕೃತದಲ್ಲಿ ಕರ್ಣಾಟ ಎಂದು ಆಗಿರಬೇಕು. ಕರ್ಣಾಟದ ನಿಷ್ಪತ್ತಿಯನ್ನು ನೋಡುವಲ್ಲಿ ಕರ್ಣಾಟಕವೂ ಮಹಾರಾಷ್ಟ್ರವೂ ಏಕಾರ್ಥಕ ಭಿನ್ನನಾಮಗಳೆಂಬ ಊಹೆಗೆ ಸಾಕಷ್ಟು ಬಲವಿದೆ. ತಾರಾತಂತ್ರ ಎಂಬ ಗ್ರಂಥದಲ್ಲಿ ಮಹಾರಾಷ್ಟ್ರದೇಶದ ಹೆಸರು ಕರ್ಣಾಟ ಎಂದೂ, ಕರ್ಣಾಟವೂ ಮಹಾರಾಷ್ಟ್ರವೂ ಒಂದೇ ದೇಶವೆಂದೂ ಹೇಳಿದೆ. ಪುಲಿಕೇಶಿಯ ಮೂಲ ರಾಜ್ಯವು ಕನ್ನಡ ನಾಡೇ ಆಗಿದ್ದು, ಆತನ ರಾಜಧಾನಿಯಾದ ವಾತಾಪಿ(ಬಾದಾಮಿ) ಅಚ್ಚಕನ್ನಡನಾಡಿನಲ್ಲಿಯೇ ಇದ್ದು ಆತನು ಈ ಮೇಲೆ ಕಂಡಿರುವಂತೆ ಕರ್ಣಾಟಕ ಚಕ್ರವರ್ತಿಯೆ ಆಗಿದ್ದರೂ ಆತನ ಶಾಸನದಲ್ಲಿ ತಾನು ಮೂರು ಮಹಾರಾಷ್ಟ್ರಗಳ ಒಡೆಯನೆಂದು ಹೇಳಿದೆ. ಆತನ ಆಳಿಕೆಯಲ್ಲಿ ಸಂಚರಿಸಿದ ಹ್ವೇತ್ಸಂಗನು ಆತನನ್ನು ಮಹಾರಾಷ್ಟ್ರದ ಅರಸನೆಂದಿರುವನು. ಇವೆಲ್ಲ ಕಾರಣಗಳಿಂದ ಮಹಾರಾಷ್ಟ್ರವೂ ಕರ್ನಾಟಕವೂ ಒಂದೇ ರಾಜ್ಯದ ಭಿನ್ನ

> ನಾಮಗಳೇ ಸರಿ, ಎಂದು ಸಿದ್ಧವಾಗುತ್ತದೆ. ಆದುದರಿಂದ ಕರ್ಣಾಟ=ಕರುನಾಡು (ಮಹಾರಾಷ್ಟ್ರ) ಎಂಬುದು ನಿಶ್ಚಿತ.

ಶ್ರೀಮಾನ್ ಪೈಗಳವರ ಸುಂದರವಾದ ಈ ವಿಚಾರಸರಣಿಯು ಬಹಳ ಮೋಹಕವಾಗಿದೆ. ಒಪ್ಪಿಕೊಂಡು ಬಿಡಬೇಕೆಂದೂ ಮನಸಾಗುತ್ತದೆ. ಆದರೆ ಶ್ರೀಮಾನ್ ಹೆ. ನಾರಾಯಣರಾಯರ ' ಕರುನಾಡು ' ( ಎತ್ತರದ ದೇಶ ) ಎಂಬ ನಿರುಕ್ತವನ್ನು ಕುರಿತು ಹೇಳಿದ ಆಕ್ಷೇಪಣೆಗಳೇ ಇಲ್ಲಿಯೂ ಎದ್ದು ನಿಲ್ಲುತ್ತಲಿವೆ. ಕರುನಾಡು ಎಂಬ ಪದವು ಕೇವಲ ತಮಿಳರದು. ತಮಿಳರ ಹೊರಗೆ ಯಾರ ಬಾಯಿಯಲ್ಲಿಯೂ ಈ ಮಾತಿಗೆ ಎಡೆಯಿಲ್ಲ ! ತೆಲುಗು, ಮರಾಠಿ, ತುಳು, ಕೊಡಗು ಭಾಷೆಗಳಲ್ಲಿ ಒಂದರಲ್ಲಿಯೂ ಕರುನಾಡ ಈ ಪದವು ಕೇಳಲಿಕ್ಕೆ ಸಿಕ್ಕುವುದಿಲ್ಲ. ಸುಮಾರು ೧೫೦೦ ವರುಷಗಳ ಕನ್ನಡ ಸಾಹಿತ್ಯದಲ್ಲಿ ಎಲ್ಲಿ ಒಂದೆಡೆಗಾದರೂ 'ಕರುನಾಡು' ಬಂದಿದ್ದರೆ ಆಣೆ! ಇದರಿಂದ ಕನ್ನಡದ ನಾಮಕರಣ ವಿಧಿಯು ಕೇವಲ ತಮಿಳರಿಂದಲೇ ಆಯ್ತೆಂದು ಊಹಿಸಬೇಕಾಗುತ್ತದೆ. ಪ್ರಾಚೀನ ಕಾಲದಲ್ಲಿ ಆ ಹೆಸರೆ ಕೆಲಕಾಲದ ವರೆಗಾದರೂ ಬಳಕೆಯಲ್ಲಿದ್ದು ಮುಂದೆ ಕಾಲಕ್ರಮದಿಂದ ಕರುನಾಡು—ಕರ್ನಾಡು—ಕರ್ಣಾಟವೆಂದಾಗಿರಬೇಕಷ್ಟೆ ? ಕೆಲಕಾಲದ ವರೆಗೆ ಸಾರ್ವತ್ರಿಕ ಪ್ರಚಾರದಲ್ಲಿದ್ದ (?) 'ಕರುನಾಡ' ಎಂಬ ಪದವು ಉಳಿದ ನೆರೆಹೊರೆಯ ಒಂದಾದರೂ ಭಾಷೆಯಲ್ಲಿ ಒಂದೆಡೆಗಾದರೂ ಕಾಣಿಸಿಕೊಳ್ಳಬೇಕಾಗಿದ್ದಿತಲ್ಲವೆ ?

ಇನ್ನೊಂದು ವಿಚಾರ. ತಮಿಳಿನಲ್ಲಿ ನಮ್ಮ ನಾಡಿಗೆ ಇರುವ ಹೆಸರುಗಳನ್ನು ಸ್ವಲ್ಪ ಹೊಂದಿಸಿ, ಹೋಲಿಸಿ ನೋಡುವಂತಿದೆ. ಕರುನಾಡು, ಎಂಬ ಪದದಂತೆ ಕನ್ನಾಡು ಮತ್ತು ಕನ್ನಡ ಇವುಗಳೂ ತಮಿಳಿನಲ್ಲಿದೆ. ಕನ್ನಾಡು ಮತ್ತು ಕನ್ನಡ ಇವೆರಡೂ ಒಂದೇ, ಎಂಬ ವಿಚಾರವು ಹಿಂದೆ ( ಪುಟ ೫೧–೫೪ ) ಬಂದಿದೆ. ಕನ್ನಡ (ಕನ್ನಾಡು) ಇದರ ಪರಂಪರೆಯು ನಮ್ಮ ಸಾಹಿತ್ಯದಲ್ಲಿಯೂ ಇದೆ; ತೆಲುಗು, ತುಳು, ಆರೆ ಮೊದಲಾದ ಭಾಷೆಗಳಲ್ಲಿಯೂ ಈ ಶಬ್ದವುಂಟು. ಶಾರದಾತನಯನು ( ೧೩ನೆಯ ಶತಮಾನ ) ಸಂಸ್ಕೃತದ ಶ್ಲೋಕದಲ್ಲಿ ಕೂಡ ' ಕನ್ನಡ' ಎಂಬುದನ್ನು ಪ್ರಯೋಗಿಸಿದ್ದಾನೆ. ( ಹಿಂದೆ ೩೪

ನೆಯ ಪುಟದ ಟಿಪ್ಪಣಿ ನೋಡಿ). ಆದರೆ ಕರುನಾಡು ಎಂಬ ಪ್ರಯೋಗವು ಮಾತ್ರ ತಮಿಳಿನ ಹೊರಗೆ ಬೇರೆ ಭಾಷೆಗಳಲ್ಲಿ ಎಲ್ಲಿಯೂ ಇಲ್ಲ. 'ಕರುನಾಡ್' ಎಂಬುದು ಕನ್ನಡ ಅಥವಾ ಕನ್ನಾಡ ಇದಕ್ಕೆ ಅಷ್ಟು ಹತ್ತಿರದವಲ್ಲ. ಈ ಮೊದಲು ವಿವರಿಸಿದಂತೆ— ಅದೇಕೆ? ಶ್ರೀ. ಹ. ನಾರಾಯಣರಾಯರೇ ಒಪ್ಪಿಕೊಂಡಿರುವಂತೆ ಕರುನಾಡು, ಇದು ಕರ್ಣಾಟ ಇದರ ತಮಿಳ ರೂಪವು. ಆದುದರಿಂದ ಕನ್ನಾಡ, ಕನ್ನಡಗಳಂತೆ ಕರ್ಣಾಟ, ಕರುನಾಡ ಇವೆರಡೂ ಒಂದು.

ತಮಿಳಿನಲ್ಲಿ ಈ ಬಗೆಯ ಎರಡೆರಡು ರೂಪಗಳು ಬಳಕೆಯಲ್ಲಿದ್ದುದರ ಬೇರೆ ಉದಾಹರಣಗಳೂ ಉಂಟು. ಪ್ರತ್ಯಕ್ಷ 'ತಮಿಳ' ಶಬ್ದವೇ ಇದಕ್ಕೆ ಸಾಕ್ಷಿಯಾಗಿದೆ. 'ತಮಿಳ' ಶಬ್ದವು ದಮಿಳ—ದ್ರಮಿಡ—ದ್ರವಿಡ ಎಂದು ರೂಪಾಂತರಗಳನ್ನು ಹೊಂದುತ್ತ ಕೊನೆಯ ರೂಪದಲ್ಲಿ ಸಂಸ್ಕೃತಸಾಹಿತ್ಯದಲ್ಲಿ ಕಾಣಿಸಿಕೊಳ್ಳುತ್ತಿದೆಯೆಂದು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ. ತಮಿಳ ಎಂಬುದು ಮೂಲಪದ; ದ್ರವಿಡ ಎಂಬುದು ಸಂಸ್ಕೃತ. 'ತಮಿಳ' ಎಂಬ ಮೂಲ ಹೆಸರು ಇರುವಾಗಲೂ ಸಂಸ್ಕೃತದ 'ದ್ರವಿಡ' ಎಂಬುದು ತಮಿಳೀಕರಣವನ್ನು ಹೊಂದಿ ಮತ್ತೆ ಆ ಭಾಷೆಯಲ್ಲಿ 'ತಿರಮಿಡ' ಎಂಬ ರೂಪದಿಂದ ಸೇರಿಕೊಂಡುದು ಕಂಡುಬರುತ್ತದೆ. ಜುಲೆಸ್ ಬ್ಲೊಕ್ ಎಂಬ ಸಂಶೋಧಕರು 'ತಿರಮಿಡ' ವು ಹೇಗೆ ಆಯ್ತೆಂಬುದನ್ನು ಕುರಿತು ಬರೆದ ಟಿಪ್ಪಣಿಯಿಂದ† ಕನ್ನಡ (ಕನ್ನಾಡು) ಎಂಬ ಮೂಲಪದವು ಇರುವಾಗಲೂ 'ಕರುನಾಡು' ಎಂಬುದು ಹೇಗೆ ತಲೆದೋರಿರಬೇಕೆಂಬುಂದರ ಕಾರಣ ಮೀಮಾಂಸೆಯು ಚೆನ್ನಾಗಿ ಗೊತ್ತಾಗುವಂತಿದೆ.

---

† .... " Tamil was adopted into Sanskrit in early times as Dravida, which occurs, for example in the Mahabharata, in the Atharvaveda parishishta and in the Code of Manu, not only has the word thus transliterated survived to us in Sanskrit literature, it even imposed itself on Tamil men of letters who retransliterated it into their own characters as " Tiramida ",

—IA. 1919, p. 194

ಶ್ರೀಮಾನ್ ಗೋವಿಂದ ಪೈಗಳು ಅತ್ಯಂತ ಪರಿಶ್ರಮದಿಂದ ಹಲವು ಬಗೆಯ ಸಾಧನ ಸಂಪತ್ತುಗಳನ್ನು ಸಂಗ್ರಹಿಸಿ ಒಂದು ಸುಂದರವಾದ ವಿಚಾರ ಮಂದಿರವನ್ನು 'ಕರುನಾಡು' ಈ ಅಡಿಗಲ್ಲಿನ ಮೇಲೆ ನಿಲ್ಲಿಸಿದರು. ಆದರೆ 'ಕರುನಾಡು' ಎಂಬುದೆ ವಿಕೃತವಾದ ಪದವಾಗಿದ್ದುದರಿಂದ ಶ್ರೀಮಾನ್ ಪೈಗಳವರ ಲೇಖನದ ಮೂಲಾಧಾರವೆ ಸಡಿಲಿದಂತಾಗಿದೆ. ಕರ್ಣಾಟ ಮತ್ತು ಮಹಾರಾಷ್ಟ್ರಗಳು ಪ್ರಾಚೀನ ಕಾಲದಲ್ಲಿ ಅಭಿನ್ನವಾಗಿದ್ದುದು ನಿಜ. ( ಇದರ ವಿವರಣೆಯು ೨ನೆಯ ಅಧ್ಯಾಯದಲ್ಲಿಯೂ ಕೊನೆಯ ಅಧ್ಯಾಯದಲ್ಲಿಯೂ ಬಂದಿದೆ.) ಆದರೆ ಅದರ ಮೂಲಕವಾಗಿ ಮಹಾರಾಷ್ಟ್ರ ಶಬ್ದವು ಕರ್ಣಾಟ ಎಂಬರ್ಥದ ಒಂದು ಶಬ್ದದ ಭಾಷಾಂತರವೇ ಆಗಿರಬೇಕೆಂದು ತರ್ಕಿಸುವುದು ಹೇಗೆ ತಾನೆ ಸರಿಯಾದೀತು ?

೫. ಕೀರ್ತಿಶೇಷರಾದ ಶ್ರೀಮಾನ್ ಆರ್. ನರಸಿಂಹಾಚಾರ್ಯರ ಪಂಥವು ಕಾಲಾನುಕ್ರಮದಲ್ಲಿ ಐದನೆಯದಾಗಿದೆ. ಕವಿಚರಿತೆಯ ಮೂರನೆಯ ಭಾಗದ ಮುನ್ನುಡಿಯಲ್ಲಿಯೂ ಇಂಗ್ಲೀಷಿನಲ್ಲಿ ಬರೆದ ಕನ್ನಡ ಭಾಷೆಯ ಇತಿಹಾಸವೆಂಬ ಗ್ರಂಥದಲ್ಲಿಯೂ ಶ್ರೀ. ಆಚಾರ್ಯರು ತಮ್ಮ ವಿಚಾರಗಳನ್ನು ಬಿಡಿಸಿಹೇಳಿದ್ದಾರೆ. ಇವರ ಅಭಿಪ್ರಾಯದಂತೆ 'ಕನ್ನಡ' ವೇ ಮೂಲಶಬ್ದವಾಗಿದ್ದು ಕರ್ಣಾಟವೆಂಬುದು ಸಂಸ್ಕೃತದ ರೂಪಾಂತರ.

> " ಕನ್ನಡಿಗರು ತಮ್ಮ ಭಾಷೆಯನ್ನು ಕರಿಯ ನಾಡಿನ ಭಾಷೆಯೆಂದು ಕರೆದಿರಲಾರರು. ತಮಿಳರೂ, ತೆಲುಗರೂ ತಮ್ಮತಮ್ಮ ಭಾಷೆಗಳ ಹೆಸರುಗಳನ್ನು ಮಾಧುರ್ಯ ವಾಚಿಯಾದ ಪದಗಳಿಂದ (ತಮಿಳ್, ತೇನೆ) ಹುಟ್ಟಿದುವೆಂದು ಹೇಳುತ್ತಾರೆ. ಕನ್ನಡಿಗರೂ ತಮ್ಮ ಭಾಷೆಯ ಹೆಸರು ಒಂದು ಸುಗುಣವಾಚಿಯಾದ ಶಬ್ದದಿಂದ ಹುಟ್ಟಿತೆಂದು ಭಾವಿಸಿದರೆ, ಆಕ್ಷೇಪಣೆಗೆ ಕಾರಣವಿಲ್ಲ. ಈ ಶಬ್ದವು ಪರಿಮಳವಾಚಿಯಾದ ಕಮ್ಮಿತು ಎಂಬುದು. ಕಮ್ಮಿತು+ನಾಡು ಎಂಬ ಪದಗಳುಸೇರಿ ಕನ್ನಾಡು ಎಂದು ಆಗಿದೆ. ಕನ್ನಾಡು ಎಂಬುದು ಕನ್ನಡು ಎಂಬುದಾಗಿ ಕೊನೆಗೆ ಕನ್ನಡ ಎಂಬ ರೂಪವನ್ನು ಹೊಂದಿತು. ಅಂತು

> ಕನ್ನಡ ಎಂಬ ಪದಕ್ಕೆ ಪರಿಮಳ ವಿಶಿಷ್ಟವಾದ ದೇಶದ ಭಾಷೆಯೆಂದು ಅರ್ಥವಾಗುವುದು; ಕನ್ನಡ (ದೇಶ) ಶ್ರೀಗಂಧದ ಮರದ ಕಾಡುಗಳಿಗೂ ಪದ್ಮಾಕರಗಳಿಗೂ ಪ್ರಸಿದ್ಧಿಯನ್ನು ಪಡೆದಿರುವುದರಿಂದ ಈ ವಿಶೇಷಣವು ಅದಕ್ಕೆ ಅನುರೂಪವಾದುದು ಎಂಬುದರಲ್ಲಿ ಸಂಶಯವಿಲ್ಲ." *

ಶ್ರೀಮಾನ್ ಆಚಾರ್ಯರು ತಮ್ಮ ಅಭಿಪ್ರಾಯಕ್ಕೆ ಪೋಷಕವೆಂದು ಶ್ರೀ. ಆರ್. ತಾತಾಚಾರ್ಯ, ಎಂ. ಎ. ಇವರು ಬರೆದ ಉಪಾಧ್ಯಾಯನ ಚರಿತೆಯೊಳಗಿನ ಒಂದು ಪದ್ಯವನ್ನೇ ಉದಹರಿಸಿದ್ದಾರೆ.

ಕಮ್ಮಿತ್ತಾದುದು ನಾಡುನಡೆಯಿಂ । ಕಮ್ಮಿತ್ತಾದುದು ನಾಡುನುಡಿಯಿಂ ।
ಕಮ್ಮಿತ್ತಾದುದು ಚಂದನೋರ್ವೀರುಹದಿನೀ ನಾಡು ॥
ಕಮ್ಮಿತ್ತಾದುದು ಕಮ್ಮಯಿಸುವಾ । ಕಮ್ಮರಲ್ಗಳಿನಿತು ಕಂಪಿಂ ।
ಕಮ್ಮಿತಲ್ಲದೆ ಕರ್ಪುರ್ ಕನ್ನಡಕೆಂತು ಸಮನಿಸಿತು ? ॥

ಕಸ್ತ್ರನೆಯ ನಾಡು ಎನ್ನುವುದಕ್ಕಿಂತ ಕಮ್ಮನೆಯ ನಾಡು ನಮ್ಮದು, ಎಂದರೆ ಪ್ರತಿಯೊಬ್ಬ ಕನ್ನಡಿಗನೂ ಅಭಿಮಾನಪಡತಕ್ಕ ಮಾತೇ ಸರಿ. ಆದರೆ ನಮ್ಮ ಅಭಿಮಾನಕ್ಕೆ ಪೋಷಕವಾದ ಸಂಗತಿಗಳೆಲ್ಲ ಸತ್ಯವಾದವುಗಳೇ ಇರುವುವೆಂಬ ನಿಶ್ಚಿತವಿಲ್ಲ. ತಮ್ಮ ನಾಡು, ತಮ್ಮ ನುಡಿಗಳಲ್ಲಿ ಅಭಿಮಾನ ಪ್ರೀತಿಗಳು ಹೆಚ್ಚುವುದಕ್ಕಾಗಿ ಕೆಲವೊಂದು ಕಾಲದಲ್ಲಿ ಈ ಬಗೆಯ ಅರ್ಥವನ್ನು ಮಾಡಬಹುದು; ಹಾಡುಗಳನ್ನು ಕಟ್ಟಬಹುದು. ಆದರೆ ಶಾಸ್ತ್ರೀಯ ದೃಷ್ಟಿಯಿಂದ ವಿವೇಚಿಸುವಾಗ, ಸತ್ಯವನ್ನು ಅರಿತುಕೊಳ್ಳಲು ಪ್ರಯತ್ನಿಸುತ್ತಿರುವಾಗ ಈ ಬಗೆಯ ಅಭಿಮಾನ ಆವೇಶಗಳಿಗೆ ಸ್ವಲ್ಪವೂ ಎಡೆಯನ್ನು ಕೊಡಲಾಗದು. "ತಮಿಳರೂ ತೆಲುಗರೂ ತಂತಮ್ಮ ಭಾಷೆಯ ಹೆಸರುಗಳನ್ನು ಮಾಧುರ್ಯವಾಚಿಪದಗಳಿಂದ ಹುಟ್ಟಿದುವೆಂದು ಹೇಳುವರು; ಹಾಗೆ ಕನ್ನಡಿಗರೂ ಹೇಳಿದರೆ ಆಕ್ಷೇಪಣೆಗೆ ಕಾರಣವಿಲ್ಲ." ಎಂದು ಶ್ರೀಮಾನ್ ಆಚಾರ್ಯರು ಹೇಳುವರು. ಆದರೆ ಈ ತರ್ಕಪದ್ಧತಿಯೆ ಸದೋಷವಾಗಿದೆ. ತಮಿಳರೂ ತೆಲುಗರೂ ತಮ್ಮ ಭಾಷೆಗಳು ಜೇನಿನಿಂದ ಹುಟ್ಟಿದುವು, ಅಮೃತದಿಂದಾದುವು ಎಂದು

* ಕಚ. ಮುನ್ನುಡಿ ಪುಟ ೩

ಮುಂತಾಗಿ ಹೇಳಿದರೆ ನಾವೂ ಅದರಂತೆಯೆ ಏಕೆ ಹೇಳಬೇಕು ? ಅವರು ಹಾಗೆ ಹೇಳುವುದು ಸರಿಯಾದುದು, ಶಾಸ್ತ್ರೀಯವಾದುದು ಎಂದು ಯಾರು ಹೇಳುವರು ? ತಮಿಳರೂ ತೆಲುಗರೂ ತಮ್ಮ ಭಾಷೆಗಳು ಮಾಧುರ್ಯ ವಾಚಿ ಪದಗಳಿಂದ ಹುಟ್ಟಿದುವೆಂದು ಹೇಳುವುದೇ ಮೊದಲು ತಪ್ಪು ಆಗಿದ್ದರೆ ! ನಾವು ಅದೇ ಬಗೆಯ ತಪ್ಪನ್ನು ಏಕೆ ಮಾಡಬೇಕು ?

'ತೆಲುಗು' ಎಂಬ ಪದವು ಮೂಲದಲ್ಲಿ ದೇಶವಾಚಕವೊ ಭಾಷಾ ವಾಚಕವೊ ? ಶ್ರೀಮಾನ್ ಆರ್. ನರಸಿಂಹಾಚಾರ್ಯರ ಮೇಲಣ ಅವತರಣಿಕೆ ಯಿಂದ ಎಷ್ಟೋ ತೆಲುಗರು 'ತೆಲುಗು' ಈ ಶಬ್ದವು ಭಾಷಾವಾಚಕವೆಂದು ನಂಬಿದಂತೆ ತೋರುತ್ತದೆ ! ಮೊದಲು ಭಾಷಾವಾಚಕವಾಗಿದ್ದರೆ, ಈ ತೆಲುಗು ಭಾಷೆಯನ್ನು ಆಡುವವರ ನಾಡು ಎಂದು ಆ ನಾಡಿಗೆ ನುಡಿಯಿಂದ ಆ ಹೆಸರು ಬಂದಿತೆಂದು ಊಹಿಸಬೇಕಾಗುತ್ತದೆ. ಆದರೆ ಇದು ಜಗತ್ತಿನ ಐತಿಹಾಸಿಕ ಕ್ರಮಕ್ಕೆ ವಿಪರೀತವಾದ ಮಾತು. ಭಾಷೆಯಿಂದ ಯಾವ ದೇಶಕ್ಕೂ ಹೆಸರು ಬಂದಿಲ್ಲ. ಮೂಲದಲ್ಲಿ ತೆಲುಗು ಎಂಬುದು ಭಾಷಾವಾಚಕ ವಾದ ಪದವೇ ಅಲ್ಲ. ಆದುದರಿಂದ ತೆಲುಗು ಎಂದರೆ ( ತೇನ್=ಜೇನ್ ) ಜೇನಿನಂತಹ ನುಡಿ ಎಂದು ಅರ್ಥ ಮಾಡುವುದು ವಿಪರೀತ. ಬಾದರಾಯಣ ಸಂಬಂಧ. ಬೇಕಾದರೆ ಜೇನಿನಂತಹ ನಾಡು ಎನ್ನಬಹುದು. ಆದರೆ ಹಾಗೆ ಹೇಳುವುದಕ್ಕೂ ನಾಲಗೆಯು ಏಳದು. ಏಕೆಂದರೆ, ಅನೇಕ ತೆಲುಗು ವಿದ್ವಾಂ ಸರೆ ತ್ರಿ (ಕ) ಲಿಂಗ ಎಂಬುದರಿಂದ ತೆಲುಗು ಶಬ್ದವು ಸಿದ್ಧವಾದುದನ್ನು ಹೇಳು ತ್ತಾರೆ. ಪ್ರೊ. ಲೆವಿಯವರ ಅಭಿಪ್ರಾಯದಂತೆ ಕಲಿಂಗವು ತ್ರಿಕಲಿಂಗವಾಗಿ, ಅದುವೆ ಮುಂದೆ ತ್ರಿ (ಕ) ಲಿಂಗ—ತಿಲಿಂಗ—ತೆಲಂಗ—ತೆಲುಗು ಆಯ್ತು. *

ತೆಲುಗರು, ತಮ್ಮ ನುಡಿಯ ಹುಟ್ಟಿಗೆ ಕಣ್ವಋಷಿಯೆ ಕಾರಣನೆಂದೂ ಹಲವು ಬಾರಿ ಹೆಮ್ಮೆಯಿಂದ ಹೇಳಿಕೊಳ್ಳುವರು. ತಮಿಳರು ಅಗಸ್ತ್ಯನಿಂದ ತಮ್ಮ ಭಾಷೆ ಹುಟ್ಟಿತೆನ್ನುವರು. ಋಷಿಯ ಅಮೃತವಾಣಿಯಾದ್ದರಿಂದ ತಮ್ಮ ಭಾಷೆ ಪವಿತ್ರವೆಂದೂ ಹೇಳುವರು. ಇದೀಗ ಇನ್ನೊಂದು ತೊಡಕು: ಒಮ್ಮೆ ತಮ್ಮ ನುಡಿಗಳು ತೆಲುಗು, ತಮಿಳ್ ಎಂಬ ಮಾಧುರ್ಯವಾಚಿ ಪದ ಗಳಿಂದ ಆದುವು ಎನ್ನುವರು; ಇನ್ನೊಮ್ಮೆ ಋಷಿಗಳೇ ತಮ್ಮ ಭಾಷೆಗೆ ಕಾರ

---

* PAPD. pp. 74-81

ಣರು ಎನ್ನುವರು ! ಯಾವುದೋಂದೇ ವ್ಯಕ್ತಿಯಿಂದ ಇಡೀ ಜನಾಂಗದ ಭಾಷೆಯೆಲ್ಲ ನಿರ್ಮಿತವಾಯ್ತು, ಎಂಬುದು ಸಂಭಾವ್ಯವೇ ? ಈ ಬಗೆಯ ಹೇಳಿಕೆಯನ್ನು ನಂಬುವುದು ಹೇಗೆ ? ಒಂದೇ ಕಾಲಕ್ಕೆ ಎರಡೂ ನಿಜವಾಗಿ ರಲಾರವು. ಒಂದು ನಿಜವಿದ್ದರೆ ಒಂದು ಸುಳ್ಳಾಯ್ತು. ಆವುದು ನಿಜ ? ಆವುದು ಸುಳ್ಳು ?

ಆಧುನಿಕ ಶಾಸ್ತ್ರೀಯ ದೃಷ್ಟಿಯಿಂದ ವಿಚಾರಿಸಿದರೆ ಎರಡೂ ತೊಡಕು; ಎರಡೂ ಅಶಾಸ್ತ್ರೀಯ. ಒಬ್ಬನಿಂದಲೇ ಒಂದು ಭಾಷೆಯು ರಚಿಸಲ್ಪಡುವುದೇ ಸಾಧ್ಯವಿಲ್ಲ. ತೆಲುಗು, ತಮಿಳು ಎರಡೂ ಮೂಲದಲ್ಲಿ ಭಾಷಾವಾಚಕಗಳಲ್ಲ. ಶ್ರೀಮಾನ್ ಆರ್. ನರಸಿಂಹಾಚಾರ್ಯರು ತೆಲುಗು, ತಮಿಳಿನ ಅಭಿಮಾನಿಗಳು ಹೇಳುವ ವ್ಯುತ್ಪತ್ತಿಯನ್ನು ನೆರೆನಂಬಿ ಅವುಗಳ ಜಾಡ ಹಿಡಿದು ನಡೆದುದರಿಂದ ಇವರ ನಿರುಕ್ತವು ಕೂಡ ಅಭಿಮಾನಯುಕ್ತವಾಗಿದ್ದರೂ ದಾರಿ ತಪ್ಪಿದೆ.

೬. ‘ಕನ್ನಡ’ ಎಂಬ ಪದವನ್ನೆ ಮೂಲಶಬ್ದವನ್ನಾಗಿ ಇಟ್ಟುಕೊಂಡು ಇನ್ನೊಂದು ಬಗೆಯಿಂದ ನಿರುಕ್ತ ಹೇಳಿದ ಒಂದು ಲೇಖನವು ನನ್ನ ಗೆಳೆಯರಾದ ಶ್ರೀಮಾನ್ ಬೇಂದ್ರೆ ಮತ್ತು ಬೆಟಗೇರಿಯವರಿಂದ ಬರೆಯಲ್ಪಟ್ಟಿತ್ತು.* ಕರ್ಣಾಟ ಎಂಬುದು ಮೂಲಶಬ್ದವಾಗಿರದೆ, ಕನ್ನಡವೆ ಕರ್ಣಾಟಕ್ಕೆ [illegible]ಯಾಗಿರಬೇಕು ಎಂಬುದನ್ನು ಒಂದು ಹೊಸಬಗೆಯಿಂದ ವಿವರಿಸಿದ್ದಾರೆ.

> “ಸಂಸ್ಕೃತ ಪದಭೂಯಿಷ್ಠವಾದ ಕವಿರಾಜಮಾರ್ಗದಲ್ಲಿ ನೃಪತುಂಗನು ‘ಕಾವೇರಿಯಿಂದಂ ಆ ಗೋದಾವರಿವರಂ ಇರ್ದ ನಾಡು ಅದು ಕನ್ನಡದೊಳ್ ಭಾವಿಸಿದ ಜನಪದಂ’ ಎಂದೂ ‘ನಡುವಣ ನಾಡೆ ಕನ್ನಡದ ತಿರುಳ್’ ಎಂದೂ ಮಾತ್ರ ಹೇಳಿರುವನು. ಕರ್ಣಾಟದ ಹೆಸರನ್ನೇ ಎತ್ತಿಲ್ಲ. ಆಂಡಯ್ಯನು ಕನ್ನಡಮೆನಿಪ್ಪಾ ನಾಡನ್ನೆ ಬಣ್ಣಿಸುವನು. ಸಂಗೀತಶಾಸ್ತ್ರಜ್ಞರು ಒಂದೊಂದು ರಾಗಕ್ಕೆ ಒಂದೊಂದು ದೇಶದ ಹೆಸರನ್ನು ಕೊಟ್ಟಿದ್ದಾರೆ. ನಮ್ಮ ದೇಶದ ಹೆಸರನ್ನಿಡುವಾಗ ‘ಕನ್ನಡ ರಾಗ’ ಎಂದರೆ

* ಜಕ. X, ಪುಟ ೫೫೩-೫೫೫.

> ಹೊರತು ' ಕರ್ಣಾಟ ರಾಗ ' ಎನಲಿಲ್ಲ. ಎಲ್ಲೂರು ( ಸುಪ್ರಸಿದ್ಧ ಶಿಲ್ಪಕಲೆಯ ಎಲೋರಾ ) ಇರುವ ಪ್ರದೇಶಕ್ಕೆ ಕನ್ನಡ ಎಂಬ ಹೆಸರು ಇದುವರೆಗೆ ಉಳಿದುಕೊಂಡು ಬಂದಿದೆ. ಈ ಎಲ್ಲ ಮಾತುಗಳನ್ನೂ ವಿಚಾರ ಮಾಡಿ ನೋಡಿದಲ್ಲಿ ನಮ್ಮ ಮಾತಿಗೆ ತೀರ ಮೊದಲು "ಕನ್ನಡ" ವೆಂಬೇ ಹೆಸರಿದ್ದಿತೆಂದು ಊಹಿಸಬಹುದು. "

ನಿಜವಾಗಿಯೂ ಈ ವಿಚಾರವು ಮನನೀಯವಾಗಿದೆ. ಆದರೆ ಈ ಲೇಖನದಲ್ಲಿ 'ಕನ್ನಡ' ಶಬ್ದಕ್ಕೆ ಹೇಳಿದ ನಿರುಕ್ತವು ಮಾತ್ರ ಯಾರಿಗೂ ಸಮ್ಮತವಾಗುವಂತಿಲ್ಲ. ಅದನ್ನು ಬರೆದ ನನ್ನ ಗೆಳೆಯರು ಇಂದು ಅದೇ ಅಭಿಪ್ರಾಯದವರಾಗಿದ್ದಾರೆಂದು ಹೇಳಲಿಕ್ಕಾಗದು. ಆದರೂ ಆ ವಿಚಾರಸರಣಿಯಲ್ಲಿ ನಮ್ಮ ನಾಡಿನ ಇಂದಿನ ಹಿರಿಕವಿಗಳ ಪ್ರತಿಭೆಯ ವಿಲಾಸವು ಅಡಕವಾಗಿರುವುದರಿಂದ ಅದು ಓದುಗರ ಮನಸ್ಸನ್ನು ಸೆಳೆಯದೆ ಇರಲಾರದು. ಅಲ್ಲದೆ 'ಕನ್ನಡ' ದ ಗುಟ್ಟನ್ನು ತಿಳಿದುಕೊಳ್ಳಲು ಪರಿಶ್ರಮಬಟ್ಟು ಮಾಡಿದ ಎಲ್ಲ ವಿಚಾರಗಳೂ ಉಲ್ಲೇಖನೀಯವೆಂಬ ನನ್ನ ಅಭಿಪ್ರಾಯ. ಈ ಲೇಖನದಲ್ಲಿ ಕನ್ನಡದ ನಿರುಕ್ತವನ್ನು ಕುರಿತು ನನ್ನ ಗೆಳೆಯರು ಬರೆಯುವದೇನೆಂದರೆ:

> ' ಕನ್ ' ಎಂದರೆ ' ಕಾಣು ' ಅಥವಾ ' ಒಡಮೂಡು.' ಎಂಬ ಮೂಲಧಾತುವಿನಿಂದ ' ಕನ್ನಡ ' ವು ಹುಟ್ಟಿದೆಯೆಂದು ನಮ್ಮ ಅಭಿಪ್ರಾಯ. ಕನ್+ಅಳ್= ಕನ್ನಳ್, ಕನ್ನಡ್, ಕನ್ನಡ ಎಂಬುದಾಗಿ ಇದರ ರೂಪಸಿದ್ಧಿ. ಕನ್-ಅಳ್ ಎಂದರೆ ಒಡಮೂಡುವುದನ್ನು ಉಳ್ಳುದು ಎಂದರ್ಥ. ಮನೋಭಾವಗಳನ್ನು ಮುಂದಿಗೆ ಒಡಮೂಡಿಸಿ ತೋರಿಸುವುದೇ ಭಾಷೆಯ ಕೆಲಸ. ಈ ಮಾತನ್ನು ಮನಗಂಡವರಾದ ನಮ್ಮ ಮೊದಲಿಗರು ತಮ್ಮ ಭಾಷೆಗೆ ಅರ್ಥವತ್ತಾದ ಹೆಸರನ್ನು ಇಟ್ಟಿರುವರು. ರೂಪವನ್ನು ಒಡಮೂಡಿಸುವುದು ಕನ್ನಡಿ. ಭಾವಗಳನ್ನು ಒಡಮೂಡಿಸುವುದು ಕನ್ನಡ. ನಮ್ಮ ಮೊದಲಿನ ಕಾವ್ಯಗಳಲ್ಲಿ ಸಿಕ್ಕುತ್ತಿರುವ 'ಕನ್ನಡಿಸು' ಎಂಬ ಧಾತುವಿನ

ಅರ್ಥವನ್ನು ಬಗೆದಂದು ನೋಡಿದರೂ ಕನ್ನಡ ವ್ಯುತ್ಪತ್ತಿಯ ಮೇಲೆ ಬೆಳಕು ಬೀಳದಿರದು.........ಭಾಷೆಯೆಂದರೆ ತಮ್ಮ ಭಾವಗಳನ್ನು ಒಡಮೂಡಿಸುವ 'ಕನ್ನಡಿ' ಎಂಬ ಭಾವನೆಯೆ ನಮ್ಮ ಮೊದಲಿಗರದು."

ನಿಜವಾಗಿ ಹೀಗೆ ಅದು ಭಾವನೆಯಾಗುವ ಸಂಭವವು ಉಂಟು. ಆದರೆ ಈ ಭಾವನೆಯು, ನುಡಿಗೆ ಹೆಸರು ಬಂದ ತೀರ ಆರಂಭಕಾಲದಲ್ಲಿಯೆ ಇದ್ದಿತೆಂದು ಬಗೆಯಲಿಕ್ಕಾದೀತೇ ? ಬುದ್ಧಿ ಬಲಿತ ಮೇಲೆ, ಭಾವಗಳು ಚಿಗುರಿದ ಬಳಿಕ ಒಂದೊಂದು ನುಡಿಗೂ ಅಂದದ, ಚೆಂದದ, ಬೆಡಗಿನ, ಬಿನ್ನಾಣದ ಬಗೆಬಗೆಯ ಅರ್ಥಗಳು ತಲೆದೋರಬಹುದು ಆದರೆ ಮೊಟ್ಟಮೊದಲಲ್ಲಿಯೆ ಈ ಬಗೆಯ ಕಲ್ಪನೆಯಿದ್ದಿತೆಂದು ಎಣಿಸಲಿಕ್ಕಾಗುವುದಿಲ್ಲ.

ಇನಿತೊಂದು ಕಾವ್ಯಮಯ ಭಾವವು ಮೊದಲಿನಿಂದಲೆ 'ಕನ್ನಡ' ಎಂಬ ಶಬ್ದದಲ್ಲಿ ಅಡಗಿದೆಯೆಂದು ಗ್ರಹಿಸಿದರೂ ಈ ವ್ಯುತ್ಪತ್ತಿಯನ್ನು ಒಪ್ಪಿಕೊಳ್ಳಲು ಇನ್ನೊಂದು ಮಾತು ಅಡ್ಡಬರುತ್ತದೆ. 'ಕನ್ನಡ' ಎಂಬುದು ನುಡಿಯ ಹೆಸರಾದರೆ, ನುಡಿಯಿಂದ ನಾಡಿಗೆ ಹೆಸರು ಬಂದಿತೆಂಬ ಅಪಸಿದ್ಧಾಂತವು ನಮ್ಮ ತಲೆಯ ಮೇಲೆ ಕುಳ್ಳಿರುವುದು ! ಕನ್+ಅಳ್ =ಕನ್ನಡ ಎಂಬಲ್ಲಿ ಮೊದಲು 'ಳ' ಕಾರವಿದ್ದುದು ಮುಂದೆ ಡಕಾರವಾಯ್ತೆಂದಂತಾಗುತ್ತದೆ. ಆದರೆ ಡಕಾರವು ಳಕಾರವಾದ ಉದಾಹರಣೆಗಳಿವೆಯೆ ಹೊರತು ಳಕಾರವು ತಿರುಗಿ ಡಕಾರವಾದುದು ತೀರ ಕ್ವಚಿತ್ತು. ಆದುದರಿಂದ ಕನ್+ಅಳ್ ಎಂಬ ವಿಗ್ರಹವೇ ತಪ್ಪು.

ಕನ್ನಡದ ಈ ವ್ಯುತ್ಪತ್ತಿಯ ವಿವರಣೆಯು ಬಹಳ ಸರಸವಾಗಿ ಇರುವುದರಿಂದ ಮೇಲಣ ಅಡ್ಡಿಗಲ್ಲನ್ನೂ ಕಡೆಗಣಿಸಿ ಅದನ್ನು ಒಪ್ಪಿಕೊಳ್ಳಬೇಕು. ಎಂದರೆ ಇನ್ನೂ ಒಂದು ತೊಂದರೆ ! ಶಾಸನಾದಿಗಳಲ್ಲಿ ಕನ್ನಡ, ಕನ್ನಾಡುಗಳಂತೆ ಕನ್ನಳ್ ಎಂಬ ರೂಪವು ಒಂದೆಡೆಯಲ್ಲಿಯೂ ಕಣ್ಣಿಗೆ ಬೀಳುವುದಿಲ್ಲ. ಕರುನಾಡು ಎಂದು ತಮಿಳಿನಲ್ಲಾದರೂ ಉಂಟು. ಆದರೆ ಇದಕ್ಕೆ ಯಾವ ಭಾಷೆಯಲ್ಲಿಯೂ ಅಸ್ತಿತ್ವವಿಲ್ಲ. ಆದುದರಿಂದ ಕನ್ನಡ ಎಂಬುದು 'ಕನ್ನಳ್' ಎಂಬ ಪದದಿಂದ ಆಯ್ತೆಂದು ಗ್ರಹಿಸುವುದಕ್ಕಾಗುವುದಿಲ್ಲ.

೬. ಇಂತೀ ಬಗೆಯಾಗಿ ಈ ವರೆಗೆ ಮುಂದೆ ಬಂದ ಯಾವ ವ್ಯುತ್ಪ

ತ್ತಿಯೂ ಸಮರ್ಪಕವಾಗಿಲ್ಲ. ಅಭಿಮಾನಿಯಾದ ಕನ್ನಡಿಗನಿಗೆ ತನ್ನ 'ಕನ್ನಡ' ದ ನೆಲೆಯೆ ತನಗೆ ಗೊತ್ತಿಲ್ಲವೆನಿಸಿದರೆ ಹೇಗೆ ತಾನೆ ಅವನ ಮನಸಿಗೆ ಸಮಾಧಾನವೆನಿಸಬೇಕು ? ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಸಾಹಿತ್ಯಕ್ಷೇತ್ರದಲ್ಲಿ ಇಂದು (೧೯೪೦) ಕೆಚ್ಚ ಕನ್ನಡಿಗರ ಏಕಮೇವಾದ್ವಿತೀಯ ಮುಂದಾಳುಗಳು; ಕನ್ನಡದ ಏಳ್ಗೆಗಾಗಿ ತನು-ಮನ-ಧನಗಳನ್ನು ಮೀಸಲಾಗಿರಿಸಿದವರು; ವಿದ್ವಾಂಸರು; ವಾಗ್ಮಿಗಳು. ಕನ್ನಡ ಪೀಠದ ಇಂದಿನ ಶ್ರೀಗಳು. ಇವರು ಸ್ವಲ್ಪ ದಿನಗಳ ಹಿಂದೆ 'ಕನ್ನಡದ ಬಿಡುಗಡೆ' ಎಂಬ ಒಂದು ಸುಪ್ರಸಿದ್ಧವಾದ ಉಪನ್ಯಾಸ ಮಾಡಿ ಕನ್ನಡದ ಹುಟ್ಟಿನ ಬಗೆಯನ್ನು ವಿವರಿಸಿ ಹೇಳಿದರು. ಶ್ರೀಗಳವರ ಮಾತಿನಲ್ಲಿ ಯಾವಾಗಲೂ ಒಂದು ಬಗೆಯ ತೇಜಸ್ಸು, ಓಜಸ್ಸು ತುಂಬಿ ಹೊರಹೊಮ್ಮುತ್ತಿರುವುದರಿಂದ ಅವರು ಆಡುವ ಪ್ರತಿಯೊಂದು ಶಬ್ದವೂ ಪರಿಣಾಮಕಾರಿಯಾಗಿರುತ್ತದೆ. 'ಕನ್ನಡದ ಬಿಡುಗಡೆ' ಎಂಬ ಉಪನ್ಯಾಸವು ಕರ್ನಾಟಕದ ಸಾಹಿತ್ಯ ಲೋಕದಲ್ಲಿ ವಿಚಾರದ ಒಂದು ದೊಡ್ಡ ಆಂದೋಲನವನ್ನು ಉಂಟುಮಾಡಿತು. ಅನುಕೂಲ, ಪ್ರತಿಕೂಲ ಮಾತಿನ ಮಲ್ಲಗಾಳಗವು ಆರಂಭವಾಯಿತು. ಶ್ರೀಯವರು ಕನ್ನಡ ಶಬ್ದದ ನಿರುಕ್ತವನ್ನು ಕುರಿತು ಅಪ್ಪಣೆ ಕೊಡಿಸಿದರು. ಆದರೆ ಅದು ಕರ್ಣಾಟವೊ ಕರ್ನಾಟವೊ ಎಂಬ ವಾಗ್ಯುದ್ಧದ ಮುಖ್ಯ ವಿಷಯವಾಯ್ತು !

ಶ್ರೀಯವರ 'ಕನ್ನಡದ ಬಿಡುಗಡೆ' ಯ ಉಪನ್ಯಾಸದ ತರುವಾಯ ಆರಂಭವಾದ ದಂತ್ಯ–ಮೂರ್ಧನ್ಯ (ನ-ಣ) ಗಳ ಕಾದಾಟದ ರಭಸದಲ್ಲಿ ಕೆಲರಿಗೆ ಈ ವಾದದ ಮುಖ್ಯ ಪ್ರಶ್ನೆಯೆ ಮರೆತುಹೋದಂತಾಗಿದೆ. ನಕಾರವೊ ಣಕಾರವೊ ಎಂಬುದು ಈ ವಾದದ ಮುಖ್ಯ ವಿಷಯವಲ್ಲ. ಕನ್ನಡ–ಕರ್ಣಾಟ ಶಬ್ದಗಳ ನಿರುಕ್ತವು ನಿಶ್ಚಿತವಾದರೆ ಶುದ್ಧರೂಪವು ಕರ್ಣಾಟವೊ ಕರ್ನಾಟವೊ ಎಂಬ ತೊಡಕು ತನ್ನ ತಾನೆ ಬಿಟ್ಟುಹೋಗುವುದು. ಈ ಶಬ್ದ–ಸಿದ್ಧಿ–ಕ್ರಮದ ಬಗೆಗೇ ಭಿನ್ನಾಭಿಪ್ರಾಯಗಳಿರುವ ವರೆಗೆ ನಕಾರ ಣಕಾರಗಳ ಪಾಠಾಂತರವು ತಪ್ಪಿದ್ದಲ್ಲ.

ಇಂದಿನ ನ-ಣ ಗಳಂತಹ ವಾದವು ಈಗ ತಾನೆ ತಲೆದೋರಿದೆಯೆಂದು ಕೆಲರ ಗ್ರಹಿಕೆಯಾಗಿರಬಹುದು. ಆದರೆ ಇದೇ ಬಗೆಯ ಇನ್ನೊಂದು ವಾದವು ಮುನ್ನೂರು ವರುಷಗಳ ಮೊದಲು ಒಮ್ಮೆ ತಲೆಯೆತ್ತಿದಂತಿದೆ.

ಕನ್ನಡಕ್ಕೆ ಸಂಸ್ಕೃತದವರು ಕರ್ಣಾಟವೆಂದಂತೆ, ಪೋರ್ತುಗೀಸರೂ ಇಂಗ್ಲೀಷರೂ Canara, Carnate ಎಂದು ಮುಂತಾಗಿ ಹೆಸರಿಸಿದರು ಇವರಲ್ಲಿಯೆ ಮುಂದೆ Canara ಸರಿಯೊ, Kanara ಸಾಧುವೊ ಎಂಬ ಎಣಿಕೆಗೆ ಆರಂಭವಾಯಿತು. ಕನ್ನಡ ಭಾಷೆಯ ಹೆಸರನ್ನು ಕ್ರಿ. ಶ ೧೫೧೬ ರಲ್ಲಿ Canari, ೧೫೬೦ ರಲ್ಲಿ Canarim, ೧೫೬೩ ರಲ್ಲಿ Canarij, ೧೬೧೫ ರಲ್ಲಿ Canarin, ೧೬೫೮ ರಲ್ಲಿ Cannary ಎಂದೂ ನಡುನಡುವೆ ಎಷ್ಟೋ ಬಾರಿ Carnatic, Carnate, Karnat ಎಂದು ಮುಂತಾಗಿಯೂ ಬರೆಯುತ್ತಿದ್ದುದು ಕಂಡುಬರುತ್ತಿದೆ. ಇದರಲ್ಲಿ ೧೫೬೩ರಲ್ಲಿ ಮೊಳೆತುಕೊಂಡ Canarij ಎಂಬುದೆ ನಿನ್ನೆಮೊನ್ನೆಯ ವರೆಗೆ Canarese ಇಲ್ಲವೆ Kanarese ಎಂಬ ರೂಪದಲ್ಲಿ ವ್ಯವಹರಿಸುತ್ತಲಿತ್ತು. ಕ್ರಿ. ಶ. ೧೬೧೪ ರಲ್ಲಿ ಬಂದ ಕೌಟೋ ( Couto ) ಎಂಬ ಯುರೋಪೀಯ ಪ್ರವಾಸಿಕನೊಬ್ಬನು ಕನ್ನಡ ಶಬ್ದದ ವಿಚಿತ್ರರೂಪಗಳನ್ನು ನೋಡಿ ಅಸಹ್ಯವಾಗಿ, ಟೀಕಿಸಿದ್ದಾನೆ. ಟೀಕಿಸಿ ಕೊನೆಗೆ ತನಗೆ ಸರಿದೋರಿದ ಒಂದು 'ಶುದ್ಧ' ( ? ) ರೂಪವನ್ನೇ ಉಪಯೋಗಿಸಬೇಕೆಂದು ಅಪ್ಪಣೆ ಕೊಡಿಸಿದ್ದಾನೆ ! ಅವನು ಬರೆಯುವುದೇನಂದರೆ: *

"Its proper name 'Charnathaca' which from corruption to corruption has come to be called Canara."

ಈ ಕೌಟೋ ಮಹಾಶಯನ ಹೇಳಿಕೆಯಂತೆಯೆ ಬರೆವ ರೂಢಿಯು ಹೆಚ್ಚಿ, ಕರ್ಣಾ (ರ್ನಾ) ಟಕವು "ಚರ್ನಾರ್ಥಕ" ವಾಗಿ ಅಥವಾ "ಚರ-ನಾಟಕವಾಗಿ ಪರಿಣಮಿಸಲಿಲ್ಲ; ನಮ್ಮೆಲ್ಲರ ಭಾಗ್ಯ !

ವ್ಯುತ್ಪತ್ತಿಯನ್ನು ನಿಶ್ಚಿತವಾಗಿ ಕಂಡುಹಿಡಿಯದೆ ಒಂದು ಶಬ್ದವನ್ನು ಹೀಗೆಯೇ ಬರೆಯಬೇಕು, ಹೀಗೆ ಬರೆಯಕೂಡದು ಎಂದು ಆಗ್ರಹಮಾಡುವುದು ಅಯೋಗ್ಯವು. ಒಂದು ವೇಳೆ ಹೀಗೆ ಒತ್ತಾಯಪಡಿಸಿದರೆ ಕೌಟೋ ಮಹಾಶಯನಂತೆ ನಗೆಗೀಡಾಗುವ ಪ್ರಸಂಗವು ಬಾರದೆ ಇರದು. ಕಾರಣಗಳನ್ನು ಹೇಳಿ ಮನಗಾಣಿಸಿಕೊಡದೆ ಕರ್ಣಾಟವೆಂದೇ ಬರೆಯಬೇಕೆನ್ನುವುದು

* IA. VIII, pp. 174-176 ಮತ್ತು JBHS. 1929, ಇದರಲ್ಲಿ ಡಾ. ಸಾಲೆತ್ತೂರ ಭಾಸ್ಕರರಾಯರ Carnate.

ಕೇವಲ ಹಠವಾದವಾದೀತು. ಣಕಾರವನ್ನು ಕೇಶಿರಾಜನು ಬರೆದಿರುವನು. ಭಟ್ಟಾಕಲಂಕನು ಬರೆದಿರುವನು. ಆದುದರಿಂದ ನಾವೂ ಬರೆಯಲೇಬೇಕು, ಎನ್ನುವುದು ಬುದ್ಧಿಗೆ ಸಮಾಧಾನವನ್ನೀವ ದಾರಿಯಲ್ಲ. ಇಂದಿನ ಪೀಳಿಗೆಯು ಣಕಾರವೇ ಏಕೆ, ಎಂಬುದನ್ನು ತಿಳಿದುಕೊಳ್ಳಲು ಹಂಬಲಿಸುತ್ತಿದೆ ಇದು ಹೀಗೆಯೆ ಏಕೆ, ಎಂದು ಪ್ರಶ್ನೆ ಮಾಡುವುದು ಆಧುನಿಕ ಯುಗದ ಸ್ವಭಾವವೆ ಆಗಿದೆ. ಅದು ನಕಾರ ಣಕಾರ ವಾದದಲ್ಲಿಯೂ ಗೋಚರವಾಗುತ್ತದೆ. ಆದುದರಿಂದ ಣಕಾರ ಪಕ್ಷದ ಪುರಾಣಮತವಾದಿಗಳು ಒಮ್ಮೆಲೆ ಸಿಡಿದು ನುಡಿವ ಕಾರಣವಿಲ್ಲ. ಕಡುನುಡಿಗಳನ್ನು ಇಲ್ಲವೆ ಕಿಡಿನುಡಿಗಳನ್ನು ಆಡದೆ, ಈ ಶಬ್ದದ ಮೂಲದಲ್ಲಿ ನಕಾರವಿದೆಯೆ ಣಕಾರವಿದೆಯೆ ಎಂಬುದನ್ನು ನಿರ್ಧರಿಸುವುದೇ ಮೇಲಾದ ಹಾದಿ.

ಮಾನ್ಯ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ ಅಭಿಪ್ರಾಯದಂತೆ 'ಕರ್ನಾಟಕ' ಎಂಬುವೇ ಮೂಲಶಬ್ದ. ಅದರಲ್ಲಿ ಕರ್ + ನಾಟ್ + ಅಕಂ ಎಂಬ ಮೂರು ಪದಗಳಿವೆ. ನಾಡು ಎಂಬರ್ಥದ ನಾಟ್ ಶಬ್ದದಲ್ಲಿ ನಕಾರವು ಇರುವುದರಿಂದ ಕರ್ಣಾಟಕ ಎಂದು ಬರೆವ ಕಾರಣವಿಲ್ಲ. ನಕಾರಯುಕ್ತವಾಗಿ ಬರೆವುದೆ ಸಾಧು; ಎಂದು ಮಾನ್ಯ ಶ್ರೀಗಳವರು ಅಪ್ಪಣೆ ಕೊಡಿಸಿದರು. ರಕಾರದ ಮುಂದಿನ ನಕಾರವು ಣಕಾರವಾಗುವುದು ಸಂಸ್ಕೃತದಲ್ಲಿ ರೂಢಿಯಿದ್ದುದು ನಿಜ; ಆದರೆ ನಕಾರವು ಣಕಾರವಾಗದೆ ಇದ್ದ ಉದಾಹರಣೆಗಳೂ ಉಂಟು, ಎಂದು ಶ್ರೀಮಾನ್ ತೀ. ನಂ. ಶ್ರೀಕಂಠಯ್ಯನವರು ಶಿಕ್ಷಾಶಾಸ್ತ್ರದ ವಿವೇಚನೆ ಮಾಡಿ ನಕಾರದ ಪಕ್ಷವನ್ನು ಎತ್ತಿಹಿಡಿದರು.* ಶ್ರೀರಾಜರತ್ನರು ಶಾಸನಾದಿಗಳಿಂದ ಪರಿಶ್ರಮಪೂರ್ವಕವಾಗಿ ಸಂಗ್ರಹಿಸಿದ ಅನೇಕಾನೇಕ ಅವತರಣಿಕೆಗಳನ್ನು ಕೊಟ್ಟು ಣಕಾರದಂತೆ ನಕಾರಯುಕ್ತವಾಗಿ ಬರೆವ ರೂಢಿಯೂ ಇದ್ದಿತೆಂಬುದನ್ನು ಸಿದ್ಧಪಡಿಸಿದ್ದಾರೆ. §

ನ–ಣ ಕಾರಗಳ ಪಾಠವು ಹಾಗಿರಲಿ; ಮಾನ್ಯ ಶ್ರೀಯವರು ಪ್ರತಿಪಾದಿಸಿರುವ ನಿರುಕ್ತವು ಸರಿಯಾಗಿದೆಯೆ? ಎಂಬುದೆ ಮೊದಲ ಪ್ರಶ್ನೆ. 'ಕಾಲ್ದ

---

* ಕಸಾಪ. ೧೯೩೮; ಪುಟ ೧೫೪ - ೧೬೨.

§ ಅದೇ, ಪುಟ ೧೬೩—೧೮೬.

ವೆಲ್ಲರ ವಿಚಾರಗಳ ಪ್ರತಿಧ್ವನಿಯೆ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ ನಿರುಕ್ತ....' ಎಂದು ಅವರ ಎದುರಾಳಿಗಳ ಆಕ್ಷೇಪಣೆ. ಆದರೆ ತನಗೆ ಸತ್ಯವೆನಿಸಿದುದನ್ನು ಎತ್ತಿ ಹೇಳಿದರೂ ಕೊರತೆಯೇನು? ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರಿಗೆ ಕನ್ನಡದ ಹಲವು ಬಗೆಯ ಹೊಣೆಗಾರಿಕೆಯ ಕೆಲಸಗಳನ್ನು ನಿರ್ವಹಿಸುವುದಕ್ಕೆ ವೇಳೆಯೆ ಸಾಲದೆ ಹೋಗುವುದು. ಕೇವಲ ಕನ್ನಡದ ನಿರುಕ್ತವನ್ನೇ ವಿಚಾರಿಸುತ್ತ ಕುಳ್ಳಿರಲು ಅವರಿಗೆ ಬಿಡುವು ಎಲ್ಲಿ? ಧೀಮಂತರೂ ಪ್ರತಿಭಾಶಾಲಿಗಳೂ ಆದ ಮಾನ್ಯ ಶ್ರೀಯವರಿಗೆ ಸರಿಯಾದ ವ್ಯುತ್ಪತ್ತಿಯನ್ನು ಕಂಡುಹಿಡಿಯುವುದು ಆಗದ ಮಾತಲ್ಲ. ಆದರೆ ಅವರ ವಿವಿಧ ಕಾರ್ಯಕಲಾಪಗಳಲ್ಲಿ ಇದಕ್ಕೆ ವೇಳೆ ದೊರೆಯುವುದೆ ಅಸಾಧ್ಯವಾಗಿರಬೇಕು. ಇದ್ದುದರಲ್ಲಿ ಕಾಲ್ಡ್‌ವೆಲ್ಲರ ನಿರುಕ್ತವೆ ಅವರಿಗೆ ಒಪ್ಪಿಗೆಯಾಗಿ ಅದನ್ನೆ ಎತ್ತಿ ಹಿಡಿದಿರಬೇಕು.

ಕಾಲ್ಡ್‌ವೆಲ್ಲರು ಕರ್+ನಾಡು (ಕರ್ನಾಟ) ಎಂಬುದರೊಡನೆ ಇನ್ನೊಂದೆಡೆಗೆ ಕರ್+ನಾಟ್+ಅಕಂ (ಕರ್ನಾಟಕ) ಎಂಬ ವ್ಯುತ್ಪತ್ತಿಯನ್ನು ಹೇಳಿಬಿಟ್ಟಿದ್ದಾರೆ.

> " Karnataka, Kar–nat–agam (ಕರ್+ನಾಟ್+ಅಗಂ) interior of the black country, from Kar (black) nat (ನಾಡು) (country), & agam (interior) —the black cotton soil of the Dokkan, "
>
> (p. 577)

ಮಾನ್ಯ ಶ್ರೀಯವರು ಕಾಲ್ಡ್‌ವೆಲ್ಲಿನ ಕರ್+ನಾಡು ಎಂಬುದನ್ನು ಕಡೆಗಣಿಸಿ, ಕರ್+ನಾಟ+ಅಕಂ ಎಂಬ ಇನ್ನೊಂದು ನಿರುಕ್ತವನ್ನು ಎತ್ತಿಹಿಡಿದ ಕಾರಣವೇನೊ ತಿಳಿಯದು.

ಶ್ರೀಯವರು ಕರ್+ನಾಟ್+ಅಕಂ ಎಂಬುದಕ್ಕೆ ಕರಿಯ+ನಾಡಿನ+ಪ್ರದೇಶ ಎಂದು ಅರ್ಥ ಹೇಳುವರು. ನಾಟ್ ಮತ್ತು ಅಕಂ ಎಂಬುವು ದ್ರಾವಿಡ ಭಾಷೆಗಳಲ್ಲಿ ಸುಮಾರು ಒಂದೇ ಅರ್ಥದ ಪದಗಳೆಂದು ಶ್ರೀಯವರೆ ಒಪ್ಪಿದ್ದಾರೆ. ಒಂದೇ ಕಾಲಕ್ಕೆ ನಾಟ್ ಮತ್ತು ಅಕಂ ಎನ್ನುವುದರಿಂದ ದ್ವಿರುಕ್ತಿದೋಷಕ್ಕೆ ಒಳಗಾಗಬೇಕಾಗುವುದು. 'ಕರ್ನಾಟಕ' ಎಂಬುದು

ಮೂಲ ಶಬ್ದವೆಂದು ಸ್ವೀಕರಿಸುವುದರಿಂದ ಪುನರುಕ್ತಿ ದೋಷದ ತಪ್ಪಿನ ಕೈಯಲ್ಲಿ ಸಿಕ್ಕಿ ಬೀಳಬೇಕಾಗುವುದು. 'ಕರ್ನಾಟ' ಎಂಬುದು ಮೂಲಶಬ್ದವೆಂದರೆ ಈ ಕೊರತೆಯು ದೂರಾಗುವುದು.

ಎಲ್ಲ ಭಾಷೆಗಳಲ್ಲಿ 'ಹಿಂದುಸ್ತಾನ ದೇಶ' 'ಕೂಡಲ ಸಂಗಮ' 'ಕುಡು ವೊಕ್ಕಲಿಗ' ಎಂಬೀ ಬಗೆಯ ಒಂದೇ ಅರ್ಥದ ಎರಡು ಶಬ್ದಗಳಿಂದಾದ ಮಾತುಗಳು ಎಷ್ಟೋ ಇರುವುದುಂಟು. ಆದರೆ ಇವು ಮೂಲ ಶಬ್ದಗಳಾಗಿರಲಾರವು. ಶಬ್ದಗಳು, ಆರಂಭದಲ್ಲಿಯೇ ಒಂದೇ ಅರ್ಥದ ಎರಡು ನುಡಿಗಳು ಕೂಡಿ ಆಗುತ್ತಿರುವುದಿಲ್ಲ. ಆರಂಭಕ್ಕೆ ಒಂದು ಅರ್ಥದ ಒಂದೇ ಪದ. ಮುಂದೆ ಅದೇ ಅರ್ಥದ ಇನ್ನೊಂದು ಪದವು ಈ ಶಬ್ದದ ಹತ್ತಿರದಲ್ಲಿ (ಸ್ವಭಾಷೆಯ ಶಬ್ದವಾಗಲಿ, ಪರಭಾಷೆಯ ಶಬ್ದವಾಗಲಿ) ಹೆಚ್ಚಾಗಿ ಬಳಕೆಯಲ್ಲಿ ಬರಲಾರಂಭಿಸಿತೆಂದರೆ, ಮೊದಲಿನ ಪದದ ಅರ್ಥದ ಸ್ಪಷ್ಟೀಕರಣಕ್ಕಾಗಿ ಅದೇ ಅರ್ಥದ ಬೇರೊಂದು ಶಬ್ದವು ಅದರೊಡನೆ ಸೇರಿಕೊಳ್ಳುವುದು ವಾಡಿಕೆ. ಸಹ್ಯಾದ್ರಿಪರ್ವತ ಎಂಬಲ್ಲಿ ಅದ್ರಿ ಶಬ್ದಕ್ಕಿರುವ ಅರ್ಥದ ಮರವು ಉಂಟಾಗದೆ ಪರ್ವತ ಎಂಬುದನ್ನು ಅದರ ಎದುರಿಗೆ ಇಡುವುದಕ್ಕೆ ಮನಸ್ಸು ಬಾರದು. ಕನ್ನಡ (ಕನ್ನಾಡು) ಇದರೊಳಗಿನ 'ನಾಡು' ಎಂಬ ಉತ್ತರ ಪದದ ನೆನಪಿರುವ ವರೆಗೂ ಅದಕ್ಕೆ ದೇಶವೆಂಬ ಅರ್ಥವೂ ರೂಢಿಯಲ್ಲಿತ್ತು. ಆದರೆ ಅದು ಮರೆತುಹೋಗುತ್ತಲೆ ಕನ್ನಡನಾಡು ಎಂಬ ದ್ವಿರುಕ್ತಿ ದೋಷವನ್ನು ಎಗ್ಗಿಲ್ಲದೆ ಮಾಡಲಾರಂಭಿಸಿದೆವು. ಒಟ್ಟಿನಲ್ಲಿ ಹೇಳಬೇಕಾದುದೇನೆಂದರೆ: ಶಬ್ದಗಳು ಆರಂಭದಲ್ಲಿಯೇ ಒಂದೇ ಅರ್ಥದ ಎರಡು ಪದಗಳಿಂದ ಕೂಡಿ ಆಗಿರುವ ಸಂಭವವಿಲ್ಲ. ಆದಕಾರಣ ನಾಟ್+ಅಕಂ ಎಂಬುದು ಮುಂಚಿನಿಂದಲೇ ಇರುವುದು ಸಾಧ್ಯವಿಲ್ಲ. ಆದುದರಿಂದ ಕರ್ನಾಟಕ ಎಂಬುದು ಮೂಲಶಬ್ದವಲ್ಲ; ಅದು ಕರ್ನಾಟವೆಂದು ಬಗೆಯುವುದೇ ಲೇಸು.

ಶ್ರೀಮಾನ್ ಗೋವಿಂದ ಪೈಗಳು ಇನ್ನೊಂದು ದೃಷ್ಟಿಯಿಂದ ಇದೇ ನಿರ್ಣಯಕ್ಕೆ ಬಂದಿದ್ದು 'ಅಂತಿಮ ಕಕಾರವು ಕನ್ನಡ ಇಲ್ಲವೆ ದ್ರವಿಡ ಪ್ರತ್ಯಯವೆ ಅಲ್ಲ' ಎಂದು ತೋರಿಸಿದ್ದಾರೆ.* ಶ್ರೀ. ರಾಜರತ್ನರು 'ಕರ್+ನಾಟ್+

* ಶ್ರ. ೧೯೩೭, ಪುಟ ೬೧.

ಅಕಂ ' ಎಂಬುದನ್ನು ಒಪ್ಪಲು ಆಧಾರ ಸಾಲದು. ಕರ್ನಾಟಕವೆ ಸರಿ ಎಂದಿರುವರು. †

ಇಂತು ಶ್ರೀಯವರ ವ್ಯುತ್ಪತ್ತಿಯೂ ಈ ಪ್ರಕರಣದ ಆರಂಭದಲ್ಲಿ ವಿವೇಚಿಸಿದ 'ಕರ್+ನಾಡು' ಎಂಬ ವರ್ಗದಲ್ಲಿಯೆ ಬಂದಿತು! ಸಂಸ್ಕೃತಸಾಹಿತ್ಯದಲ್ಲಿ ಕರ್ಣಾಟ ಮತ್ತು ಕರ್ಣಾಟಕ ಎಂಬ ಎರಡೂಬಗೆಯ ಪ್ರಯೋಗಗಳಿವೆ. 'ಕರ್ಣಾಟ'ವೆಂಬ ಪದವು ಸಂಸ್ಕೃತಭಾಷೆಯ ಸೊತ್ತು ಆದಬಳಿಕ ಅದರ ಮುಂದೆ ಸ್ವಾರ್ಥಪ್ರತ್ಯಯವಾದ ಕಕಾರವು ಸೇರಿಕೊಂಡಿತು. ಕರ್ಣಾಟವೆಂಬುದೆ ಮೂಲಶಬ್ದವು. ಬಾಲ—ಬಾಲಕ, ಪುತ್ರ—ಪುತ್ರಕ ಎಂದು ಮುಂತಾದ ಕಡೆಗಳಲ್ಲಿ ಗೋಚರವಾಗುವ ಕ ಪ್ರತ್ಯಯವೆ ಕರ್ಣಾಟದ ಮುಂದೆಯೂ ಸೇರಿಕೊಂಡಿವೆಯೆಂದು ಊಹಿಸಬಹುದಾಗಿದೆ.

ಇನ್ನು, ಕರ್ನಾಟ(ಕ)ವು ಮೂಲಪದವೊ? ಕರ್ನಾಡು ಮೂಲಪದವೊ ಎಂಬುದನ್ನು ವಿಚಾರಿಸಿದರೆ ಎರಡನೆಯದೆ ಯುಕ್ತವೆಂದು ಶ್ರೀಯವರ ದೃಷ್ಟಿಯಿಂದಲೆ ಹೇಳಬಹುದಾಗಿದೆ. ಶ್ರೀ ರಾಜರತ್ನಂರು ' ಕರ್ನಾಡು ' ಎಂಬುದನ್ನೇ ಅನುಮೋದಿಸಿದ್ದಾರೆ.* ಕರ್+ನಾಟ ಇದರಲ್ಲಿ ಕೊನೆಯ ನಾಟ ಶಬ್ದವು ' ನಾಡು' ಎಂಬುದರ ಒಂದು ರೂಪವೆಂದು ಹೇಳಬೇಕಾಗುತ್ತದೆ. ' ನಾಡು ' ಶಬ್ದವು 'ನಾಟ್' ಎಂಬುದಾಗಿ ಕನ್ನಡದಲ್ಲಿ ಎಂದೂ ವ್ಯವಹಾರ್ಯರೂಪವಾಗಿ ಇದ್ದಿಲ್ಲ. ಬೇಡು, ಓಡು ಮೊದಲಾದುವುಗಳ ಕೊನೆಯ ಡಕಾರವ್ವ ಟಕಾರವಾಗಿರುವದು. ಬೇಡು, ಶಬ್ದದಿಂದ ಬೇಟ ಹೊರತು ಬೇಟದಿಂದ ಬೇಡು ಅಲ್ಲ ಆದರಂತೆ ನಡು (ನಾಡು) ಶಬ್ದದ ಒಂದು ರೂಪವು ನಾಟವೆಂದಾಗಿರಲಿಕ್ಕೆ ಸಾಕು. ಆದಕಾರಣ ಕರ್ನಾಟವೆಂಬ ಪದಕ್ಕೆ ಕರ್ನಾಡು ಎಂಬುದೇ ಮೂಲವೆಂದು ಒಪ್ಪಿಕೊಳ್ಳಲೇಬೇಕಾಗುತ್ತದೆ.

ಕಾಲ್ಡವೆಲ್ಲ ಸಾಹೇಬರ ಕರ್+ನಾಡು ಎಂಬ ವ್ಯುತ್ಪತ್ತಿಯು ಹೇಗೆ ಅಸಮರ್ಪಕವಾಗಿದೆಯೆಂಬುದನ್ನು ಹಿಂದೆಯೆ ವಿವರಿಸಿದೆ. ಆ ಮಾತುಗಳನ್ನೆ ಇಲ್ಲಿ ಮತ್ತೆ ವಿಸ್ತಾರದಿಂದ ಹೇಳುವುದು ಅನಾವಶ್ಯ. ಇದರ ಮೇಲಣ ಆಕ್ಷೇಪಣೆಗಳ ಸಾರಾಂಶವೇನೆಂದರೆ:

---

† ಕಸಾಪ. ೧೯೩೩, ಪುಟ ೧೬೭ * ಕಸಾಪ. ೧೯೩೪, ಪುಟ ೧೬೭.

೧. "ಕರಿದು+ನಾಡು ಎಂದು ಸಮಾಸ ಮಾಡಿದರೆ ಕರಿಯ ಭೂಮಿಯಲ್ಲದಿರುವ ನಮ್ಮ ಮೈಸೂರು ಪ್ರಾಂತ್ಯವೆಲ್ಲವೂ ಕರ್ನಾಟವಲ್ಲದೆ ಹೋಗಬೇಕಾಗುವುದು" ಎಂದು ಶ್ರೀ. ಬಿ. ಎಸ್. ವೆಂಕಟರಾಮಯ್ಯ ಎಂ. ಎ. ಇವರಿಗೆ ಹೆದರಿಕೆ * ಮೈಸೂರೇ ಏಕೆ ಕನ್ನಡ ಜಿಲ್ಲೆ ಸಂಪೂರ್ಣ, ಧಾರವಾಡ, ಬೆಳಗಾವಿ ಜಿಲ್ಲೆಗಳ ಅರ್ಧ ಭಾಗವೂ ಕರಿನಾಡಲ್ಲ.

೨. ಕರಿನಾಡು ತಮಿಳಿನಲ್ಲಾದರೂ ಸಿಕ್ಕುವುದು. ಕರ್ನಾಡು ಎಂಬುದಕ್ಕೆ ಎಲ್ಲಿಯೂ ಆಧಾರವಿಲ್ಲ.

ಎರಡರಿಂದ ಏಳರ ವರೆಗಿನ ಆಧುನಿಕರ ವ್ಯುತ್ಪತ್ತಿಗಳಲ್ಲಿ ಇನ್ನೂ ಒಂದು ದೊಡ್ಡ ಕೊರತೆಯುಂಟು. ಇವುಗಳಲ್ಲಿ ಯಾವುದಕ್ಕೂ ಕರ್ಣಾಟದ ಪ್ರಾಚೀನ ಸಾಂಸ್ಕೃತಿಕ ಪರಂಪರೆ, ಇತಿಹಾಸಗಳ ಬೆಂಬಲವಿಲ್ಲ. ಸ್ಮೃತಿ ಮತ್ತು ಪುರಾಣಗಳಲ್ಲಿ ಬಂದಿರುವ ಉಲ್ಲೇಖಗಳನ್ನು ಕೇವಲ ದುರ್ಲಕ್ಷಿಸಿದರೆ ನಡೆಯದು. ಅವನ್ನು ಎಣಿಕೆಯಲ್ಲಿ ಹಿಡಿದು ಬೆಲೆ ಕಟ್ಟಲೇಬೇಕು. ಅರ್ಥವಿಹೀನವಾಗಿದ್ದರೆ ಅವನ್ನು ಹಾಗೆ ಸಿದ್ಧಪಡಿಸಬೇಕು. ಆದರೆ ೨ರಿಂದ ೭ರ ವರೆಗಿನ ವ್ಯುತ್ಪತ್ತಿಗಳಲ್ಲಿ ಪ್ರಾಚೀನ ಪರಂಪರೆಯ ವಿಚಾರವನ್ನೇ ಬಿಟ್ಟುಬಿಟ್ಟಿರುವದರಿಂದ ಅವುಗಳ ಬೆಲೆ ಕಡಿಮೆಯಾಗಿದೆ. ಆದರೂ ಆಧುನಿಕರ ವಿಚಾರ ವಿಮರ್ಶೆಗಳಿಂದ ಒಂದು ಲಾಭವು ಆಗಿದೆ. ಕಾಲ್ಡವೆಲ್ಲ ಪ್ರಭೃತಿಗಳ ಕನ್ನಡದ ನಿರುಕ್ತದಲ್ಲಿ ಏನೂ ಹುರುಳಿಲ್ಲವೆಂದು ಸಿದ್ಧವಾದರೂ ಅವರು ಹೊಸ ನಿರುಕ್ತವನ್ನು ಕಂಡುಹಿಡಿಯುವುದಕ್ಕೆ ಯಾವ ಮುಖ್ಯ ವಿಚಾರಸರಣಿಯಿಂದ ಪ್ರವೃತ್ತರಾದರೊ ಅದು ಅಮೋಘವಾಗಿದೆ. ಆರ್ಯಾವರ್ತದ ಹೊರಗೆ ದಕ್ಷಿಣಾಪಥದಲ್ಲಿರುವ ಮತ್ತು ದ್ರಾವಿಡ ವರ್ಗಕ್ಕೆ ಸೇರಿದ ಈ ನಾಡಿನ ಹೆಸರು ಸಂಸ್ಕೃತ ಭಾಷೆಗೆ ಸಂಬಂಧಪಟ್ಟುದು ಇರಲಾರದು ಎಂಬ ಒಂದು ದೃಢವಿಶ್ವಾಸವು ಈ ಎಲ್ಲ ಆಧುನಿಕರ ವ್ಯುತ್ಪತ್ತಿಗಳಲ್ಲಿಯೂ ಗೋಚರವಾಗುತ್ತದೆ. ಮತ್ತು ಅವರ ಈ ವಿಚಾರಕ್ಕೆ ಹೊಸಹೊಸ ಆಧಾರಗಳು ದೊರೆತು ಪುಷ್ಟಿ ದೊರೆಯುತ್ತಲಿದೆ.

---

* ಕರ್ಣಾ—ಕರ್ನಾ. ಪುಟ ೧೫

ಜಗತ್ತಿನಲ್ಲಿ ಬೇರೆಬೇರೆ ನಾಡುಗಳಿಗೆ ಹೆಸರುಗಳು ಬಂದಿರುವ ಬಗೆಯನ್ನು ಸ್ವಲ್ಪ ಆಳವಾಗಿ ನೋಡಿದ್ದರೆ, ೨ರಿಂದ ೭ರ ವರೆಗಿನ ವ್ಯುತ್ಪತ್ತಿಗಳಲ್ಲಿ ಆವುದೊಂದೂ ತಲೆಯೆತ್ತುತ್ತಿರಲಿಲ್ಲ. ಜಗತ್ತಿನಲ್ಲಿ ದೇಶಕ್ಕೆ ಅಥವಾ ಭಾಷೆಗೆ ಹೆಸರುಗಳು ಬಂದಿರುವುದರಲ್ಲಿ ಕಾಲಾನುಕ್ರಮದಲ್ಲಿ ಸ್ಥೂಲವಾಗಿ ಎರಡು ವಿಭಾಗಗಳನ್ನು ಮಾಡಬಹುದು:

(೧) ಬಂದ ಹೆಸರುಗಳು; (೨) ಇಟ್ಟ ಹೆಸರುಗಳು. ಮೊದಲನೆಯ ವರ್ಗದುವು ಮಾನವನು ಸಂಪೂರ್ಣವಾಗಿ ಸ್ವಯಂಪ್ರಜ್ಞ (Self conscious) ನಾಗುವ ಮೊದಲು ಬಂದುವು; ಎರಡನೆಯ ವರ್ಗದುವು ಮಾನವನು ಇದರ ಮುಂದಿನ ತರಗತಿಯಲ್ಲಿದ್ದಾಗ—ತನ್ನ ನಾಡು, ನುಡಿಗಳ ಬಗ್ಗೆ ಚೆನ್ನಾಗಿ ಅರಿವು ಉಳ್ಳವನಾದಾಗ ಇಟ್ಟುವು. ತಾರತಮ್ಯದಿಂದ ಹೇಳಬೇಕಾದರೆ ಇವುಗಳಲ್ಲಿ ಮೊದಲನೆಯುವು ಪ್ರಾಚೀನ; ಎರಡನೆಯುವು ಅರ್ವಾಚೀನ.

ಜಗತ್ತಿನಲ್ಲಿ ಪ್ರಾಚೀನವೆನಿಸುವ ದೇಶಗಳಿಗೆ ಇರುವ ಹೆಸರುಗಳೆಲ್ಲ ಅಲ್ಲಿಯ ಮೂಲ ಜನಾಂಗಗಳಿಂದಲೇ ಬಂದುವುಗಳಾಗಿವೆ. ಕರ್ಣಾಟವು (ಕನ್ನಡವು) ಇದೂ ಒಂದು ಪ್ರಾಚೀನ ದೇಶನಾಗಿದ್ದರೆ—ಪ್ರಾಚೀನವಾಗಿದೆಯೆಂದು ಮಹಾಭಾರತದ ಉಲ್ಲೇಖದಿಂದಲೂ, ಬೇರೆ ಪ್ರಮಾಣಗಳಿಂದಲೂ ಸಿದ್ಧಸಂಗತಿ—ಈ ದೇಶದ ಹೆಸರಾದರೂ ಇಲ್ಲಿಯ ಮೂಲ ಜನಾಂಗದಿಂದಲೆ ಬಂದಿರಬೇಕೆಂಬುದು ನಿಶ್ಚಿತ. ಗುಜರಾತ ಮೊದಲಾದ ಕೆಲವು ಅರ್ವಾಚೀನ ದೇಶಗಳಿಗೆ ಜನಾಂಗದಿಂದ ಹೆಸರು ಬಂದುದುಂಟು. ಭೂಮಿಯ ಗುಣ ಮೊದಲಾದವುಗಳಿಂದ ಕಲ್ಪಿಸಿ ಇಟ್ಟ ವಿಶಿಷ್ಟಾರ್ಥಕ (ಗೌರವಾರ್ಥವೂ ಇದರಲ್ಲಿಯೆ ಸೇರುವುದು) ಹೆಸರುಗಳು ಎರಡನೆಯ ತರಗತಿಯವು. ಈ ಬಗೆಯ ಹೆಸರಿನ ಪ್ರಾಚೀನ ದೇಶಗಳು ಸಿಕ್ಕುವುದಿಲ್ಲ. ಕೇರಳ ಎಂಬುದು ಪ್ರಾಚೀನವಿರುವಂತೆ ಮಲೆಯಾಳವಲ್ಲ.

ಆರಂಭಕಾಲದಲ್ಲಿ, ಆಹಾರಕ್ಕಾಗಿ ತಂಡಗಟ್ಟಿಕೊಂಡು ಅಲೆಯುತ್ತಿದ್ದ ಜನಾಂಗಗಳು ಕುಟುಂಬಿಗಳಾಗಿ—ಒಕ್ಕಲತನವನ್ನು ಕೈಯ್ಕೊಂಡು ಒಂದೊಂದೆಡೆಯಲ್ಲಿ ನೆಲಸಿದ ಬಳಿಕ ನಾಡುಗಳು ತಲೆದೋರಿದುವು ಎಂದು ಇತಿಹಾಸವು ಹೇಳುತ್ತದೆ. ಆದುದರಿಂದ ನಾಡುಗಳಿಗೆ ಮೊಟ್ಟಮೊದಲು ಜನಾಂಗಗಳಿಂದಲೇ ಹೆಸರು ಬಂದುದು. ಈ ದೃಷ್ಟಿಯಿಂದ ವಿಚಾರಿಸಿದರೆ ಕನ್ನಾಡು ಅಥವಾ

ಕನ್ನಡ ಇದರೊಳಗಿನ ಉತ್ತರಪದವಾದ ನಾಡು (ನಡ) ಎಂಬುದನ್ನು ಬೇರ್ಪಡಿಸಿದ ಬಳಿಕ ಉಳಿವ 'ಕನ್' ಎಂಬ ಪದವು ಜನಾಂಗವಾಚಕ ಶಬ್ದವೆಂದು ನಿರ್ಧರಿಸಬೇಕಾಗುವುದು. ಪ್ರಾಕೃತಭಾಷೆಯಲ್ಲಿ ಕಾಣಿಸಿಕೊಳ್ಳುವ 'ಕಣ್ಣಾಡ' ಎಂಬುದರೊಳಗಣ ಪೂರ್ವ ಪದವು 'ಕಣ್' ಎಂದಾಗುವುದು. ಹಿಂದಿನ ಅಧ್ಯಾಯದ ಕೊನೆಯಲ್ಲಿ ನಿಶ್ಚಿತವಾಗಿ ನಮಗೆ ಕಂಡುಬಂದಿರುವ ನಮ್ಮ ನಾಡಿನ ಕರಣ ಅಥವಾ ಕರ್ಣ ಎಂಬ ಜನಾಂಗವೂ ಪ್ರಸ್ತುತ 'ಕನ್ನಡ' 'ಕಣ್ಣಾಡ' ಶಬ್ದಗಳಿಂದ ಸೂಚಿತವಾಗುವ ಕನ್ ಅಥವಾ ಕಣ್ ಎಂಬ ಜನಾಂಗವೂ ಅಭಿನ್ನವಾದವುಗಳೆಂದು ಸಿದ್ಧಪಡಿಸುವ ಆವಶ್ಯಕವಿಲ್ಲ. ಇದು ಕರ್ಣಾಟದ ಮೂಲ ಜನಾಂಗವೆಂಬ ಮಾತು ಸ್ಪಷ್ಟವಿದೆ.

ಆದುದರಿಂದ ಕನ್ನಡ ಎಂದರೆ ಕನ್ನರ (ಕನ್ ಎಂಬ ಜನಾಂಗದ) ನಾಡು ಎಂದು ಅರ್ಥ ಮಾಡುವುದು ಯೋಗ್ಯವೆಂದು ತೋರುತ್ತದೆ. ಈ ಅರ್ಥಕ್ಕೆ ಕರ್ಣಾಟದ ಪ್ರಾಚೀನ ಪರಂಪರೆಯು ವಿರೋಧವಿಲ್ಲ. ಬೆಂಬಲವೇ ಇದೆ. 'ಕರ್ಣಾಟ' ಎಂದರೂ ಜನಾಂಗವೆಂದೇ ಅರ್ಥವುಂಟೆಂದು ಸ್ಮೃತಿ ಮತ್ತು ಪುರಾಣಗಳ ಆಧಾರಗಳಿಂದ ಹಿಂದಿನ ಅಧ್ಯಾಯದ ಕೊನೆಯಲ್ಲಿ ವಿಶದಪಡಿಸಿದ್ದಾಗಿದೆ. ಕರ್ಣಾಟ ಮತ್ತು ಕನ್ನಡ ಎಂಬ ಎರಡೂ ಪದಗಳ ಅರ್ಥವು ಒಂದೇ ಬಗೆಯಾಗಿದ್ದು ಪರಸ್ಪರ ಪೋಷಕವಾಗಿರುವುದರಿಂದ ಈ ಶಬ್ದಗಳಿಗೆ ಜನಾಂಗವಾಚಕವಾದ ವ್ಯುತ್ಪತ್ತಿಯೇ ಸಮರ್ಪಕವಾದುದೆಂದು ಧೈರ್ಯವಾಗಿ ಹೇಳಬಹುದಾಗಿದೆ.



## ೫. ಕಣ್ಣರೂ ನಾಟರೂ

ಮನುಸ್ಮೃತಿಯಲ್ಲಿ 'ನಟಶ್ಚ ಕರಣಶ್ಚೈವ' ಎಂದು ಹೇಳಿದೆ. ಆದರೆ ಯಮ, ಪಿತಾಮಹಾದಿಗಳ ಗ್ರಂಥಗಳಲ್ಲಿ "ನಟ" ಎಂಬ ಒಂದೇ ಹೆಸರು ಬಂದಿದೆ. ಮತ್ಸ್ಯಪುರಾಣದಲ್ಲಿ 'ಕರ್ಣ' ಎಂಬ ಒಂದೇ ಜನಾಂಗದ ಉಲ್ಲೇಖ ಉಂಟು. ಆದುದರಿಂದ ಮನುವು ಹೇಳಿದ ನಟ ಮತ್ತು ಕರಣರು ಒಂದೇ ಜನಾಂಗವೆಂದು ತೋರುತ್ತದೆ. ಕುಲ್ಲೂಕಭಟ್ಟನ ಟೀಕೆಯೊಳಗಿನ ಒಲವನ್ನು ನೋಡಿದರೂ ಇದೇ ಮಾತು ಬಲಪಡುತ್ತದೆ. "ಝುಲ್ಲಮಲ್ಲ....ನಟಕರಣ.... ದ್ರವಿಡಾಖ್ಯಾ....ಏತಾನಿ ಅಪಿ ಏಕಸ್ಯ ಏವ ನಾಮಾನಿ" ಈ ಮೇರೆಗೆ ನಟ ಮತ್ತು ಕರಣರು ಒಂದೇ. ಆದರಿಂದಲೇ ಕೆಲರು ಕರ್ಣ ಅಥವಾ ಕಣ್ (ಕನ್) ಎಂದೂ ಕೆಲರು ಬರಿ ನಟ (ನಾಟ) ರೆಂದೂ ಹೇಳಿ ಈ ಜನಾಂಗದ ಉಲ್ಲೇಖ ಒಂದೇ ಪಂಗಡದ ಜನಾಂಗದವರೆಂಬುದು ಚೆನ್ನಾಗಿ ಸಿದ್ಧವಾಗುತ್ತಿದೆ. ಆಧುನಿಕ ಸಂಶೋಧಕರು ಹೇಳುವ ದ್ರಾವಿಡ ವರ್ಗದ ಜನಾಂಗಗಳು ಇವು. ಕುಲ್ಲೂಕನು ಪಾಶ್ಚಿಮಾತ್ಯರ ಅನುಕರಣ ಮಾಡಿರುವನೆಂದು ಆರೋಪ ಮಾಡಲು ಬರುವಂತಿಲ್ಲ. ಆದರೂ ಆತನು ಆಧುನಿಕರಂತೆಯೆ ವರ್ಗೀಕರಣ ಮಾಡಿದ್ದಾನೆ! ಕುಲ್ಲೂಕಭಟ್ಟನು ಕ್ರಿ. ಶ. ೧೨–೧೩ನೆಯ ಶತಮಾನದವನು.* ಕರಣ (ನಟ) ರು ದ್ರಾವಿಡ ವರ್ಗದವರೆಂದು ಇವನು ವಿಂಗಡಿಸಿದ್ದುದು ವಿಚಾರಣೀಯವಾಗಿದೆ.

ಕರಣರು ಮತ್ತು ನಟರು ಒಂದೇ ಅರ್ಥದ ಎರಡು ಶಬ್ದಗಳು. ಇವೆರಡೂ ಭಿನ್ನ ಜನಾಂಗಗಳಲ್ಲ. ಒಂದೇ ನಾಡಿನವು. ಒಂದೇ ಜನಾಂಗ. ಇವು ಎರಡು ಬೇರೆ ಬೇರೆ ಜನಾಂಗಗಳೇ ಆಗಿದ್ದರೆ ಮತ್ಸ್ಯಪುರಾಣ ಅಥವಾ ಬೇರೆ ಸ್ಮೃತಿಗಳಲ್ಲಿ ಕರ್ಣ ಅಥವಾ ನಟ ಎಂಬ ಒಂದೇ ಹೆಸರನ್ನೇ ಉಲ್ಲೇಖಿಸಿ ಸುಮ್ಮನಿರುವುದು ಶಕ್ಯವಿಲ್ಲ. ಆದುದರಿಂದ ಶ್ರೀ. ರಾಜವಾಡೆಯವರು ಕರಣ ಮತ್ತು ನಟ ಎಂಬ ಎರಡು ಜನಾಂಗಗಳ ಸೇರುವೆಯಿಂದ ಕರ್ಣಾಟವಾಯಿತೆಂದು ಹೇಳಿದ್ದುದರಲ್ಲಿ ಸ್ವಲ್ಪ ಕೊರತೆಯಿದೆ. ಈ ನಾಡಿಗೆ ಕರ್ಣಾಟ

* HDS.

ವೆಂದು ಹೆಸರು ಬಂದುದು ಒಂದೇ ಜನಾಂಗದಿಂದ. ಆ ಜನಾಂಗವೆ ಕರಣ (ಕಣ್) ಅಥವಾ ನಟ (ನಾಟ).

ನಟ ಅಥವಾ ನಾಟ ಎಂದರೇನು? ಇದು ಸಂಸ್ಕೃತಶಬ್ದವೆಂದು ಭಾವಿಸಿ ಅರ್ಥಮಾಡಹೋದರೆ ಅನರ್ಥವಾಗುವುದು. ಮನುಸ್ಮೃತಿ ಮೊದಲಾದ ಕಡೆಗಳಲ್ಲಿ ಬಂದಿದ್ದರೂ ಇದು ಸಂಸ್ಕೃತ ಶಬ್ದವೇ ಅಲ್ಲ, ಎಂಬುದನ್ನು ಒನೆಯ ಅಧ್ಯಾಯದ ಕೊನೆಗೆ ತೋರಿಸಿದ್ದಾಗಿದೆ ನಾಟ್ಟರ್—People of a country; † ನಾಟ್ಟರು ಎಂದು ತಮಿಳ ಉಚ್ಚಾರ. ನಾಟರು ಇಲ್ಲವೆ ನಾಡವರು ಎಂದು ಕನ್ನಡದಲ್ಲಿ ಹೇಳುವ ರೂಢಿ. ಇವೆಲ್ಲ ಒಂದೇ ರೂಪ. ತಮಗೆ ನಾಟರು ಎಂದು ಹೇಳಿಕೊಳ್ಳುವ ಜನಗಳ ಸಂಖ್ಯೆ ದಿನದಿನಕ್ಕೂ ಕಡಿಮೆಯಾಗುತ್ತಲಿದ್ದು ಈ ಶಬ್ದವು ಸಂದಿಗ್ಧಾರ್ಥವುಳ್ಳದ್ದಾಗುತ್ತಿದ್ದುದನ್ನು 'ಸೆನಸಸ್ ಸುಪರಿಂಟೆಂಡೆಂಟ್' ರು ಬರೆಯುತ್ತಾರೆ.*

> Nattan a vague term meaning people of the country, reported by some to be a main caste and by some others a subcaste of Vellalas. Nearly all those who returned the name came from Salem and were cultivators.

ಶಾಲ್ಯಂ ಜಿಲ್ಲೆಯ ಕನ್ನಡ ಒಕ್ಕಲಿಗರಿಗೆ ನಾಟ್ಟರೆಂಬ ವಾಡಿಕೆಯಿದೆ. ಆದುದರಿಂದ ನಾಟರೆಂಬವರು ತಮಿಳರಿರುವಂತೆ ಕನ್ನಡರೂ ಉಂಟೆಂಬಲ್ಲಿ ಸಂದೇಹವಿಲ್ಲ. ಕನ್ನಡ ನಾಟರೇ ನಾಡವರು. ನಾಡವರು ಎಂದರೂ ಈ ನಾಡಿನ ಮೂಲನಿವಾಸಿ; ಒಕ್ಕಲುಮಕ್ಕಳೆಂಬ ಅರ್ಥ. ‡ ಕರ್ಣಾಟದ ನಾಟರು ( ಮನುಸ್ಮೃತಿಯ ನಟರು ) ಇಲ್ಲಿಯ ಮೂಲನಿವಾಸಿಗಳು; ನಾಡವರು; ಎಂದರೆ ನಾಡಿಗೆ ಯಾರಿಂದ ಹೆಸರು ಬಂದಿತೊ ಆ ಕನ್ ಅಥವಾ ಕಣ್ ಜನರು. ಕರ್ಣ ಮತ್ತು ನಾಟ ಎಂಬಿವು ಒಂದೇ ಅರ್ಥದ ಎರಡು ಶಬ್ದಗಳು. 'ಕರ್ಣಾಟ' ಎಂಬುದು ಮೂಲ ಶಬ್ದವೆಂದು ಗ್ರಹಿಸಿದರೆ ಈ ಶಬ್ದಸಿದ್ಧಿಯಲ್ಲಿ ದ್ವಿರುಕ್ತಿದೋಷವನ್ನು ಸ್ವೀಕರಿಸಬೇಕಾಗುತ್ತದೆ. ಕರ್ಣಾಟ

† Tamil Lexicon.

* CTS. V. p. 249.

‡ Ibid. p. 134; & CTM. IV. p. 401

ಎಂಬ ಶಬ್ದದಲ್ಲಿ ಕರ್ಣ ಮತ್ತು ನಾಟ ಎಂಬ ಒಂದೇ ಅರ್ಥದ ಎರಡು ಹೆಸರುಗಳು ಅನಾವಶ್ಯಕವಾಗಿ ಬರುವವು. ಇದು ಸರಿಯಾಗಿ ಕಾಣುವುದಿಲ್ಲ. ಆದುದರಿಂದ ಕರ್ಣಾಟವೆಂಬುದು ಮೂಲ ಪದವಾಗಿರಲಾರದು. ಕನ್ನಾಡ ಎಂಬುದರ ಸಂಸ್ಕೃತೀಕರಣವಾಗಿ ಕರ್ಣಾಟ ಆಗಿರಬೇಕು. ಏಕೆಂದರೆ, ಕನ್ನರ ನಾಡು ಎಂಬ ಸಮಂಜಸವಾದ ಅರ್ಥವು ಕನ್ನಾಡು (ಕನ್ನಡ) ಎಂಬ ಪದದಲ್ಲಿದೆ. ಕನ್ನಾಡು—ಕನ್ನಾಟ—ಕರ್ಣಾಟ ಈ ಕ್ರಮದಿಂದ, ಅದು ಸಂಸ್ಕೃತದಲ್ಲಿ ಸೇರಿಕೊಂಡಿದೆ. ಕರ್ಣಾಟದಲ್ಲಿರುವ ದ್ವಿರುಕ್ತಿ ದೋಷವು ಕನ್ನಾಡ(ಕನ್ನಡ) ದಲ್ಲಿ ಸ್ವಲ್ಪವೂ ಇಲ್ಲ.

ನಾಟರೆಂದರೇ ನಾಡವರು. ಕಾರವಾರ—ಮಂಗಳೂರ ಸೀಮೆಯಲ್ಲಿ ನಾಡವರೇ ಪ್ರಮುಖ ಜನಾಂಗ. ದಕ್ಷಿಣ ಕನ್ನಡ ಜಿಲ್ಲೆಯ ಜಾತಿ ಜನಾಂಗಗಳನ್ನು ವಿವರಿಸುವ ಗ್ರಂಥದಲ್ಲಿ ಬರೆದಿರುವುದೇನೆಂದರೆ:†

> They are the chief land owing and cultivating class·········· with the exception of the Billavas the most numerous caste in fhe district·

ಈ ಸೀಮೆಗೆ ಕನ್ನಡ (ಜಿಲ್ಲೆ) ಎಂದು ಹೆಸರು. ಕನ್ನಡ ಎಂದರೆ ಕನ್ನರ್ಕ ನಾಡು. ಇಲ್ಲಿಯ ಪ್ರಮುಖ ಜನಾಂಗವಂತು ನಾಡವರು. ಆದುದರಿಂದ ನಾಡವರೇ ಕನ್ನರು ಅಥವಾ ಕಣ್ಣರೆಂಬ ಮಾತು ಇನ್ನೂ ಒಂದು ಬಗೆಯಿಂದ ನಿದರ್ಶನಕ್ಕೆ ಬಂದಂತಾಯಿತು. ಆದುದರಿಂದ ಮನುವು ಹೇಳಿದ ಕರಣರು ಮತ್ತು ನಾಟರು ಒಂದೇ ಎಂದು ಕುಲ್ಲೂಕಭಟ್ಟನು ಹೇಳಿದುದು ಸಂಪೂರ್ಣ ಸತ್ಯ. ಮನುವು ಹೇಳುವ ಕರಣರೂ, ಮತ್ಸ್ಯಪುರಾಣದ ಕರ್ಣರೂ, ಇನ್ನು ಕೆಲವು ಸ್ಮೃತಿ ಪ್ರಬಂಧಗಳಲ್ಲಿ ಬರುವ ನಟ ( ನಾಟ ) ರೂ ನಮ್ಮ ಇಂದಿನ ನಾಡವರ ಪೂರ್ವಿಕರೇ ಎಂದು ನಿಃಸಂದೇಹವಾಗಿ ಹೇಳಬಹುದಾಗಿದೆ.

'ನಾಡವ' ರು ಈಗ ' ಕನ್ನಡ' ಜಿಲ್ಲೆಯಲ್ಲಿ ಮಾತ್ರ ಉಳಿದಿರುವರು. ಕನ್ನಡ ಜಿಲ್ಲೆ ಮತ್ತು 'ನಾಡವ' ರು ! ಸೀಮೆ ಮತ್ತು ಜನಗಳ ಹೆಸರಿನ ಈ

† CTS, I, 149

ಪರಸ್ಪರ ನಿಕಟಸಂಬಂಧವು ಅತ್ಯಂತ ವಿಚಾರಾರ್ಹವಾಗಿದೆ. ನೃಪತುಂಗನ ಕವಿರಾಜ ಮಾರ್ಗದಲ್ಲಿ 'ನಾಡವ' ರನ್ನು ಬಾಯಾರೆ ಹೊಗಳಿದುದುಂಟು. ಈ ಪ್ರಾಚೀನ ಗ್ರಂಥದಲ್ಲಿ ಎರಡು ಕಡೆಗಳಲ್ಲಿ ನಾಡವರ ವರ್ಣನೆಗಳು ಬಂದಿವೆ. ಅವೆರಡರಲ್ಲಿ ಮೊದಲನೆಯದು ಸಾಮಾನ್ಯವಾಗಿ ಈ ದೇಶದಲ್ಲಿ ವಾಸಿಸಿದ ಎಲ್ಲ ಜನಗಳನ್ನು ಕುರಿತು ಮಾಡಿದ ವರ್ಣನೆಯೆಂಬ ಭಾಸವಾಗುವಂತಿದೆ.

ಪದನರಿದು ನುಡಿಯಲುಂ ನುಡಿ ।
ದುದ ನಾರಯಲುಂ ಆರ್ಪರಾ ನಾಡವರ್ಗಳ್ ।
ಚದುರರ್ ನಿಜದಿಂ ಕುರಿತೋ
ದದೆಯುಂ ಕಾವ್ಯಪರಿಣತ ಮತಿಗಳ್ ॥

ಎಂಬ ಈ ವರ್ಣನೆಯನ್ನು ಮಾಡುವ ಮೊದಲು 'ಕಾವೇರಿಯಿಂದ ಗೋದಾವರಿವರಂ ಇರ್ದ ನಾಡು ಅದು ಆ 'ಕನ್ನಡ' ಎಂದು ಹೇಳಿ ಬಳಿಕ ನಾಡವರ ವರ್ಣನೆಯನ್ನು ಆರಂಭಿಸಿದ್ದಾನೆ. ಇಲ್ಲಿ ನಾಡವರೆಂದರೆ ಕನ್ನಡದಲ್ಲಿ ನೆಲೆಯಾದ ಎಲ್ಲ ಜನರೆಂದು ಅರ್ಥ ಮಾಡುವ ಮೋಹವುಂಟಾಗುವಂತಿದೆ. ಆದರೆ ಕರ್ಣಾಟದೊಳಗಿನ ಎಲ್ಲ ಜನರೂ 'ಕುರಿತು ಓದದ' ಉಳಿ ಮುಟ್ಟದ ಲಿಂಗವೆಂದು ಹೇಳುವ ಅಚಾತುರ್ಯವು ಸ್ವತಃ ಕುರಿತೋದಿ ವಿದ್ವಾಂಸನೆನಿನಿದ ವಿಜಯ ಮಹಾಕವಿಯಿಂದ ಆಗುವುದು ಸರ್ವಥಾ ಶಕ್ಯವಿಲ್ಲ. 'ಕುರಿತೋದದೆ' ಹುಟ್ಟುಜಾಣರಾದ ಸಾಮಾನ್ಯ ಜನ ( ಜನ ಸಾಮಾನ್ಯರಲ್ಲ ) ಎಲವು ಉಂಟು; ಅವರೇ ನಾಡವರು—ಒಂದು ವಿಶಿಷ್ಟ ಜನ ಎಂಬುದು ಅಲ್ಲಿ ಅಭಿವ್ಯಕ್ತವಾಗುತ್ತಿದೆ.‡

ನೃಪತುಂಗನ ಕಾಲದ ಮನೋಭೂಮಿಕೆಯನ್ನು ( Psychology ) ಸ್ವಲ್ಪ ನಿರೀಕ್ಷಿಸಿದರೂ ಈ ಮಾತೇ ನೆಲೆಗೊಳ್ಳುವುದು. ೮–೯ನೆಯ ಶತಮಾನದಲ್ಲಿ ಇಂದಿನಂತಹ ದೇಶಾಭಿಮಾನದ ಕಲ್ಪನೆಗಳೆ ತಲೆದೋರಿದ್ದಿಲ್ಲ. ಒಂದು ನಾಡು ಮತ್ತು ಆ ನಾಡಿನ ಜನಸಾಮಾನ್ಯರು ಇವರನ್ನೆಲ್ಲ ಅಚ್ಚು ಮೆಚ್ಚಿನಿಂದ ಕಾಣುವುದು, ಅದಕ್ಕಾಗಿ ಬೇಕಾದ ತ್ಯಾಗಕ್ಕೆ ಸಿದ್ಧರಾಗುವುದು

† ಪ್ರೊ. ರಂ. ಶ್ರೀ. ಮುಗಳಿಯವರಿಗೆ ಮೊದಲು ನನ್ನ ಈ ಅರ್ಥವು ಸಮ್ಮತವಿಲ್ಲವಾಗಿದ್ದರೂ ಈಗ ಇದೇ ಅರ್ಥವು ಸಮಂಜಸವೆಂದು ಒಪ್ಪಿಕೊಂಡಂತಾಗಿದೆ.
Haritage of Karnataka (1946) p. 37

ಇವೆಲ್ಲ ಇಂದಿನ ವಿಚಾರಗಳು. ಜಗತ್ತಿನಲ್ಲಿಯೆ ಈ ಬಗೆಯ ದೇಶಾಭಿಮಾನವು ವಿಶೇಷ ಊರ್ಜಿತ ಸ್ಥಿತಿಗೆ ಬಂದುದು ಅರ್ವಾಚೀನ ಕಾಲದಲ್ಲಿ. ಕರ್ಣಾಟದಲ್ಲಿ ತಾವು 'ಕನ್ನಡಿಗರು' ಎಂಬ ಅಭಿಮಾನವು ಮೊಳೆತುಕೊಳ್ಳಲು ಎಷ್ಟೊಂದು ದೀರ್ಘ ಕಾಲಾವಧಿಯು ಬೇಕಾಯ್ತೆಂಬುದನ್ನು ಎರಡನೆಯ ಅಧ್ಯಾಯದಲ್ಲಿ ವಿವರಿಸಿದ್ದಾಗಿದೆ. ಆದುದರಿಂದ ದೇಶಾಭಿಮಾನದ ಇಂದಿನ ವಿಚಾರಗಳನ್ನು ಒಯ್ದು ಹಿಂದಿನ ಕಾಲದ ಮಾತುಗಳ ಮೇಲೆ ಅಂಟಿಸುವುದು ಅಯುಕ್ತವು. ನಾಡವರು ಬಹಳ ರಸಿಕರೆಂದು ನೃಪತುಂಗನು ವರ್ಣಿಸಿದ್ದುದು ಒಂದು ವಿಶಿಷ್ಟವರ್ಗವನ್ನಲ್ಲದೆ ಆ ಕಾಲದ ಇಡಿ ಕರ್ನಾಟಕರನ್ನಲ್ಲ.

ನೃಪತುಂಗನು ಈ ಬಗೆಯಾಗಿ ನಾಡವರನ್ನು ವರ್ಣಿಸಿದುದಕ್ಕೆ ಒಂದು ಕಾರಣವೂ ಉಂಟು. ಅದು ಒಂದು ಬಗೆಯ ಆತ್ಮಪ್ರಶಂಸೆಯಾಗಿದೆ. ಆತ್ಮ ಪೌರುಷವನ್ನು ಹೇಳಿಕೊಳ್ಳುವುದು ಕನ್ನಡಿಗರ ವೈಶಿಷ್ಟ್ಯವಾಗಿದೆ. ನೃಪತುಂಗನು ಇದಕ್ಕೆ ಅಪವಾದವಲ್ಲ. ನೃಪತುಂಗನು ರಾಷ್ಟ್ರಕೂಟ ವಂಶದವನು ರಾಷ್ಟ್ರಿಕರು—ರಾಷ್ಟ್ರಕೂಟರು ಈ ನಾಡಿನ ಮೊದಲಿಗರು ( Indigenous tribe ) ಎಂದು ವಿನ್ಸೆಂಟಸ್ಮಿತ್‌ನ ಅಭಿಪ್ರಾಯ. * ರಠಿಕನೆಂದರೆ Native ನೆಂದು ಪಾಲಿಕೋಶವು ಹೇಳುತ್ತದೆ. ರಾಷ್ಟ್ರಿಕ ಎಂದರೆ ರಾಷ್ಟ್ರದವ. ಕನ್ನಡದಲ್ಲಿ ಹೇಳುವುದಾದರೆ ಇವನೇ ನಾಡವ. ಗೌಡನೆಂದೂ ಹಲವರು ಅರ್ಥ ಮಾಡುವರು. ಮೈಸೂರು ಸೀಮೆಯಲ್ಲಿ ನಾಡವರಿಗೆ ಗೌಡರು ಅಥವಾ ನಾಡಗೌಡರು ಎನ್ನುವ ವಾಡಿಕೆಯಿದ್ದುದು ಅಲ್ಲಿಯ 'ಜಾತಿ ಜನಾಂಗ' ಗಳ ಇತಿಹಾಸ ಗ್ರಂಥದಿಂದಲೆ ಗೊತ್ತಾಗುತ್ತದೆ. § ನಾಟ್ಟಮ್—Chiefship of a district ಎಂದು ತಮಿಳಕೋಶವು ಹೇಳುತ್ತದೆ. ಆದುದರಿಂದ ಕವಿ ರಾಜಮಾರ್ಗದೊಳಗಿನ ನಾಡವರ ವರ್ಣನೆಯೆಂದರೆ ಅದು ನೃಪತುಂಗನ ಕುಲದ—ರಾಷ್ಟ್ರಕೂಟ ಜನಾಂಗದ ವರ್ಣನೆಯೇ ಆಗಿದೆ. ನಾಡವರೆಂದರೆ, ( ಆಧುನಿಕ ಕವಿಯ ಭಾಷೆಯಲ್ಲಿ ಹೇಳಬಹುದಾದರೆ: ) 'ಭೂಮಿತಾಯಿಯ ಚೊಚ್ಚಿಲ ಮಕ್ಕಳು'—ಇವರೆ ಈ ನಾಡಮೊದಲಿಗರು. ಮೂಲ ಒಕ್ಕಲು ಮಕ್ಕಳು. 'ಒಕ್ಕೆಲ್ಮೆ' one of a cultivating class called the

* EHI. p. 430 † TCM- IV. pp. 397-401

Bants; a Bant; ಎಂದು ತುಳುಕೋಶದಲ್ಲಿ ಅರ್ಥವುಂಟು. ರಾಷ್ಟ್ರಕೂಟರು ಎಂದರೆ ಒಕ್ಕಲತನದವರೆಂಬ ಅರ್ಥವೇ ಉಂಟೆಂದು ಶಾಸನ ಇಲಾಖೆಯ ಮುಖ್ಯಾಧಿಕಾರಿಗಳಾಗಿದ್ದ ಶ್ರೀಮಾನ್ ಹೊಸಕೋಟೆ ಕೃಷ್ಣರಾಯರು ನಿರ್ಧರಿಸಿದ್ದಾರೆ. 'ರಾಷ್ಟ್ರಕೂಟ ಪ್ರಮುಖಾನ್ ಕುಟುಂಬಿನಃ' ಎಂದು ಶಾಸನಗಳಲ್ಲಿ ಬರುವ ವಾಕ್ಯಾರ್ಥವನ್ನು ವಿವರಿಸುವಾಗ ಅವರು ಬರೆದಿರುವುದು ಏನೆಂದರೆ:‡

> The familiar phrase 'ರಾಷ್ಟ್ರಕೂಟ ಪ್ರಮುಖಾನ್ ಕುಟುಂಬಿನಃ' which occurs in copper plate inscriptions shows also that the Rashtrakutas were 'ಕುಟುಂಬಿಗಳು' i, e, cultivators who enjoyed a higher social states than others of their community,

ರಾಷ್ಟ್ರಕೂಟರ ಶಾಸನಗಳ ಮೇಲೆ ರಾಜಚಿಹ್ನವೆಂದು ಹಲವೆಡೆಗಳಲ್ಲಿ ನೇಗಿಲು ಇದ್ದುದು ಬೆಳಕಿಗೆ ಬಂದಿದೆ + ಆದುದರಿಂದ ರಾಷ್ಟ್ರಕೂಟರು— ನಾಡಗೌಡರು, ಒಕ್ಕಲುಮಕ್ಕಳೆಂಬ ಬಗ್ಗೆ ಸಂದೇಹವೆ ಇಲ್ಲ, ರಾಷ್ಟ್ರಕೂಟರು ಯದುವಂಶಿಗಳೆಂದೂ ಒಂದು ಪರಂಪರೆಯಿದೆ. ಅದು ಸುಳ್ಳೆಂದೂ ಹಲವು ವಿದ್ವಾಂಸರ ಅಭಿಪ್ರಾಯವುಂಟು. ಆದರೆ ಇಲ್ಲಿ ಈ ಪ್ರಾಚೀನ ಪರಂಪರೆಯು ಇನ್ನೊಂದು ಪ್ರಾಚೀನ ಪರಂಪರೆಯೊಡನೆ ಎಷ್ಟೊಂದು ಸಹಜಮನೋಹರ ರೀತಿಯಿಂದ ಹೊಂದಿಕೊಳ್ಳುವುದೆಂಬುದನ್ನು ನೋಡಿದರೆ ಸೋಜಿಗವಾಗುವುದು. ಯದುಗಳು ಗೋವಳರು; ಗೌಳರು—ಗೌಡರು. ರಾಷ್ಟ್ರಕೂಟರೂ ಗೌಡರು, ನಾಡಗೌಡರು. * ಇದು ಮಹತ್ತ್ವದ್ದಲ್ಲ. ಮಹತ್ತ್ವದ ಸಂಗತಿ ಇನ್ನೊಂದು ಬೇರೆಯೆ ಇದೆ. ಗಂಗವಂಶಕ್ಕೂ ರಾಷ್ಟ್ರಕೂಟರಾಜರಿಗೂ ಬೀಗತನದ ಸಂಬಂಧವಿದ್ದುದು ಸುಪ್ರಸಿದ್ಧವಿದೆ. § ರಾಷ್ಟ್ರಕೂಟರು ತಾವು ಸಾಮ್ರಾಟರಾಗಿದ್ದರೂ, ತಮಗಿಂತಲೂ ಕಿರಿಯ ಅರಸರಾದ ಗಂಗರ ಮನೆತನಕ್ಕೆ ತಮ್ಮ ಹೆಣ್ಣುಮಕ್ಕಳನ್ನು ಮದುವೆಮಾಡಿಕೊಟ್ಟಿದ್ದಾರೆ. ಆದುದರಿಂದ ಗಂಗರಾಜರ ಕುಲವು ರಾಷ್ಟ್ರಕೂಟರ ಕುಲಕ್ಕಿಂತಲೂ ಕಡಿಮೆ ಎಂದೂ ಇರಲಾರದು. ರಾಷ್ಟ್ರ

‡ EI, XI, p. 342-343
+ RK, p, 111.

* M· Gazett Vol, II, part I, p. 156. PRK· p, 15-16·

ಕೂಟರು ತಮಗೆ ಯದುವಂಶಿಗಳೆಂದುಕೊಳ್ಳುತ್ತಿದ್ದರೆ ಗಂಗರು ತಾವು ತುರ್ವಸುವಿನ ಸಂತತಿಯವರೆಂದು ಹೇಳುತ್ತಿದ್ದುದು ಶಾಸನಗಳಿಂದಲೆ ಗೊತ್ತಾಗಿದೆ. ಇಲ್ಲಿ ಮತ್ತೆ ಋಗ್ವೇದಕಾಲದ ಯದು-ತುರ್ವಸುಗಳ ಕೂಟದ ಉಲ್ಲೇಖಗಳು ನೆನಪಿಗೆ ಬಾರದೆ ಇರುವುದಿಲ್ಲ.† ಎಂದರೆ ಋಗ್ವೇದಕಾಲದಿಂದ ಕಂಡುಬರುವ ಈ ಯದು–ತುರ್ವಸುಗಳ ನಿಕಟವಾದ ಸಂಬಂಧವು ಗಂಗ—ರಾಷ್ಟ್ರಕೂಟರ ಕಾಲದವರೆಗೂ ಅವ್ಯಾಹತವಾಗಿ ನಡೆದುಬಂದುದು ಬಹಳ ಮಹತ್ತ್ವದ ಸಂಗತಿಯಾಗಿದೆ. ಗಂಗರು ತುರ್ವಸುವಿನ ಸಂತತಿ. ಕರ್ಣಾಟದ ಮೊದಲಿಗರಾದ ಕರ್ಣರು ತುರ್ವಸುವಿನ ಪೀಳಿಗೆಯವರೆಂದು ಮತ್ಸ್ಯಪುರಾಣವು ಹೇಳುತ್ತದೆ. ಆದುದರಿಂದ ಗಂಗರು 'ಕರ್ಣ' ಎಂದರೆ ಕಣ್ ಜನಾಂಗವೆಂಬುದು ಬೇರೆ ಸಿದ್ಧಪಡಿಸಬೇಕೆ ? ಕಣ್ ( ಕನ್ ) ಜನಾಂಗವೇ ನಾಡವರು. ಆದುದರಿಂದ ಗಂಗರೂ ರಾಷ್ಟ್ರಕೂಟರೂ ನಾಡವರು.

ರಾಷ್ಟ್ರಕೂಟರೂ ಗಂಗರೂ ಶೌರ್ಯದಲ್ಲಿ ಮಿಗಿಲಾದವರು. ಕರ್ಣಾಟರು ಜನ್ಮತಃ ಕಡುಗಲಿಗಳೆಂದು ಪರಪ್ರಾಂತೀಯರೂ ಹೊಗಳಿದ್ದಾರೆ. ನಮ್ಮ ನಾಡವರಿಗೆ ಬಂಟರೆಂದು ಇರುವ ಹೆಸರಿನ ಔಚಿತ್ಯವು ಈವಾಗ ಗೊತ್ತಾಗುವುದು. ಬಂಟರೆಂದು ಹೆಸರಾದ ನಾಡವರ ಗುಣಸ್ವಭಾವಗಳನ್ನು ಸೂಕ್ಷ್ಮ ನಿರೀಕ್ಷಕನಾದ ಇಂಗ್ಲಿಷ ಅಧಿಕಾರಿಯೊಬ್ಬನು ಹೀಗೆ ವರ್ಣಿಸಿದ್ದಾನೆ. *

> They still retain their manly independence of character, their strong well developed physique and they still carry their heads with the same haughty toss as there fore fathers did in the sturring fighting days, when, as an old proverb had it 'the slain rested in the yard of the slayer', and when every warrior constantly carried his sword and shield. Both men and women of the Bant commuity are among the comliest of Asiatic races........

ಇದು ಆಧುನಿಕ ವಿಮರ್ಶಕ ಗೃಹಸ್ಥನು ತಾನು ಕಣ್ಣಾರೆ ಕಂಡು

† ಕವೀಕ್ಷ. ಪುಟ ೧೩೩.

* CTS, I, p. 149

ಮಾಡಿದ ನಾಡವರ ವರ್ಣನೆ. ಕವಿರಾಜಮಾರ್ಗದಲ್ಲಿ ಬಂದಿರುವ ಇನ್ನೊಂದು (೨-೨೮) ವರ್ಣನೆಯೊಡನೆ ಹೋಲಿಸಿ, ಮನನ ಮಾಡುವಂತಿದೆ.

ಸುಭಟರ್ಕಳ್ ಕವಿಗಳ್ ಸು ।
ಪ್ರಭುಗಳ್ ಚೆಲ್ವರ್ಕಳಭಿಜನರ್ಕಳ್ ಗುಣಿಗಳ್ ॥
ಅಭಿಮಾನಿಗಳತ್ಯುಗ್ರರ್ ।
ಗಭೀರಚಿತ್ತರ್ ವಿವೇಕಿಗಳ್ ನಾಡವರ್ಗಳ್ ॥

೧೧೦೦ ವರುಷಗಳಹಿಂದಿನ ನಾಡವರ ವರ್ಣನೆಯಿದು! ಎಷ್ಟು ಸಾಮ್ಯ! ಕವಿರಾಜಮಾರ್ಗದ ವರ್ಣನೆಯನ್ನೋದಿ ಅದನ್ನೇ ಇಂಗ್ಲಿಷಿನಲ್ಲಿ ಭಾಷಾಂತರಿಸಿದಂತಿದೆ! ಅಂದಿನ ಗುಣಗಳು ಇಂದಿಗೂ ಊಚ್ಚಳಿಯದೆ ಉಳಿದಿವೆ. ಇವರು ಬಂಟರು—ಸು-ಭಟರ್ಕಳ್, ಅಭಿಮಾನಿಗಳ್, ಅತ್ಯುಗ್ರರ್, ಗಭೀರಚಿತ್ತರ್; ಚೆಲ್ವರ್ಕಳ್, ಅಭಿಜನರ್ಕಳ್, ಗುಣಿಗಳ್, ವಿವೇಕಿಗಳ್; ಇವರು ಒಬ್ಬರಿಗೆ ತಲೆವಾಗಿ, ಜೀಯೆಂದು ಎಂದೂ ಬಾಳಿದವರಲ್ಲ. ಆದುದರಿಂದಲೆ ಸುಪ್ರಭುಗಳ್. ಆಳಿ ಗೊತ್ತು ಇವರಿಗೆ; ಆಳಾಗಿ ತಲೆವಾಗಿದವರಲ್ಲ. 'ಸಾರಿಯುಂ ಕೀರಿಯುಂ' ಬಾಳುವವರು; 'ಎಂದುದನೆ ಎಂದು' ಎಂತು ಬದುಕಿಕೊಂಡಿರುವವರಲ್ಲ. ಯಕ್ಷಗಾನ, ಸಂಗೀತದ ಪ್ರೀತಿ ಇಂದಿನ ನಾಡವರಿಗೂ ವಿಶೇಷ. ಆದುದರಿಂದ ಇವರಿಗೆ—ಅಭಿಜನರರ್ಕಳ್, ಗುಣಿಗಳ್, ಕುರಿತೋದದೆಯುಂ ಪರಿಣತಮತಿಗಳ್ ಎಂದು ನೃಪತುಂಗನು ಅಂದು ವರ್ಣಿಸಿದುದು ಇಂದಿಗೂ ಸಮರ್ಪಕವಾಗಿದೆ !

ಇಂತಿದು ಕನ್ನಡದ ಮೂಲಜನಾಂಗ. ಕರ್ಣಾಟರು ವೀರರು ಧೀರರೆಂದು ಹೆಸರು ಬಂದುದು ಈ ಜನಾಂಗದಿಂದ. ಈ ಜನಾಂಗವೆ ಈ ನಾಡಿನ ಜೀವಜೀವಾಳ. ಇಂದು ಈ ಜನಾಂಗವು ಮಲೆನಾಡಿನಲ್ಲಿ ಮಾತ್ರ ಕಣ್ಣಿಗೆ ಬೀಳುವುದಾದರೂ ಪ್ರಾಚೀನಕಾಲದಲ್ಲಿ ಇವರ ಅನೇಕ ಗುಂಪುಗಳು ಸಮಗ್ರ ಕರ್ಣಾಟದಲ್ಲಿ ಹಬ್ಬಿಕೊಂಡಿದ್ದುವೆನ್ನಲು ಸಾಕಷ್ಟು ಆಧಾರಗಳಿವೆ (೭ನೆಯ ಪ್ರಕರಣ ನೋಡಿ). ಅದು ಏನೇ ಇದ್ದರೂ ನಾಡವರು ಈಗ ಇಷ್ಟೊಂದು ಅಲ್ಪಸಂಖ್ಯಾಕರಾಗಿರುವುದಕ್ಕೆ ಹಲವು ಕಾರಣಗಳಿವೆ. ಹೊರಗಣಿಂದ ಈ ನಾಡಿನಲ್ಲಿ ನೆಲಿಸಲು ಬಂದ ಜನಗಳಲ್ಲಿ ಇವರ ಬಹುಭಾಗವು ಬೆರೆತುಕೊಂಡಿರುವ ಸಂಭವವು ಉಂಟಲ್ಲದೆ ಇದಕ್ಕೆ ಇನ್ನೂ ಎರಡು ಬೇರೆ ಕಾರಣಗಳಿವೆ. ಅತಿ

ಪ್ರಾಚೀನ ಕಾಲದಿಂದಲೂ ಇವರು 'ವೀರ' ಪೂಜಕರು; ವೀರ ( ರುದ್ರ ) ನ ಉಪಾಸಕರು. ಆದರೆ ಮುಂದೆ ಮಹಾವೀರನ ಅನುಯಾಯಿಗಳಾದವರು ಹಲರು; ಇದಕ್ಕೆ ಗಂಗರ ಅರಸುಮನೆತನವೇ ಸಾಕ್ಷಿ. ಲಿಂಗಧಾರಣೆಯ ಹೊಸ ಪಂಥಕ್ಕೆ ಸೇರಿದವರು ಹಲರು; ರಡ್ಡಿ, ಕುಡುಒಕ್ಕಲಿಗ, ಗೌಡರು ಮೊದ ಲಾದ ಒಳಬಣಗಳು ಆ ಧರ್ಮದಲ್ಲಿ ಈಗಲೂ ಉಳಿದುಕೊಂಡಿದುದೆ ಇದಕ್ಕೆ ದೃಷ್ಟಾಂತ. ಶ್ರೀವೈಷ್ಣವ ಮತ್ತು ಹರಿದಾಸನಾಥ ಪಂಥದ ದೀಕ್ಷೆ ಹೊಂದಿದ ವರೂ ಉಂಟು. ಆದರೂ ಜೈನ ಮತ್ತು ಲಿಂಗವಂತ ಇವೆರಡು ಪ್ರಸಾರಕ ಧರ್ಮಗಳ ಮಹಾಪ್ರವಾಹದಲ್ಲಿ ಸಿಲುಕಿ ತಮ್ಮ ಮೂಲ ಕುಲಗೋತ್ರಗಳನ್ನು ಸಂಪೂರ್ಣ ಮರೆತುಬಿಟ್ಟವರೇ ಬಹಳ. ಮೂಲನಾಡವರಲ್ಲಿ ಒಂದೊಂದು ಕಾಲಪರಿಸ್ಥಿತಿಗೆ ಅನುಸಾರವಾಗಿ ಹಲವರು ಹಲವು ಬಗೆಯ ವೃತ್ತಿಗಳನ್ನು ಸ್ವೀಕರಿಸಿ ಜೀವನವ್ಯಾಪಾರವನ್ನು ಸಾಗಿಸಬೇಕಾಗಿರುವುದು ಸಹಜ. ಹಾಗೆ ದೇಶ–ಕಾಲ–ಉದ್ಯೋಗ ಭೇದದಿಂದ ಇವರಲ್ಲಿ ಒಳಪಂಗಡಗಳು ಹೆಚ್ಚು ಹೆಚ್ಚಾಗುತ್ತ ಹೋಗಿ ಕೊನೆಗೆ ತಾವು ಒಬ್ಬರಿಂದ ಒಬ್ಬರು ತೀರ ಬೇರೆ ಎನ್ನು ವಂತಹ ಭಾವನೆಯುವರಾಗಿರುವುದೂ ಸ್ವಾಭಾವಿಕವಾಗಿದೆ. ನಾಡವರು, ಬಂಟರು, ಒಕ್ಕಲರು, ಕುಡುವರು, ರಡ್ಡಿಗಳು, ಗಂಡಿಕಾರರು, ಗೌಡರು, ಕ್ಷತ್ರಿಯರು, ಬ್ರಹ್ಮಕ್ಷತ್ರಿಯರು ಎಂಬೀ ಬಗೆಯ ಭೇದಾಭೇದಗಳು ಬೆಳೆದು ದುಂಟು. ಆದರೆ ಮೊದಲಲ್ಲಿ ಇವೆಲ್ಲ ಜನಗಳು ಒಂದೇ ಬುಡಕಟ್ಟಿನವರೆಂದು ಸ್ವಲ್ಪ ಸೂಕ್ಷ್ಮನಿರೀಕ್ಷಣೆಯಿಂದ ಕಂಡುಕೊಳ್ಳಬಹುದಾಗಿದೆ. ಇಂತೀ ಬಗೆಯ ಅವುದೆ ಕಾರಣವಿರಲಿ, ಕರ್ಣಾಟದ ಬಹು ಭಾಗದೊಳಗಿನ ನಾಡವರ ಗುರುತು ಸಿಕ್ಕುವುದು ಇಂದು ಸಾಧ್ಯವಿಲ್ಲ. ಆದರೂ ಸುದೈವದಿಂದ ಕನ್ನಡದ 'ಮೂಲಿಗ' ರು ಕನ್ನಡ ಜಿಲ್ಲೆಯಲ್ಲಿ ಕೆಲಮಟ್ಟಿಗಾದರೂ ಉಳಿದುಕೊಂಡಿದ್ದಾರೆ. ಕನ್ನಡದ ಮೂಲಜನಾಂಗದ ಗುಣ-ಸ್ವಭಾವ, ರೂಪ ಆಕಾರಗಳು ಬಹಳ ಮಟ್ಟಿಗೆ ಇವ ರಲ್ಲಿ ಈಗಲೂ ಜೀವಂತವಾಗಿರುವುದನ್ನು ಕಾಣಬಹುದು. ಅರ್ವಾಚೀನಕಾಲ ದಲ್ಲಿ ಜೈನಧರ್ಮವು ಹಿಂದೆ ಬಿದ್ದು ಲಿಂಗವಂತರ ಪ್ರಾಬಲ್ಯವೇ ಹೆಚ್ಚಾಯ್ತು. ಕನ್ನಡದ ಮೂಲಜನಾಂಗದ ಬಹುಭಾಗವು ಈ ಮತಾನುಯಾಯಿಗಳಲ್ಲಿ ಅಡಕವಾಗಿದೆ. ಆದರಿಂದ ಕನ್ನಡದ ನಾಡವರ ಸ್ವಭಾವ ವೈಶಿಷ್ಟ್ಯವು ಲಿಂಗ ವಂತರಲ್ಲಿಯೂ ಉಂಟೆಂದು ಬೇರೆ ಹೇಳುವ ಕಾರಣವಿಲ್ಲ.

ನಾಟರು-ನಾಡವರು ಎಂಬ ಜನಗಳು ಈಗಲೂ ಉಂಟು. ಪ್ರಾಚೀನ ಕಾಲದಲ್ಲಿಯೂ ಇದ್ದುದನ್ನು ಸ್ಮೃತಿಗ್ರಂಥಗಳಿಂದಲೂ ಕನ್ನಡ ಸಾಹಿತ್ಯದಿಂದಲೂ ಕಂಡುಕೊಂಡುದಾಯ್ತು. ಇವರೇ ಕನ್ನಡದ ಮೊದಲಿಗರು. ಆದುದರಿಂದ ಕನ್ ಎಂಬ ಜನಾಂಗವೆಂದರೆ ಇದೇ, ಎಂದು ಊಹಿಸಲು ಅವಕಾಶವುಂಟೆಂಬುದನ್ನು ಅರಿತುಕೊಂಡುದೂ ಆಯ್ತು. ಆದರೆ ಕನ್ ಜನಾಂಗದ ಅಸ್ತಿತ್ವವನ್ನು ನಿಶ್ಚಿತವಾಗಿ ತಿಳಿಸುವ ಇದಕ್ಕೂ ಹೆಚ್ಚಿನ ಪ್ರಾಚೀನ ಅವಶೇಷಗಳು ಏನೂ ಇಲ್ಲವೆ? ಕನ್ನರೆಂಬ ಜನಾಂಗವು ಈ ನಾಡಿನಲ್ಲಿ ಬಾಳಿ ಬದುಕಿದುದಕ್ಕೆ ಇದಕ್ಕೂ ಬಲವಾದ ಪ್ರಮಾಣಗಳು ದೊರೆಯದೆ ಇದ್ದರೆ ಈ ಬರಿ ಊಹೆಯನ್ನು ಹೇಗೆ ತಾನೆ ನಂಬುವುದು?

ಫಾದರ ಹಿರಾಸರು ಮೊಹೆಂಜೋದಾರೊದಲ್ಲಿ ದೊರೆತ ಪ್ರಾಚೀನತಮ ಶಾಸನಗಳನ್ನು ಬಹಳ ಪರಿಶ್ರಮಪಟ್ಟು ಓದಿ, ಅವನ್ನು ಕುರಿತು ಹಲವು ಲೇಖನಗಳನ್ನು ಪ್ರಕಟಿಸಿದ್ದಾರೆ. 'ಕರ್ನಾಟಕ ಮತ್ತು ಮೊಹೆಂಜೋದಾರೊ' ಎಂಬ ಒಂದು ಲೇಖನದಲ್ಲಿ ಅವರು ಬರೆಯುವುದೇನೆಂದರೆ: *

> The fact that the ancient people of Mohenjo Daro were proto-Dravidians—a fact hinted at by Sir John Marshall and confirmed by the interpretation of all the inscriptions by the present writer—is already a link between all the Dravidian countries, including therefore Karnatak, and Mohenjo Daro.
>
> But the connection batween Karnatak and Mohenjo Daro is still more explicit than this general inter-relation. Tne people of Karnatak are apparently referred to in one of the seal inscriptions of Mohenjo Daro as one of the ancient tribes of the land. The sign used to mention them is a symobol to denote an eye.

† KHJ. 1937, Vol. IV, p. 1—2

> The main ( similar ) sign is also found in the Sumerian tablets of Jemdet Nasar........thus it means 'eye'. Therefore in the Proto-Dravidian language of Mohenjo Daro it will read Kan, ' eye ' or to ' see '............therefore it will read Kannan 'one who sees'........thus the complete sign will read Kananir, 'people who have eyes' this evidently refers to a tribe, to a number of people of called so. The ancient word Kannadigas by which the people of modern Karnataka are mentioned, seems to be a Sanskrit modification of Kananir.

ಫಾದರ ಹಿರಾಸರ ಈ ಸಂಶೋಧನೆಯಲ್ಲಿ ಸತ್ಯಾಂಶವಿದೆಯೆಂದು ಸಿದ್ಧವಾದರೆ ಕನ್ನಡಿಗರ ಪ್ರಾಚೀನ ಇತಿಹಾಸದ ಭವ್ಯತೆಯು ಇನ್ನೂ ಹೆಚ್ಚುವುದು. ವೇದಕಾಲದಿಂದಲೂ ಕನ್ನಡಿಗರು ಪ್ರಬಲರಾಗಿದ್ದರು. ಇವರ ನಡೆನುಡಿಗಳ ಕುರುಹುಗಳು ವೈದಿಕ ಸಾಹಿತ್ಯದಲ್ಲಿ ಅಲ್ಲಲ್ಲಿ ಕಾಣಬರುವುದೆಂಬುದನ್ನು 'ಕರ್ಣಾಟದ ವೀರಕ್ಷತ್ರಿಯರು' ಎಂಬ ಪುಸ್ತಕದಲ್ಲಿ (೧೯೩೬) ನಾನು ವಿವರಿಸಿದ್ದುಂಟು. ಪ್ರಸ್ತುತ, ಹಿರಾಸರು ೧೯೩೭ರಲ್ಲಿ ಪ್ರಕಟಿಸಿದ ಈ ಲೇಖನದಲ್ಲಿ ಹಿಂದಕ್ಕೆ 'ಕರ್ಣ್' ಎಂಬ ಜನಾಂಗವು ಇದ್ದಿತೆಂದೂ ಈ ಜನಾಂಗವನ್ನು ಮೊಹೆಂಜೋದಾರೋದ ಚಿತ್ರಲಿಪಿಯಲ್ಲಿ ಕಣ್ಣಿನ ಗುರುತಿನಿಂದ ಉಲ್ಲೇಖಿಸಿರುವರೆಂದೂ ಪ್ರತಿಪಾದಿಸಿದ್ದಾರೆ.

ಫಾದರ ಹಿರಾಸರು ಓದಿದ ಮೊಹೆಂಜೋದಾರೋದ ಶಾಸನಗಳ ಚಿತ್ರಲಿಪಿಯ ಅರ್ಥದ ಬಗೆಗೆ ಮತಮತಾಂತರಗಳು ವಿಪರೀತವಾಗಿವೆ. ಆದುದರಿಂದ ಅವರು ಓದಿದುದನ್ನು ಈಗಲೆ ಪ್ರಮಾಣವೆಂದು ಎಣಿಸಲಿಕ್ಕಾಗದು. ಆದರೂ ಹಿರಾಸರ ಈ ಊಹೆಗೆ ಮನುಸ್ಮೃತಿ ಮತ್ತು ಮತ್ಸ್ಯಪುರಾಣಗಳ ಬೆಂಬಲವು ದೊರೆಯುತ್ತಿರುವುದರಿಂದ ಅವರ ಓದು ಸರಿಯಿದ್ದರೂ ಇರಬಹುದು, ಎನ್ನಲು ಅವಕಾಶವಿದೆ.

ಪ್ರಸ್ತುತ, ನಮ್ಮ ಈ ಜನಾಂಗದ ಹೆಸರನ್ನು ಬರೆವುದರಲ್ಲಿ ಮೂಲ

ದೊಳಗೇ ಎರಡು ಬಗೆಗಳಿದ್ದಂತೆ ಕಾಣುತ್ತಿದೆ. 'ಕನ್ನಡ' ಶಬ್ದವನ್ನು ಬಿಡಿಸಿ ನೋಡಿದರೆ ಕನ್ನಡರು ಎಂಬಲ್ಲಿ ನಕಾರವಿದ್ದುದು ಗೋಚರವಾಗುತ್ತದೆ. ಸಂಸ್ಕೃತಸಾಹಿತ್ಯದಲ್ಲಿ 'ಕರಣ' ಮತ್ತು 'ಕರ್ಣ' ಎಂಬಲ್ಲಿ ಣಕಾರವಿರುವುದು. ಫಾದರ ಹಿರಾಸರು 'ಕಣ್ಣು' ಎಂಬ ಸಂಕೇತದ ಚಿಹ್ನವು ಮೊಹೆಂಜೋದಾರೋದ ಶಾಸನಗಳಲ್ಲಿ ಉಂಟು, ಎನ್ನುವರು. ಆದುದರಿಂದ ಅವರು ಣಕಾರ ಪಕ್ಷಕ್ಕೆ ಸೇರಿದಂತಾಯಿತು. ಆದರೆ ಆಂಧ್ರರಲ್ಲಿ ಕಣ್ಣಿಗೆ 'ಕನ್ನು' ಎಂಬ ರೂಢಿಯುಂಟು. ಆಂಧ್ರ ಕರ್ಣಾಟರು ಮೊದಲು ಒಂದೇ ಪಂಗಡದವರಾದುದರಿಂದ ಫಾದರ ಹಿರಾಸರು ಹೇಳುವ ಜನಾಂಗದ ಹೆಸರನ್ನು ಕನ್ನರೆಂದು ಹೇಳಲೂಬಹುದು. ಆದರೆ ಕನ್ನಡದಲ್ಲಿ ಕಣ್ಣು ಎಂದೇ ಹೇಳುವುದಿಲ್ಲವೆ?

ನ, ಣಗಳ ನಿರ್ಣಯಮಾಡಬೇಕೆನ್ನುವಾಗ ಪ್ರಾಕೃತದಲ್ಲಿ ಬಂದ ಕೆಲವು ಉಲ್ಲೇಖಗಳನ್ನೂ ದುರ್ಲಕ್ಷಿಸಿ ನಡೆಯಲಾರದು.

೧. ಶ್ರೀಮಾನ್ ಗೋವಿಂದ ಪೈಗಳು ಭವಿಸ್ಸಯತ್ತಕಹೆಯಲ್ಲಿ 'ಕನ್ನಾಡ' ಎಂದು ಉಲ್ಲೇಖವಿರುವುದನ್ನು ಕಂಡುಹಿಡಿದಿರುವರು.

ಕೊಲ್ಹಾಪುರದ ಪ್ರೊ. ಉಪಾಧ್ಯೆಯರು ಸಂಗ್ರಹಿಸಿರುವ ಉಲ್ಲೇಖಗಳಲ್ಲೆಲ್ಲ ಣಕಾರವೆ ಕಂಡುಬರುತ್ತದೆ.

೨. ಗೊಲ್ಲ, ಮಧ್ಯ, ಮಗಧ ಮೊದಲಾದ ಬೇರೆ ಬೇರೆ ದೇಶಗಳ ಪ್ರಾಕೃತಗಳನ್ನು ಹೇಳುವಾಗ ಲಾಡ, ಕಣ್ಣಾಡ, ಮರಹಟ್ಟಗಳ ಹೆಸರು ಬಂದಿವೆ.

೩. ಉದ್ಯೋತನ ಸೂರಿಯು ( ಕ್ರಿ. ಶ. ೭೭೮ ) ಕನ್ನಡಿಗರ ಗುಣ–ಸ್ವಭಾವಗಳನ್ನು ನಿರೂಪಿಸುವಾಗ 'ಕಣ್ಣಾಡ' ಎಂಬ ಪದವನ್ನು ಪ್ರಯೋಗಿಸಿದ್ದಾನೆ. ಈತನ ಕಣ್ಣಾಡರ ವರ್ಣನೆಯನ್ನು ಹಿಂದೆ (ಪುಟ ೯೯) ಬಂದ ನಮ್ಮ ನಾಡವರ ವರ್ಣನೆಯೊಡನೆ ತೂಗಿ ನೋಡುವಂತಿದೆ.

ಅಕ್ಕಡದಪ್ಪೇ ಕಿ ಅ ಮೋಹಣೇ ಏ (ಪ) ಯರೊದ್ದೇ
ಪಯಂ ಗವಿತ್ತಿಯ ।
'ಅದಿ ಪೊಂಡಿ ಮ (ನ) ರೇ' ಭಣಿರೇ ಪೆಚ್ಛ ಇ ಕಣ್ಣಾಡ
ಏ ಅಣ್ಣೇ ॥
(ಉತ್ಕಟದರ್ಪಾನ್ ಪ್ರಿಯ ಮೋಹನಾನ್ ಪದ ರೌದ್ರಾನ್

ಪತಂಗ ವೃತ್ತಿಂಶ್ಚ ।
'ಅದ್ರಿ ಪೊಂಡಿಮನರೇ' ಭಣತಃ ಪ್ರೇಕ್ಷತೇ ಕರ್ಣಾಕೀಯಾ
ನನ್ಯಾನ್ ॥ )

೩. ಕನ್ನಡ ನಾಡವರು ಕಡುಗಲಿಗಳೂ ತುಂಬ ಚೆಲುವರೂ ಎಂದು ನೃಪತುಂಗನ (ಲ೧೫) ಮೊದಲಿನಿಂದಲೂ (ಉದ್ಯೋತಸೂರಿ, ಕ್ರಿ. ಶ. ೭೭೮) ಖ್ಯಾತಿ. ೧೦ನೆಯ ಶತಮಾನದ ರಾಜಶೇಖರನೂ ಇದೇ ಬಗೆಯಾಗಿ ಬಣ್ಣಿಸಿದ್ದಾನೆ. ಕರ್ಣಾಟ ಸುಂದರಿಯರ ಭೃಂಗ ಕುಂತಲಗಳ ವರ್ಣನೆಯ ಕಾಲಕ್ಕೆ 'ಕಣ್ಣಾಡ' ಶಬ್ದವು ಬಂದಿದೆ.

ಕಣ್ಣಾಡೀಣಂ ಕುಣಂತಾ ಕುರಲತರಲಣಂ
(ಕರ್ಣಾಟೀ ಚಿಕುರಾಣಾಂ ತಾಂಡವ ಕರೋ ವಾಯುಃ)

ಆದುದರಿಂದ ಸಂಸ್ಕೃತ ಮತ್ತು ಪ್ರಾಕೃತಗಳ ಒಲವನ್ನು ನೋಡಿದರೆ 'ಕಣ್ಣಡ' ಎಂದು ಈ ನಾಡಿನ ಹೆಸರು ಬರೆಯಬೇಕೆನಿಸುವುದು. ಏಕೆಂದರೆ ಈ ನಾಡಿನ ಮೂಲಜನಾಂಗಕ್ಕೆ ಕಣ್ಣ (F) ರೆಂದು ಹೆಸರಿದ್ದಂತೆ ಆ ಸಾಹಿತ್ಯದೊಳಗಿನ ವಿಶೇಷ ಉಲ್ಲೇಖಗಳಿಂದ ಸಿದ್ಧವಾಗುತ್ತದೆ.

ಆದರೆ ಈ ನಾಡಿನ ಹೆಸರನ್ನು 'ಕಣ್ಣಡ' ಎಂಬುದಾಗಿ ಬರೆದುದನ್ನು ಇನ್ನೂ ಯಾರೂ ಕಂಡಿಲ್ಲ! ೧೨೦೦ ವರುಷಗಳ ಕಾಲಾವಧಿಯಲ್ಲಿ ಆದ ಒಂದು ಶಾಸನ ಅಥವಾ ಒಂದು ತಾಳೆ ಗರಿಯ ಬರೆವಣಿಗೆಯಲ್ಲಿ ಅಪ್ಪಿತಪ್ಪಿ ಸಹ 'ಕಣ್ಣಡ' ಎಂಬ ರೂಪವು ಕಣ್ಣಿಗೆ ಬೀಳುವುದಿಲ್ಲ. ಎಲ್ಲಿ ನೋಡಿದಲ್ಲಿ 'ಕನ್ನಡ' ಎಂಬ ಪದವೇ.

ಆದರೂ ಕನ್ನಡದಲ್ಲಿಯೂ ಈ ಜನಾಂಗಕ್ಕೆ ಸಂಬಂಧಪಟ್ಟ ಇನ್ನೊಂದು ವಿಷಯದಲ್ಲಿ ನ–ಣಕಾರಗಳ ಅನಿಶ್ಚಿತತೆಯು ಇದ್ದೇ ಇದೆ! ಈ ನಾಡಿನ ಮೊದಲಿಗರ ಹೆಸರಿನ ನಿಶ್ಚಿತವಾದ ಕುರುಹುಗಳೆಂದರೆ ಇವರ ಹೆಸರಿನ ಊರುಗಳು, ಉದಾಹರಣೆ ಕನ್ನಂಬಾಡಿ. ಈ ಶಬ್ದದೊಳಗಿನ ಕೊನೆಯ 'ಬಾಡಿ' ಎಂಬುದು 'ಪಾಡಿ' (ವಾಡಿ) ಊರು ಎಂಬರ್ಥದ ಮಾತು. ಪಾಡಿ ಎಂದರೆ ನಿಜವಾಗಿ 'ಪಟ್ಟಿ–ಹಟ್ಟಿ; ತುರುಕಾರರ ಊರು; ಗೋವಳ ಬೀಡು. ಹಟ್ಟಿಗಳ ವಿಚಾರದಲ್ಲಿಯೂ, ಈ ನಾಡಿನ ಮೊದಲಿಗರು ಹಟ್ಟಿಕಾರರು–ತುರು (ಪಶು) ಗಳನ್ನು ಸಾಕಿಕೊಂಡು ಬದುಕು ಮಾಡುತ್ತಿದ್ದರೆಂಬ ವಿಚಾರದಲ್ಲಿಯೂ ಕರ್ಣಾ

ಟದ ವೀರಕ್ಷತ್ರಿಯರು ಅಥವಾ ಹಟ್ಟಿಕಾರರು ಎಂಬ ಪುಸ್ತಕದಲ್ಲಿ ವಿಸ್ತಾರದಿಂದ ಹಲವು ಆಧಾರಗಳೊಂದಿಗೆ ವಿವೇಚಿಸಿದ್ದಾಗಿದೆ.* ಈ ನಾಡಿನ ಮೊದಲಿಗರು ಗೋವಳರಾಗಿದ್ದರು; ಈ ಜನಾಂಗದ ಹೆಸರು ಕನ್ನ ಅಥವಾ ಕಣ್ಣರು ಎಂದು ಇದ್ದುದೂ ಕಂಡುಬರುತ್ತಲಿದೆ. ಆದುದರಿಂದ ಕನ್ನ(ಂ)ಪಾಡಿ ಎಂಬುದು ಕನ್ನರ ಊರು ಆಗಿರುವ ಸಂಭವವಿಲ್ಲವೆ? ಇದನ್ನೇ ಕಣ್ಣಂಬಾಡಿ ಎಂದೂ ಕೆಲವು ಬಾರಿ ಹೇಳುವುದುಂಟೆಂದು ತೋರುತ್ತದೆ. "ಕನ್ನಂಬಾಡಿಯ ಸ್ಥಳಪುರಾಣ ದಲ್ಲಿ ಈ ಊರಿಗೆ 'ಕಣ್ವಪುರ' ಎಂಬ ಹೆಸರಿದ್ದುದು ಕಂಡುಬರುತ್ತದೆ. ಈ ಊರಲ್ಲಿ ಕಾವೇರಿಯ ದಂಡೆಯ ಮೇಲೆ ಒಂದು ಶಿವಾಲಯವಿದ್ದು ಅದಕ್ಕೆ 'ಕಣ್ವೇಶ್ವರ' ಎಂಬ ಹೆಸರಿದ್ದುದೂ ಗೊತ್ತಾಗುತ್ತದೆ" ಎಂದು ಡಾ. ಹ. ಕೃಷ್ಣರ ಟಿಪ್ಪಣಿಯಲ್ಲಿದೆ. ಆದರೆ ಈ ಊರಿಗೆ ಈಗ ಬಳಕೆಯಲ್ಲಿರುವ ಹೆಸರು ಕನ್ನಂಬಾಡಿ ಎಂದೆ! ಕಣ್ವಪುರವು—ಕಣ್ಣಪುರ ಅಥವಾ 'ಕಣ್ಣೂರ' ಆಗ ಬಹುದು; ಕನ್ನಂಬಾಡಿ ಆಗುವ ಕಾರಣವೇನು? ಸ್ಥಳಪುರಾಣಗಳು ಊರ ಹೆಸರುಗಳನ್ನು ಅನುಕೂಲತೆಯಂತೆ ಬದಲಿಸಿಕೊಂಡು ಪ್ರಾಚೀನ ರಾಜ, ಋಷಿಗಳಿಗೆ ಸಂಬಂಧಿಸಿ ಹೇಳುವ ಸಂಪ್ರದಾಯವಿದ್ದುದು ಸುಪ್ರಸಿದ್ಧವಿದೆ. ಅದೇ ಮೇರೆಗೆ ಕನ್ನಂಬಾಡಿಯು ಕಣ್ವಪುರವಾಗಿರಬೇಕು. ಶಾಸನದ ಉಲ್ಲೇಖಗಳಿಂದ ಈ ಮಾತು ದೃಢವಾಗುತ್ತದೆ. ಕ್ರಿ. ಶ. ೧೧೧೪ ಮತ್ತು ೧೧೧೮ರ ಶಾಸನಗಳಲ್ಲಿ ಕನ್ನೇಶ್ವರ ಎಂದು ಈ ಶಿವಾಲಯದ ಹೆಸರಿನ ಉಲ್ಲೇಖವಿದೆ.

ಕರ್ಣಾಟದಲ್ಲಿ ಒಂದು ತುದಿಯಿಂದ ಇನ್ನೊಂದು ತುದಿಯ ವರೆಗೆ ಕನ್ನೂರು ಅಥವಾ ಕಣ್ಣೂರು ಎಂಬ ಹೆಸರಿನ ಊರುಗಳು ಅಲ್ಲಲ್ಲಿಗೆ ನೆಲಸಿದ್ದುದು ಗೋಚರವಾಗುತ್ತದೆ.† ಇವೆಲ್ಲವುಗಳೂ ಕಣ್ವಪುರಗಳೆಂದು ಹೇಳುವುದು ಸಯುಕ್ತಿಕವಾದೀತೆ? ಸಾಮಾನ್ಯವಾಗಿ ಕನ್ನೂರೂ (ಕಣ್ಣೂರು) ಗಳೆಲ್ಲವೂ ಪ್ರಾಚೀನ ಪಟ್ಟಣಗಳಾಗಿವೆ. ಮೈಸೂರು ಸಂಸ್ಥಾನದಲ್ಲಿ ಕನ್ನೂರು ಎಂಬ ಊರಿನ ಹೆಸರು ಶಾಸನಗಳಲ್ಲಿ ಹಲವು ಬಾರಿ ಕಾಣಿಸಿಕೊಳ್ಳುತ್ತದೆ. §

---

* ಕವೀಕ್ಷ ಪುಟ ೩, ೫, ೧೨-೩೨ ಮುಂ.

§ EC- Index Vol. XIII

† ಕರ್ಣಾಟದ ಗ್ರಾಮನಾಮಗಳಿಂದ ಗೊತ್ತಾಗುವ ನಮ್ಮ ಸಾಂಸ್ಕೃತಿಕ ಇತಿಹಾಸದ ಸಂಗತಿಗಳನ್ನು ಕುರಿತು ಬರೆದ 'ಕಂನಾಡ ಕತೆ' ಎಂಬ ಗ್ರಂಥದಲ್ಲಿ ಇದರ ವಿಶೇಷ ವಿವರ ಬಂದಿದೆ.

ಉತ್ತರ ಕರ್ಣಾಟದಲ್ಲಿ ವಿಜಾಪುರ ಜಿಲ್ಲೆಯಲ್ಲಿ ಕನ್ನೂರು ಇದ್ದು ಅದನ್ನು ಕಣ್ಣೂರೆಂದೂ ಹೇಳುವ ಯಾದವರ ಕಾಲದ ಶಾಸನಗಳಿವೆ * ಧಾರ ವಾಡ ಜಿಲ್ಲೆಯಲ್ಲಿ ಕನ್ನವಳ್ಳಿಯಿದೆ. ಇಲ್ಲಿಯೂ ಶಾಸನಗಳಿವೆ. ಕನ್ನೇಶ್ವರ ಎಂಬ ಊರು ಉಂಟು. ತೈಲಪನ ಕಾಲದ (೯೭೭) ಶಿಲಾಲೇಖವಿದೆ ಕನ್ನಡ ಜಿಲ್ಲೆಯಲ್ಲಿ (ಉತ್ತರ ದಕ್ಷಿಣ ಎರಡೂ) ಈ ನಾಡಿನ ಪ್ರಾಚೀನ ಸಂಸ್ಕೃತಿಯ ಅನೇಕಾನೇಕ ಅವಶೇಷಗಳು ಇನ್ನೂ ಬಹಳ ಮಟ್ಟಿಗೆ ಪೂರ್ವಸ್ಥಿತಿಯಲ್ಲಿಯೆ ಉಳಿದುಕೊಂಡಿದ್ದು ಅವು ಅಭ್ಯಸನೀಯವಾಗಿವೆ. ಕನ್ನಂಬಾಡಿ, ಕನ್ನೂರು, ಕನ್ನವಳ್ಳಿ ಮೊದಲಾದ ಊರುಗಳ ಹೆಸರುಗಳು ಕನ್ನ ಅಥವಾ ಕಣ್ಣರ ಪ್ರಾಚೀನ ಅಸ್ತಿತ್ವದ ಸಾಕ್ಷಿಯನ್ನು ಹೇಳುತ್ತವೆಂದರೆ ಕೆಲರಿಗೆ ಸಂದೇಹ ವುಂಟಾಗಬಹುದು. ಆದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಒಂದು ಹಳ್ಳಿಯ ಹೆಸರು ಈ ಸಂದೇಹವನ್ನು ಉಳಿಯಗೊಡುವುದಿಲ್ಲ. ಏಕೆಂದರೆ, ಆ ಸ್ಥಳದ ಹೆಸರು ಕಣ್ಣರಪಾಡಿ ಎಂಬುದಾಗಿದೆ. ಆದುದರಿಂದ ಈ ಕಣ್ಣರಪಾಡಿಯಂತೆ ಉಳಿದುವುಗಳನ್ನೂ ಕನ್ನರಪಳ್ಳಿ, ಕಣ್ಣರ ಊರು, ಕನ್ನರಪಾಡಿ (ಬಾಡಿ), ಕಣ್ಣರಬೀಡು (ಕಣ್ಣವೀಡು) ಎಂದೇ ಬಿಡಿಸಿ ಅರ್ಥಮಾಡಲು ಏನು ಅಡ್ಡಿ ?

ಇವೆಲ್ಲ ಊರ ಹೆಸರುಗಳಾದುವು. ಆದರೆ ಇದಕ್ಕೂ ವಿಸ್ತೀರ್ಣವಾದ ಪ್ರದೇಶಕ್ಕೆ—ದೇಶವಿಭಾಗಕ್ಕೆ ಅಥವಾ ದೇಶಕ್ಕೆ ಇದೇ ಬಗೆಯಾಗಿ ಕನ್ನ ಅಥವಾ ಕಣ್ಣ ಎಂಬ ಹೆಸರಿದ್ದುದೂ ಶಾಸನಗಳಿಂದ ನಿಶ್ಚಿತವಾಗಿ ಗೊತ್ತಾಗುತ್ತಿರುವು ದರಿಂದ ಈ ಜನಾಂಗದ ಅಸ್ತಿತ್ವದ ವಿಷಯಕ್ಕೆ ಸಂದೇಹಪಟ್ಟುಕೊಳ್ಳಲು ಅವಕಾಶವೆ ಇಲ್ಲ. ಸುಮಾರು ಕ್ರಿ. ಶ. ೮೦೦ನೆಯ ವರುಷದ ಶಾಸನವು. ನೃಪತುಂಗದೇವನ ಕಾಲದ್ದು.† 'ಸಾಮಿ ಶರ್ಬರಸ ಕೊಟ್ಟೋರ್' ಎಂಬಲ್ಲಿ ಪೂರ್ವದ ಹಳೆಗನ್ನಡ ಕ್ರಿಯಾಪದ ಪ್ರಯೋಗವಿದೆ. ಈ ಹಳೆಯ ಶಾಸನದಲ್ಲಿ ಕೆಲವು ನಾಡುಗಳನ್ನು ಹೇಳಿದೆ. ಗಂಗವಾಡ, ಬಳೆಯವಾಡ ಇವುಗಳೊಡನೆ ಕನ್ನವಾಡ ಎಂಬುದೂ ಬಂದಿದೆ! ಇದನ್ನು ಕುರಿತು ಬರೆದ ಟಿಪ್ಪಣಿಯಲ್ಲಿ ಡಾ. ಹಟ್ಟಿಯ ಕೃಷ್ಣರು ಇದು ಕನ್ನ ಎಂಬ ದೇಶ Kanna Vada or Kanna country ಎಂದು ಹೇಳಿರುವರು. ಅಲ್ಲದೆ ಮೊದಲನೆಯ ಚಲುಕ್ಯ ವಿಕ್ರಮನ ಕಾಲದ (೬೭೦) ಒಂದು ಶಾಸನದಲ್ಲಿಯೂ ಇದೇ ಬಗೆಯಾದ ಒಂದು ಹೆಸರು

* SIE. 1934· No· 154

† MAR. 1929, p· 209-10

ಬಂದಿರುವುದಾಗಿ ಅಪ್ಪಣೆಕೊಡಿಸಿದ್ದಾರೆ.

ಡಾ. ಎನ್. ವೆಂಕಟರಮಣಯ್ಯನವರು ತಮ್ಮ ಒಂದು ಲೇಖನದಲ್ಲಿ ಶಾಸನಗಳಲ್ಲಿ ಬಂದ 'ಕನ್ನಾಡು' ಎಂಬ ಎರಡು ಉಲ್ಲೇಖಗಳನ್ನು ಕೊಟ್ಟಿದ್ದಾರೆ. ಕ್ರಿ. ಶ. ೧೧೧೫ ರ ಯೆಲ್ಪನೂರ ಶಾಸನ. ಅದರಲ್ಲಿ ಮಹಾಶ್ವೇರ ರಡ್ಡಿಯು ಕನ್ನಾಡನಾಳುತ್ತಿದ್ದನೆಂದಿದೆ. ೧೫೧೩ ರ ಶ್ರೀಶೈಲ ಶಾಸನ. ವಿಜಯನಗರದ ಮಲ್ಲಿಕಾರ್ಜುನನ ಕಾಲದ್ದು. ಅದರಲ್ಲಿ ಕಮ್ಮನಾಡು' ಕನ್ನಾಡುಗಳ ಹೆಸರಿದೆ. ಡಾ. ಎನ್. ವೆಂಕಟರಮಣಯ್ಯನವರೂ ಬಾದಾಮಿಯ 'ರಣರಸಿಕ' ವಿಕ್ರಮನ ಶಾಸನವನ್ನು ಉಲ್ಲೇಖಿಸಿದ್ದಾರೆ. ಅದರಲ್ಲಿಯ 'ಕಣ್ಣವಿಷಯ' ವೆಂಬ ಹೆಸರಿನ ಮೇಲಿಂದಲೆ ಒಂದು ಸಿದ್ಧಾಂತ ಮಾಡಿದ್ದಾರೆ. ಅದೇನೆಂದರೆ:

> It has already been pointed out that in ancient times a small district lying at the foot of the Shrishaila hill was called ಕಣ್ಣವಿಷಯ, ಕನ್ನಾಡು, and ಕರ್ಣಾಟ ಸೀಮಾ. Now Mr. Narasimhacharya correctly derives the word Karnata from Kannada, though he is not able to establish its identity. I believe that the country ಕನ್ನಾಡು from which the ಕನ್ನಡ language is said to have obtained its name, is identical with ಕನ್ನಾಡು (ಕಣ್ಣವಿಷಯ=ಕರ್ಣಾಟ ಸೀಮಾ) that lay at the foot of the Shrishaila hill. The Canarese people appear to have obtained the name of their country and language from this small district.

ಡಾ. ಎನ್. ವೆಂಕಟರಮಣಯ್ಯನವರ ಅಭಿಪ್ರಾಯದಂತೆ ಶ್ರೀಶೈಲದ ಸುತ್ತಲಿನ ಸ್ವಲ್ಪ ಪ್ರದೇಶಕ್ಕೆ ಪ್ರಾಚೀನ ಕಾಲದಲ್ಲಿ ಕನ್ನ ಅಥವಾ ಕಣ್ಣವೆಂಬ ಹೆಸರಿತ್ತು; ಈ ಸಣ್ಣ ಪ್ರದೇಶದ 'ಕನ್ನನಾಡು' ಎಂಬ ಹೆಸರೆ ಇಡಿ ಕರ್ನಾಟಕಕ್ಕೂ ಅನ್ವಯಿಸಿತು.

* AHSJ. X. p. 95

ಈ ಉಲ್ಲೇಖಗಳಿಂದ ಸ್ಥಳವಾಚಕ ಹೆಸರುಗಳಲ್ಲಿ ಕನ್ನ ಮತ್ತು ಕಣ್ಣ ಎಂಬ ಎರಡೂ ಪರಂಪರೆಗಳು ಪ್ರಾಚೀನಕಾಲದಿಂದಲೂ ಸಾಗಿಬಂದಿವೆಯೆಂಬ ಮಾತು ಸ್ಪಷ್ಟವಾಗುತ್ತದೆ. ಮೇಲ್ಕಾಣಿಸಿದ ಬೇರೆ ಬೇರೆ ಕಾಲದ ಬೇರೆಬೇರೆ ಉಲ್ಲೇಖಗಳಿಂದ 'ಕನ್ನ' ಅಥವಾ 'ಕಣ್ಣ' ಎಂಬ ಪೂರ್ವಪದವು ಪಾಡಿ (ಬಾಡಿ), ವೀಡು, ಊರು, ವಾಡ, ವಿಷಯ, ನಾಡು ವೆಂಬೀ ಬಗೆಯ ಒಂದಿಲ್ಲೊಂದು ಉತ್ತರಪದದೊಡನೆ ಕೂಡಿಕೊಂಡು ಪ್ರದೇಶವಾಚಕ ಅರ್ಥವನ್ನು ಸೂಚಿಸುತ್ತಿದ್ದುದರ ಮನವರಿಕೆಯಾಗದೆ ಇರದು. ಇಷ್ಟೆಲ್ಲ ಬೇರೆಬೇರೆ ಉದಾಹರಣಗಳು ದೊರೆತಿರುವುದರಿಂದ 'ಕನ್ನಡ' ಈ ಶಬ್ದದೊಳಗಿನ ಪೂರ್ವಪದದ ವಿಷಯಕ್ಕೂ ಇನ್ನುಮೇಲೆ ಮತಭೇದಕ್ಕೆ ಆಸ್ಪದವೇ ಉಳಿಯುವುದಿಲ್ಲ. ಉತ್ತರಪದದ ಬಗ್ಗೆ ಮತಭೇದಗಳೆಲ್ಲ ಮುಗಿದು ಮೊದಲೆ ಒಮ್ಮತವು ಆಗಿಬಿಟ್ಟಿದೆ. ಆದುದರಿಂದ ಕನ್ನ+ನಡ ಎಂದು, ಕನ್ನಡ ಶಬ್ದವನ್ನು ಬಿಡಿಸಿ ಹೇಳಲು ಇನ್ನುಮೇಲೆ ಯಾರ ನಾಲಗೆಯೂ ತಡವರಿಸುವ ಕಾರಣವಿಲ್ಲ.

'ಕನ್ನ' ಅಥವಾ ಕಣ್ಣ ಎಂಬುದು ಹಿಂದಕ್ಕೆ ಶ್ರೀಶೈಲದ ಸುತ್ತಲಿನ ಭಾಗದ ಹೆಸರು. ಮುಂದೆ ಕಾಲಾಂತರದಲ್ಲಿ ಇಡಿ ನಾಡಿಗೆಲ್ಲ ಆ ಹೆಸರೆ ಪ್ರಾಪ್ತವಾಯಿತೆಂದು ಡಾ. ಎನ್. ವೆಂಕಟರಮಣಯ್ಯನವರು ಊಹಿಸುತ್ತಾರೆ ಆದರೆ ಹೀಗೆ ಊಹಿಸಬೇಕಾದರೆ, ಈ ಊಹೆಯು ಬಲಪಡಬೇಕಾದರೆ ಡಾ. ಎನ್. ವೆಂಕಟರಾಯರು ಇನ್ನೊಂದೆರಡು ಸಂಗತಿಗಳನ್ನು ಸಿದ್ಧಮಾಡಿ ತೋರಿಸಬೇಕಾಗುವುದು. (೧) ಕನ್ನ (ಕಣ್ಣ) ಎಂದು ಈ ನಾಡಿಗೆ ಅಥವಾ ನಾಡಿನ ವಿಶಿಷ್ಟ ಭಾಗಕ್ಕೆ ಹೆಸರು ಬಂದ ಕಾರಣವೇನು ? ಕನ್ನ ಅಥವಾ ಕಣ್ಣ ಶಬ್ದದ ಅರ್ಥವೇನು ? ಇದನ್ನು ಇವರು ಹೇಳುವುದನ್ನೆ ಮರೆತಿರುವರು. (೨) ಪ್ರಾಚೀನ ಕಾಲಕ್ಕೆ ಶ್ರೀಶೈಲದ ಸುತ್ತಲಿನ ಭಾಗವೇ ಕರ್ಣಾಟದ ಮುಖ್ಯ ಕೇಂದ್ರವಾಗಿತ್ತು. ಅಲ್ಲಿಯ ಜನಗಳು ಈ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಹೋಗಿ, ಗೆದ್ದು ಅಥವಾ ಬೇರೆ ತೆರನಾಗಿ ಅಲ್ಲಿ ತಮ್ಮ ವರ್ಚಸ್ಸನ್ನು ಸ್ಥಾಪಿಸಿದರು. ಆದರಿಂದ ಇಡೀ ನಾಡಿಗೆ ಕನ್ನಾಡು—ಕನ್ನಡ ಎಂಬ ಹೆಸರು ಉಂಟಾಯಿತು, ಎಂದು ಡಾ. ಎನ್. ವೆಂಕಟರಮಣಯ್ಯನವರು ಸ್ಥಿರಪಡಿಸುವ ವರೆಗೆ ಅವರ ಊಹೆಯಲ್ಲಿ ಹುರುಳಿಲ್ಲವೆಂದು ಹೇಳಬೇಕಾಗುತ್ತದೆ. ಕನ್ನ ಅಥವಾ ಕಣ್ಣ ಎಂಬ ಹೆಸರಿನ ಸ್ಥಳಗಳು ಇಡಿ ಕರ್ಣಾಟದ ಬೇರೆ ಬೇರೆ ಭಾಗಗಳಲ್ಲಿ

ಕಾಣಿಸಿಕೊಳ್ಳುತ್ತಿರುವುದರಿಂದ ಶ್ರೀಯುತರ ಮೇಲಣ ತರ್ಕವು ಅರ್ಥವಿಹೀನ ನಾಗಿದೆ.

ಇನ್ನು ಕನ್ನ ಅಥವಾ ಕಣ್ಣವೆಂಬುದು ಜನಾಂಗವಾಚಕ, ಎಂಬುದು ಮನು ಮತ್ತು ಮತ್ಸ್ಯಪುರಾಣಗಳ ಆಧಾರದಿಂದ ಈವೊದಲೆ ನಿಶ್ಚಿತವಾಗಿದೆ. 'ಕರ್ಣ' ಈ ಹೆಸರಿನ ಗೋವಳರ ಜಾತಿಯೂ ಆಂಧ್ರದಲ್ಲಿದೆ. 'ಕರ್ಣ' sub division of Gollas ಎಂದು ಥರ್ಸ್ಟನ್‌ನು ಹೇಳುತ್ತಾನೆ.* 'ಕರ್ಣ' ಕುಲದ ಹಲವು ಜಮೀನ್ದಾರರೂ, ಮಧ್ಯಮ ವರ್ಗದವರೂ ಇದ್ದು ತಾವು ಕ್ಷತ್ರಿಯ ಕುಲದವರೆಂದೂ ಕರ್ಣಾಟದತ್ತಣಿಂದ ಇತ್ತ ಬಂದವರೆಂದೂ ಐತಿಹ್ಯವಿರುವುದಾಗಿ ಆಂಧ್ರಲೇಖಕರಾದ ಶ್ರೀ. ಜಿ. ಆರ್. ವರ್ಮಾ ಅವರು ಬರೆಯುತ್ತಾರೆ. ವೈಲಾರವು ಈ ಜನದ ಕುಲದೈವತ. ಇದು ಆಂಧ್ರನಾಡಿನ ದೇವತೆಯಲ್ಲ.‡ ಆದುದರಿಂದ ಕರ್ಣವೆಂಬುದು ಕಾಲ್ಪನಿಕ ಜನವೆಂದೆನ್ನುವುದು ಇನ್ನು ಕೇವಲ ದುರಾಗ್ರಹವೆನಿಸದೆ ಇರಲಾರದು. ಹಾಗಾದರೆ ಈ ಜನಾಂಗಕ್ಕಾದರೂ ಕನ್ನ ಅಥವಾ ಕಣ್ಣ ಎಂಬ ಹೆಸರು ಏಕೆ ಬಂದಿತು? ಕನ್ನ ಅಥವಾ ಕಣ್ಣ ಎಂದರೇನು ಅರ್ಥ!

ಈ ಮಾತಿನ ನಿರ್ಣಯವಾಗುವುದಕ್ಕೆ ನ ಅಥವಾ ಣ ಕಾರಗಳ ಚರ್ಚೆಯು ಸ್ವಲ್ಪ ಸಹಾಯಕವಾಗಿರುವುದರಿಂದ ಮೂಲಶಬ್ದವು ಕನ್ ಎಂದಿದೆಯೆ? ಕಣ್ ಎಂದಿದೆಯೇ? ಎಂಬುದನ್ನು ನಿರ್ಧರಿಸುವುದು ಅವಶ್ಯಕ. ನ–ಣಗಳ ಬಗ್ಗೆ ಸುಮ್ಮನೆ ವಾದ ಬೆಳೆಸುವುದು ವ್ಯರ್ಥವೆಂದು ನನ್ನ ಎಷ್ಟೋ ಮಿತ್ರರಂತೆ ನಾನೂ ಹೇಳಬಲ್ಲೆ. ಆದರೆ ಈ ನ–ಣಗಳ ಮೂಲದಲ್ಲಿಯೆ ಅರ್ಥವು ಅಡಗಿದ್ದರೆ ಅದನ್ನು ಹುಡುಕುವುದು ವ್ಯರ್ಥವೆ?

ಕೆಲರು ಭಾವಿಸಿರುವಂತೆ ನ-ಣಗಳ ತೊಡಕು ಇಂದು-ನಿನ್ನೆಯದಲ್ಲ. ಬಹಳ ಹಳೆಯದು. ಸಂಸ್ಕೃತದವರಿಂದಲೆ ಣಕಾರವು ರೂಢವಾಯ್ತೆಂಬ ಗ್ರಹಿಕೆಯು ಸಂಪೂರ್ಣ ಸತ್ಯವಲ್ಲ. ಈ ನ-ಣಗಳು ಎರಡೂ ತಮ್ಮ ಹಕ್ಕನ್ನು ಹೇಳುವುದಕ್ಕೆ ಕಾರಣವೇನಿರಬಹುದು? ನ ಮತ್ತು ಣ ಗಳೆರಡೂ ಅಲ್ಲಿ ಇರದಿರುವ ಸಂಭವವು ಇಲ್ಲದಿಲ್ಲ ಅಥವಾ ನ ಮತ್ತು ಣಗಳೆರಡಕ್ಕೂ ತಮ್ಮ

* CTS- Vol. III, p. 251.

‡ ಜ. ಕ. ೧೯೪೬ ಡಿಸೆಂಬರ ಸಂಚಿಕೆ.

ಹಕ್ಕನ್ನು ಹೇಳಲು ಅವಕಾಶವಿರುವ ಬೇರೊಂದು ಅಕ್ಷರವು ಮೊದಲು ಆ ಸ್ಥಳ ದಲ್ಲಿರಬೇಕು. ಹಾಗಾದರೆ ಆ ಅಕ್ಷರವು ಆವುದು? ತಮಿಳಿನ ನೆರವಿನಿಂದ ಇದನ್ನು ಗೊತ್ತುಪಡಿಸಬಹುದಾಗಿದೆ. ತಮಿಳಿನಲ್ಲಿ ನ ಮತ್ತು ಣ ಗಳ ಹೊರತು ಇನ್ನೂ ಒಂದು ಅನುನಾಸಿಕಾಕ್ಷರವುಂಟು. ಅವರು ಅದನ್ನು ಓಗೆ ಬರೆದು ತೋರಿಸುವರು. ಇದನ್ನು ಈಗ ಹೇಗೆ ಉಚ್ಚರಿಸುವರೆಂದು ಕೇಳಲು ಉಭಯ ಭಾಷಾವಿಶಾರದರಾದ ಪ್ರೊ. ಚೆನ್ನಕೇಶವ ಅಯ್ಯಂಗಾರ್‍ಯರು ನ ಕಾರದಂತೆ ಎಂ ದು ತಿಳಿಸಿದರು. ಸ್ಪಷ್ಟವಾಗಿ ಅಲ್ಲದಿದ್ದರೂ ಪ ದ ಒಲವು ಣ ಕಾರದ ಕಡೆಗೂ ಕೆಲಮಟ್ಟಿಗೆ ಇರಬೇಕೆಂದು ಸಂದೇಹ. ನನಗೆ ಇನ್ನೂ ಇದೇ ಸಂದೇಹ: ಉಚ್ಚಾರದಲ್ಲಿ ಹೆಚ್ಚು ಕಡಿಮೆಯ ಇಲ್ಲದಿದ್ದರೆ ನ-ಣಗಳಿರುವಾಗ ಮತ್ತೆ ಪ ಕಾರದ ಅವಶ್ಯಕವೇನು? ನ ಮತ್ತು ಣ ಕಾರಗಳಿಂದ ತೋರಿಸಲು ಆಗದ ಅವುದೊ ಒಂದು ವಿಶಿಷ್ಟ ಉಚ್ಚಾರವನ್ನು ಸೂಚಿಸುವುದಕ್ಕಾಗಿಯೇ ಪ ಕಾರ ವು ತಲೆದೋರಿರಬೇಕಲ್ಲವೆ? ಹಳಗನ್ನಡದ ಱ ಮತ್ತು ೞ ಎಂಬ ಹೆಚ್ಚಿನ ಅಕ್ಷರ ಗಳು ಆಗ ಏಕೆ ರೂಢಿಯಲ್ಲಿದ್ದವು? ಈಗ ಏಕೆ ಮೂಲೆಗುಂಪಾದವು? ರ ಮತ್ತು ಳ ಕಾರಗಳಲ್ಲದೆ ಇನ್ನೂ ಒಂದು ಬಗೆಯ ಱ ಮತ್ತು ೞ ಗಳ ಉಚ್ಚಾರಗಳು ಬಳಿಕೆಯಲ್ಲಿದ್ದುದರಿಂದಲೆ ಅವು ಆಗ ಜೀವಂತವಾಗಿದ್ದವು. ಇಂದು ಆ ಉಚ್ಚಾರಗಳು ಮರೆತು ಹೋದವು; ಱ ೞ ಕಾರಗಳು ಕಣ್ಮರೆ ಯಾದುವು. ಇದರಂತೆ ಇಂದು ನ, ಣ ಮತ್ತು ನ ಕಾರಗಳಲ್ಲಿದ್ದ ಸೂಕ್ಷ್ಮ ಉಚ್ಚಾರ ಭೇಧವು ಮರೆತು ಹೋಗಿರಬೇಕು.

ತಮಿಳಿನಲ್ಲಿ ಕನ್ನಡ ಎಂದು ಬರೆವುದಾದರೆ ತವರ್ಗದ ನ ಕಾರವನ್ನು ಉಪಯೋಗಿಸುವುದಿಲ್ಲ. ಈ ಅವರ್ಗೀಯ ನ ಕಾರವನ್ನು ಬಳಸುವರು. ಕಣ್ಣಡ ಎಂದು ಬರೆಯುವರು*(ಗನೆಯದು ಅಕಾರ ಸೇರದಿರುವ ವ್ಯಂಜನ) ನ ಕಾರ ಣ ಕಾರಗಳ ನಡುವಿನದೊಂದು ಉಚ್ಚಾರವು ಈ ಅಕ್ಷರಕ್ಕಿರಬೇಕೆಂದು ತೋರುತ್ತದೆ. ಹಾಗಿಲ್ಲದಿದ್ದರೆ ಈ ನ ಣ ಕಾರಗಳ ಸಂದಿಗ್ಧತೆಗೆ ಕಾರಣವೆ ಇದ್ದಿಲ್ಲ. ಇದನ್ನು ಕನ್ನಡದಲ್ಲಿ ಹೇಗೆ ಬರೆದುತೋರಿಸುವುದು? **ಕೆಂನಡ** ಎಂದರೆ ಈ ತೊಡಕು ಸ್ವಲ್ಪಮಟ್ಟಿಗಾದರೂ ಬಗೆಹರಿವಂತಿದೆ. ಕನ್ನಡ

* Tamil Lexicon.

ಭಾಷೆಯಲ್ಲಿ ಶಬ್ದಗಳ ಕೊನೆಯ ಕೆಲವು ಅಕ್ಷರಗಳಿಗೆ ಒಮ್ಮೊಮ್ಮೆ ಆದೇಶವಾಗಿ ಬಿಂದುವು ಬರುವುದುಂಟು. ಈ ಬಿಂದುವಿನ ಉಚ್ಚಾರವನ್ನು ಆಯಾ ಸ್ಥಳಗಳಲ್ಲಿ ಹೇಗೆ ಮಾಡಬೇಕೆಂಬುದನ್ನು ರೂಢಿಯು ಬಲದಿಂದ ಅರಿತುಕೊಳ್ಳಬೇಕಾಗುತ್ತದೆ. ಅದಕ್ಕೆ ನಿಶ್ಚಿತವಾದ ಕಟ್ಟುಕಟ್ಟಳೆಗಳಿಲ್ಲ. ಉದಾ:—ಕಿಸು=ಕೆಂ; ಕೆಂನೆ; ಕೆಂಡ; ಕೆಂಪು; ಕೆಂಚ; ಮುಂತಾದವು. ಕಂನಾಡು ಇಲ್ಲಿ ಬಿಂದುವಿನ ಮುಂದೆ ತವರ್ಗದ ಅಕ್ಷರವಿರುವುದರಿಂದ ಬಿಂದುವು ಆ ವರ್ಗದ ಅನುನಾಸಿಕಾಕ್ಷರವಾಗಿ ಪರಿಣಮಿಸುವುದೆ ಹೆಚ್ಚು ಸ್ವಾಭಾವಿಕ. ಇವರಂತೆ ಕನ್ನಾಡು-ಕನ್ನಡವಾದುದು ಸರಿಯೇ. ಆದರೆ ಕೆಲರು ಕಣ್ಣಾಡು ಎಂದೂ ಉಚ್ಚರಿಸಿದರೆಬಾಯಿ ಹಿಡಿಯಲಿಕ್ಕಾಗುವುದಿಲ್ಲ ನಾಡ+ನುಡಿ, ನಾಣ್ಣುಡಿ=ನಾಳ್ನುಡಿ, ನಾಣ್ಣುಡಿ ಆಗುವಂತೆ ಕಣ್ಣಾಡು ಮುಂದೆ ಕಣ್ಣಾಡು ಕಣ್ಣವೂರು ಎಂಬೀಬಗೆಯ ಪ್ರಯೋಗಗಳಾದುವು. ಅಥವಾ ಣ ಕಾರದ ಪರಂಪರೆಗೆ ಇನ್ನೂ ಒಂದು ಕಾರಣವಿರಬಹುದು. ಅದರ ವಿಚಾರವು ಮುಂದಿನ ಅಧ್ಯಾಯದಲ್ಲಿ ಬರುವುದು.

ನ ಕಾರದ ಉಚ್ಚಾರವು ಕನ್ನಡದ ಬಿಂದುವಿನಂತೆಯೆ ಇರಬೇಕೆನ್ನುವುದಕ್ಕೆ ಇನ್ನೊಂದು ಕಾರಣವುಂಟು. ಬಿಂದುವನ್ನು ನ್, ಣ್ ಗಳಂತೆ ಮ್ ಎಂದೂ ಉಚ್ಚರಿಸ ಬಹುದು. ಕನ್ನಾಡಿನಂತೆ ಕಮ್ಮನಾಡೂ ಇದೆ. ಕನ್ನ ಅಥವಾ ಕಣ್ಣ ಹೆಸರಿನ ಜನಾಂಗವಿದ್ದಂತೆ 'ಕಮ್ಮ' ಎಂಬ ಸಂಗಡವೂ ಉಂಟು. ಕನ್ನರು ಕನ್ನಡದ ಜೀವಾಳ; ಕಮ್ಮರು ಆಂಧ್ರದೇಶದ ಪ್ರಾಣ. ಕಮ್ಮರೂ ದ್ರಾವಿಡ ವರ್ಗಕ್ಕೆ ಸೇರಿದವರೆಂದು ಆಧುನಿಕ ತಜ್ಞರ ಅಭಿಪ್ರಾಯವಿದೆ. ಇವರನ್ನು ಕುರಿತು ಮಿ. ಫ್ರಾನ್ಸಿಸರು ೧೯೦೧ರ ಜನಗಣನೆಯ ವರದಿಯಲ್ಲಿ ಬರೆಯುವುದು ಏನಂದರೆ: *

> The Kammas, Kapus or Raddis, Velamas, and Telagus—all four of these castes closely resemble one another in appearance & customs and seem to have brached off from one and the same Dravidian stock. Oriqinally soldiers by proffession, they are now mainly

* CTS. III. p. 94

agriculturists and traders and some of them in the north are Zamindars.

ಈ ವರ್ಣನೆಯನ್ನೋದುವಾಗ 'ಬಂಟ' — ನಾಡವರ ನೆನಪಾಗದೆ ಇರದು. ನಾಡವರೂ ದ್ರಾವಿಡವರ್ಗಕ್ಕೆ ಸೇರಿದವರೆಂದು ಬಲ್ಲಿದರ ಅಭಿಮತ. ಆದ್ದರಿಂದ ಮೂಲ ಈ ಕನ್ ಅಥವಾ ಕಂ ಎಂಬ ಜನಾಂಗವೆಲ್ಲವೂ ಒಂದು. ಕನ್ನ ಅಥವಾ ಕಣ್ಣ ಎಂಬಂತೆ ಕಮ್ಮ ಎಂಬುದೂ ಇದೇ ಜನಾಂಗ ನಿಜಗುಣ ಶಿವಯೋಗಿಗಳು ಕನ್ನಡ ಮತ್ತು ಕಮ್ಮ ಎಂದು ಎರಡು ಕುಲಗಳ ಹೆಸರನ್ನು ಹೇಳಿದ್ದಾರೆ.

ತಮಿಳಿನಲ್ಲಿಯ ಣ ( ಅವಗ್ರೀಯ ನಕಾರವು ) ಶಬ್ದದ ಆದಿಯಲ್ಲಿ ಬರುವುದಿಲ್ಲ. ಆದುದರಿಂದ ಕನ್ನಡದೊಳಗಿನ ಬಿಂದುವಿನಂತೆಯೆ ತಮಿಳ ಣಕಾರದ ಉಚ್ಚಾರವೂ ಇರಬೇಕೆಂದೆನಿಸುತ್ತದೆ. ಏಕೆಂದರೆ, ಬಿಂದುವು ಶಬ್ದದ ಆರಂಭದಲ್ಲಿ ಬರುವುದೇ ಸಾಧ್ಯವಿಲ್ಲ. ಇನ್ನೂ ಒಂದು ವಿಶೇಷ: ಹಲವೆಡೆಗಳಲ್ಲಿ ತಮಿಳಿನಲ್ಲಿಯೂ ಶಬ್ದಗಳ ಕೊನೆಯ ನ್ ಎಂಬುದು ಯಾವುದೊಂದು ಅಕ್ಷರಕ್ಕೆ ಆದೇಶವಾಗಿ ಬರುವುದುಂಟು. ಆದುದರಿಂದ ಕಂನಡ-ಕಂನಾಡು ಇದರೊಳಗಿನ ಪೂರ್ವಪದವಾದ ಕಂ—ಕನ್ನ ಎಂಬ ಜನಾಂಗವಾಚಕ ಶಬ್ದದ ಕೊನೆಯ ಅಕ್ಷರವು ಯಾವುದಾದರೂ ಒಂದು ಅಕ್ಷರಕ್ಕೆ ಆದೇಶವಾಗಿ ಬಂದಿರಬಹುದೆ? ಯಾವ ಅಕ್ಷರದ ಸ್ಥಳದಲ್ಲಿ(ಂ)ನ್ ಇದು ಬಂದಿರಬಹುದೆಂಬುದನ್ನು ಕಂಡುಹಿಡಿಯಲು ಸಾಧ್ಯವಾದರೆ ಕನ್ನ(ಣ್ಣ) ಎಂಬ ಈ ಜನಾಂಗವಾಚಕ ಶಬ್ದದ ನಿಜವಾದ ಅರ್ಥವು ಬೇಗನೆ ಗೊತ್ತಾಗಿ ಆ ಮೇಲೆ ಈ ಜನಾಂಗದ ಆಗಿನ ಸ್ಥಿತಿಗತಿಗಳನ್ನು ಅರಿತುಕೊಳ್ಳಲು ಸುಲಭವಾಗಬಹುದು.

## ೬. ಕನ್ನ (ಣ್ಣ) ರ ಪೂರ್ವಪೀಠಿಕೆ.

ಹಿಂದಿನಪ್ರಕರಣದ ಕೊನೆಯಲ್ಲಿ ಸೂಚಿಸಿದ ಮೇರೆಗೆ ಕನ್ ಅಥವಾ ಕಂ ಈ ಶಬ್ದದ ಕೊನೆಯ ಞ್ ಇಲ್ಲವೆ 'ಂ' ವು ಯಾವ ಅಕ್ಷರದ ಬದಲು ಬಂದಿರ ಬಹುದು? ಎಂಬುದೊಂದು ಸಮಸ್ಯೆಯಾಗಿದೆ. ಕನ್ನ ಅಥವಾ ಕಣ್ಣ ಹೆಸರಿನ ಊರುಗಳಿವೆ; ಸೀಮೆಗೂ ಹೆಸರಿದೆ; ಈ ಹೆಸರಿನ ಶಿವಾಲಯುಗಳಿವೆ. ಕಣ್ಣಪ್ಪ, ಕನ್ನಮಾತ್ಯ ಎಂದು ಮುಂತಾಗಿ ಜನಗಳ ಹೆಸರುಗಳಿವೆ; ಜನಾಂಗದ ಹೆಸರಿದೆ. ಇದೆಲ್ಲವೂ ಬರಿ ಅಹುದು ಬಹುದಿನ ಹಾರಿಕೆಯ ಮಾತಲ್ಲ. ಸ್ಮೃತಿ, ಪುರಾಣ ಗಳು, ಇತಿಹಾಸ, ಮತ್ತು ಶಾಸನಾದಿಗಳಿಂದ ಸಂಪೂರ್ಣವಾಗಿ ಸಿದ್ಧವಾದ ಸಂಗತಿ. ಇಷ್ಟೊಂದು ಬಗೆಬಗೆಯಾಗಿ ವ್ಯವಹಾರದಲ್ಲಿದ್ದ ಕನ್ನ(ಣ್ಣ) ಶಬ್ದಕ್ಕೆ ಅರ್ಥವೇ ಇದ್ದಿಲ್ಲವೆಂದು ಭಾವಿಸುವುದು ಸರಿಯಾದೀತೆ? 'ಕಣ್ಣರ್' ಜನಾಂಗ ವನ್ನು ಮೊಹೆಂಜೊದಾರೋದ ಅತಿ ಪ್ರಾಚೀನ ಶಾಸನಗಳಲ್ಲಿ ಕಣ್ಣಿನ ಚಿತ್ರ ದಿಂದ ಸೂಚಿಸಿರುವರೆಂದು ಫಾದರ ಹಿರಾಸರ ಅಭಿಪ್ರಾಯವಿದೆ; ಹಾಗಾದರೆ ಈ ಹೆಸರಿನ ಮೇಲಿಂದ ಈ ಜನಾಂಗಕ್ಕೆ ಕಣ್ಣುಗಳಿದ್ದುವೆಂದು ಅರ್ಥವೊ? ಇದು ಕೇವಲ ಅಪಾರ್ಥ. ಈ ಜನಾಂಗದ ಹೆಸರು ಕನ್ನ ಎಂದು ಇದ್ದುದ ರಿಂದ ಕಣ್ಣಿನ ಚಿತ್ರದಿಂದ ಇವರನ್ನು ಉಲ್ಲೇಖಿಸಿರಬೇಕಲ್ಲದೆ ಇವರಿಗೆ ಮಾತ್ರ ಕಣ್ಣುಗಳಿದ್ದುವೆಂದು ಅದರಿಂದ ಅರ್ಥ ಮಾಡಲಾಗದು. ಮೂಗಪ್ಪ ಎಂದು ತೊಟ್ಟಿಲಲ್ಲಿಟ್ಟ ಹೆಸರಿನ ಒಬ್ಬ ಮನುಷ್ಯನ ಮೂಗು ದೊಡ್ಡದಿಲ್ಲದಿದ್ದರೂ ಆತ ನನ್ನು ಚಿತ್ರಲಿಪಿಯಿಂದ ಬರೆದು ತೋರಿಸಬೇಕಾದರೆ ವಿಶಿಷ್ಟ ಮೂಗಿನ ವ್ಯಕ್ತಿ ಯನ್ನೇ ಮಾಡಬೇಕಾಗಬಹುದು. ಅದರಂತೆಯೆ ಈ ಕನ್ ಜನಾಂಗದ ಮೊಹೆಂಜೊದಾರೋದ ಉಲ್ಲೇಖವು ಇರಬೇಕು. ಆದುದರಿಂದ ಕನ್ನ ಅಥವಾ ಕಣ್ಣ ಎಂಬುದಕ್ಕೆ ಕಣ್ಣು ಎಂದು ಅರ್ಥವಿದ್ದಿತೆಂದು ಗ್ರಹಿಸಲಿಕ್ಕಾಗು ವುದಿಲ್ಲ.

ಹಾಗಾದರೆ ಈ ಹೆಸರಿನ ಅರ್ಥವೇನು? ಕನ್ನರು ಅಥವಾ ಕಮ್ಮರು ಎಂಬ ಹೆಸರಿನಿಂದ ಕೊನೆಯ ಅಕ್ಷರವು ( ನ್, ಮ್ ) ಅನುಸ್ವಾರವಿರಬೇ ಕೆಂದಿಷ್ಟೇ ಗೊತ್ತಾಗುವುದು. ಇದು ಯಾವ ಅಕ್ಷರಕ್ಕಾದ ಅನುಸ್ವಾರಾದೇಶ ವೆಂಬುದನ್ನು ನಿರ್ಧರಿಸಲು ಅವಕಾಶವಿಲ್ಲ. ಆದರೆ 'ಕಣ್ಣರು' ಎಂದು ಹೇಳುವ

ಪರಂಪರೆಯನ್ನು ಸ್ವಲ್ಪ ವಿಚಾರಿಸಿದರೆ ಣಕಾರದಲ್ಲಿ ಏನಾದರೂ ಔಚಿತ್ಯವಿರ ಬೇಕೆಂದು ತೋರುತ್ತದೆ. ಹಲವು ಕನ್ನಡ ಶಬ್ದಗಳಲ್ಲಿ ಆದೇಶವಾಗಿ ಬಂದ ಕೊನೆಯ ಣ ಕಾರವು ಳ ಕಾರದ ಸ್ಥಾನವನ್ನು ಆಕ್ರಮಿಸಿರುವುದು ಗೋಚರ ವಾಗುತ್ತದೆ. ಇಂದಿನ 'ನೊಣ' ಎಂಬ ಶಬ್ದವನ್ನು ಹಿಂದಕ್ಕೆ ನೊಳ ಎಂಬು ದಾಗಿ ಬರೆಯುತ್ತಿದ್ದರು. ಒಮ್ಮೆ 'ಕುಳಿ' ಎಂದಿದ್ದುದು ಈಗ ಕುಣಿ ಆಗಿದೆ. ಆದರಂತೆ ಕಳ=ಕಣ. ಇಂತಹ ಹಲವು ಉದಾಹರಣಗಳುಂಟು. 'ಕೊಳ್ಳು' ಎಂಬ ಶಬ್ದದೊಳಗಿನ ಕೊನೆಯ ಳ ಕಾರವು ಅನುಸ್ವಾರವಾಗಿ 'ಕೊಂ' ಎಂದು ಆಗುತ್ತದೆ. ಕೊಣ್, ಕೊಮ್ ಅಥವಾ ಕೊನ್ ಎಂದು ಆ ಅನುಸ್ವಾರದ ಉಚ್ಚಾರವು ಆಗಬಲ್ಲದು. ಇದರಂತೆಯೆ ಬೆಳ್; ಬೆಳ್=ಬೆಂ=ಬೆನ್=ಬೆಣ್= ಬೆಮ್. ಈ ದೃಷ್ಟಾಂತಗಳ ಮೇಲಿಂದ ಕನ್ನ(ಣ್ಣ)ರು ಎಂಬ ಜನಾಂಗದ ಹೆಸರು ಪ್ರಾಚೀನಕಾಲದಲ್ಲಿ ಕಳ್ಳರು ಎಂಬುದಾಗಿದ್ದಿತೆಂದು ಊಹಿಸಬಹುದೇ?

ದಕ್ಷಿಣ ಹಿಂದುಸ್ತಾನದಲ್ಲಿ ಅತಿಪ್ರಾಚೀನಕಾಲದಿಂದಲೂ ಕಳ್ಳರ್ ಎಂಬ ಹೆಸರಿನ ಜನಾಂಗವು ಇದ್ದಿತೆಂಬುದನ್ನು ನಿರಾಕರಿಸುವವರೇ ಇಲ್ಲ. ತಮಿಳರ ಅತಿ ಪ್ರಾಚೀನ ಸಾಹಿತ್ಯದಲ್ಲಿ ಈ ಜನಾಂಗದ ಉಲ್ಲೇಖಗಳು ಹೇರಳವಾಗಿವೆ. ಆದರೆ ಈ ಜನಾಂಗದ ಬಗ್ಗೆ ಸರಿಯಾದ ತಿಳುವಳಿಕೆಯಿದ್ದವರು ಸಿಕ್ಕುವುದೆ ಪರಮ ದುರ್ಲಭ. ಇವರನ್ನು ತಪ್ಪಾಗಿ ಎಣಿಸದಿದ್ದವರೆ ವಿರಳ. 'ಕಳ್ಳ' ಎಂಬ ಹೆಸರಿನಿಂದ ಭ್ರಾಂತಿಗೊಳ್ಳದವರೇ ಸ್ವಲ್ಪ. ಕಳ್ಳರು ಎಂದರೆ ಕನ್ನ ಹಾಕುವವರು ಎಂದು ಸಾಮಾನ್ಯವಾಗಿ ಅರ್ಥಮಾಡುವವರು ಬಹಳ. ನೆಲ್ಸನನಿಗೆ ಈ ಅರ್ಥವು ಸಮ್ಮತವಿಲ್ಲ; ಆದರೆ ಒಪ್ಪರ್‌ನಿಗೆ ಒಪ್ಪಿಗೆಯಿದೆ.* ಡಾ. ಕೃಷ್ಣಸ್ವಾಮಿ ಅಯ್ಯಂಗಾರ್ಯರು 'ಕಳ' ಶಬ್ದದ ಅರ್ಥವನ್ನು ಮಾಡಲು ಪ್ರಯತ್ನಿಸಿಲ್ಲವಾದರೂ ಈ ಜನಾಂಗವು ಕಳವು ಸುಲಿಗೆಯ ಕೆಲಸಗಳನ್ನು ಕೈಕೊಂಡು ಬಾಳುವೆ ಮಾಡುತ್ತಿದ್ದಿತೆಂಬಂತೆಯೆ ವಿವರಣೆ ಮಾಡಿದ್ದಾರೆ. ಆದರೂ ಪ್ರೊ. ವ್ಹಿ. ಆರ್. ರಾಮಚಂದ್ರದೀಕ್ಷಿತರು, ಶ್ರೀ ಶ್ರೀನಿವಾಸ ಅಯ್ಯರರು, ಪ್ರೊ. ಪಿ. ಟಿ. ಶ್ರೀನಿವಾಸ ಅಯ್ಯಂಗಾರ್ಯರುಗಳಿಗೆ ಇದು ಒಪ್ಪಿಗೆ ಇಲ್ಲ.† ಇವರಲ್ಲಿ ಕೊನೆಯ ವರು ಬರೆದ ತಮಿಳರ ಇತಿಹಾಸವೆಂಬ ಗ್ರಂಥದಲ್ಲಿ 'ಕಳ್' ಶಬ್ದಕ್ಕೆ ಹೊಸ

* CTS- III, p. 60. † STL, p. 252

ಅರ್ಥವನ್ನು ಹೆಚ್ಚಲು ಹವಣಿಸಿದ್ದಾರೆ.‡ ಪ್ರೊ. ಪಿ. ಟಿ. ಶ್ರೀನಿವಾಸ ಅಯ್ಯಂಗಾರ್ಯರ ಅಭಿಪ್ರಾಯದಂತೆ 'ಕಳ್' ಎಂದರೆ ಶಕ್ತಿ, ಬಲ, ಪರಾಕ್ರಮ. ಕಳ್ಳರು ಎಂದರೆ ಬಲಿಷ್ಟರು. ಮೂಲದಲ್ಲಿ ಇದು ಒಳ್ಳೆಯ ಅರ್ಥದ ಶಬ್ದವಿದ್ದು, ಬಲಿಷ್ಠರು ಸ್ವಾಭಾವಿಕವಾಗಿ ಪುಂಡಾಟಿಕೆ, ಹೋರಾಟಗಳಲ್ಲಿ ಆಸಕ್ತರಾಗುವುದರಿಂದ ಮುಂದೆ ಕಳ್ಳ ಎಂಬ ಶಬ್ದಕ್ಕೆ ಅಪಾರ್ಥವು ಬಂದಿರಬೇಕು.

ಕಳ್ಳರ್ ಎಂಬ ಕುಲದ ಜನಗಳು ಈಗ ಸಿಕ್ಕುವುದು ದುಸ್ತರ. ಹಿಂದಿನ ಕೆಲವು ಜನಗಣನೆಯಲ್ಲಿ ಈ ಹೆಸರಿನ ಜನಗಳ ಕೆಲವೊಂದು ಪಂಗಡಗಳು ಉಲ್ಲೇಖಿತವಾಗಿವೆ. ಇವರು ಈಗ ತೀರ ಹೀನಸ್ಥಿತಿಯಲ್ಲಿರುವ ಜನಗಳು. ಜಗತ್ತು ಬದಲಾದರೂ ಪೂರ್ವಸ್ಥಿತಿಗೇ ಅಂಟಿಕೊಂಡಿರಬೇಕೆಂಬ ರೂಢಿಮೂಢತೆಯ ಪ್ರವೃತ್ತಿಯಿಂದ ಇವರ ಪ್ರಗತಿಯಾಗದೆ ಪರಾಗತಿಯ ನಡೆದಿದೆ. ತಮಿಳ ಹಳೆಯ ಸಾಹಿತ್ಯದಲ್ಲಿ ಈ ಜನಾಂಗದ ವರ್ಣನೆಗಳು ಬರುವುವು. ಅತಿ ಪ್ರಾಚೀನಕಾಲದ ಕಳ್ಳರ್ ಜನಾಂಗದ ಸ್ಥಿತಿಗತಿಗಳನ್ನು ಆಗಿನ ಉಲ್ಲೇಖಗಳಿಂದಲೆ ಅರಿತುಕೊಳ್ಳುವುದು ಲೇಸು.

ಈ ಜನಾಂಗದ ಹೆಸರು 'ಕಳವರ್' ಅಥವಾ 'ಕಳ್ಳರ್' ಎಂದಿದೆ. 'ಕಳ್ಳರ್' ಶಬ್ದದ ಮೇಲುತೋರಿಕೆಯ ರೂಢಾರ್ಥವೊಂದರಿಂದಲೆ ಇವರು ಕನ್ನಗಾರರೆಂದು ನಿರ್ಧರಿಸುವುದು ಯೋಗ್ಯವಾಗಲಾರದು. ಪುರಾತನಕಾಲದ 'ಕಳ್ಳ'ರಿಗೆ ಕನ್ನದವರೆನ್ನಬೇಕಾದರೆ ಅವರ ನೆರೆ ಹೊರೆಯ 'ಚೋರ(ಚೊಳ)ರು ಏನಾಗಬೇಕು? ಕಳ್ಳರು, ಪಾಂಡ್ಯ ಮೊದಲಾದ ರಾಜರೊಡನೆ ಹೋರಾಡಿ ಕೆಲವೊಂದು ನಾಡಿನ ಒಡೆಯರಾಗಿ ಆಳಿದುದು ವೇಳ್ವಿಕುಡಿ ಶಾಸನದಿಂದ ಗೊತ್ತಾಗುತ್ತದೆ. ಕಳ್ಳರ್ ಎಂಬ ಹೆಸರಿನಿಂದಲೆ ರಾಜರಾಗಿ, ಸಾಮಂತರಾಗಿ ಇದ್ದ ಈ ಜನಾಂಗದವರು 'ಕನ್ನಗಾರ' ರೆಂದು ಭಾವಿಸುವುದು ಅನ್ಯಾಯವು; ಅಪಾರ್ಥವು. ಕಳ್ಳರು ನೆರೆಹೊರೆಯ ನಾಡಿನ ಅರಸರ ತುರುಗಳನ್ನು ದೋಚಿಕೊಂಡು ಒಯ್ಯುತ್ತಿದ್ದರೆಂದು ಪ್ರಾಚೀನ ತಮಿಳಸಾಹಿತ್ಯದಲ್ಲಿ ವರ್ಣನೆಗಳಿವೆ.* ಆದರೆ ಎದುರಾಳಿಗಳು, ಕಾಳೆಗದುಪಚಾರಿಕೆ—ಆಹ್ವಾನವೆಂದು ಒಬ್ಬರೊಬ್ಬರ ಆವುಗಳನ್ನು ಅಟ್ಟಿಕೊಂಡು ಬರುವುದು ಪ್ರಾಚೀನಕಾಲದ ಒಂದು ರೂಢಿಯೆ

‡ HT. pp. 8; 190

* HT. pp. 190-191, SCS. p. 25

ಆಗಿದ್ದಿತು. ಮಹಾಭಾರತದಲ್ಲಿಯೆ ಇವಕ್ಕೆ ದೃಷ್ಟಾಂತಗಳಿವೆ, ಕಳವರಾದರೂ ಇದನ್ನೆ ಮಾಡುತ್ತಿದ್ದರೆಂದು ಪ್ರೊ. ಪಿ. ಟಿ. ಶ್ರೀನಿವಾಸ ಅಯ್ಯಂಗಾರ್ಯರ ಅಭಿಪ್ರಾಯ.†

Cattle was lifted·······as a chalange to the Raja of the country.

'ಕಳ್ಳರ್' ಎಂಬ ಈ ರಾಜರು (ಜನಾಂಗದವರು) ಮಾತ್ರ ಏಕೆ ತುಡುಗರು? ಕನ್ನದವರು? ಹಾಗೆ ನೋಡಿದರೆ ಎಲ್ಲ ರಾಜರೂ ಈ ಉದ್ಯೋಗದವರೇ. ತುಡುಗರು ಕೆಲವರನ್ನು ಕೂಡಿಕೊಂಡು ಮಾಡುವ ಕಾಯಕವನ್ನೇ ರಾಜರೆಂಬವರು ಹಲವರನ್ನು ಕಟ್ಟಿಕೊಂಡು ಜರುಗಿಸುವರು. ಪರರ (ಭೂಮಿ-ಸೀಮೆಗಳನ್ನು) ಆಕ್ರಮಣ ಮಾಡುವುದಕ್ಕೇ ಪರಾಕ್ರಮವೆಂಬ ಹೆಸರಿಲ್ಲವೆ? ಆಗ ಇದೊಂದು ಪ್ರಶಂಸನೀಯವಾದ ಗುಣವೇ ಆಗಿದ್ದಿತು. ಅದೇಕೆ? ಇಂದಿಗೂ ಪರಾಕ್ರಮಿಯಲ್ಲದ ರಾಜನು ರಾಜನೇ ಅಲ್ಲ ಕಳ್ಳರೂ (ಮರವರೂ) ರಾಜರಾಗಿದ್ದರು. ಇವರು ಪಾಂಡ್ಯರು ಚೋಳರು ಮೊದಲಾದ ರಾಜರ ಸಮಕಾಲೀನರು.

ಪ್ರೊ. ಪಿ. ಟಿ ಶ್ರೀನಿವಾಸ ಅಯ್ಯಂಗಾರ್ಯರಿಗೆ ಕಳ್ಳ ಶಬ್ದದ ಅಪಾರ್ಥವು ಮಾನ್ಯವಿಲ್ಲ. ಅವರು ಈ ಶಬ್ದಕ್ಕೆ ಬಲ ಶಕ್ತಿ ಎಂಬ ಅರ್ಥವನ್ನು ಮಾಡುತ್ತಾರೆ. ಆದರೆ ಸುವಿಮರ್ಶೆ ಮಾಡಿದರೆ ಈ ಅರ್ಥವು ಸರಿಹೋಗುವುದಿಲ್ಲ. (೧)ಕಳವರು ಮಾತ್ರ ಬಲಶಾಲಿಗಳೊ? ಚೋಳ ಪಾಂಡ್ಯಾದಿ ಉಳಿದ ರಾಜರೂ ಬಲಿಷ್ಠರಾಗಿದ್ದರು. ಕಳವರಿಗಿಂತಲೂ ಹೆಚ್ಚಿನ ರಾಜ್ಯವಾಳಿದರು. (೨) ಪ್ರೊ. ಪಿ. ಟಿ. ಶ್ರೀ. ಯವರ ಅರ್ಥವು ಸಮಾಜವಿಕಾಸಕ್ರಮದರ್ಶಕವಾಗಿಲ್ಲ.

ನಮ್ಮ ನಾಡಿನ ಸಮಾಜವಿಕಾಸಕ್ರಮದ ರೀತಿಯನ್ನು ಬಲ್ಲವರು, ಕಳ್ಳ ಶಬ್ದಕ್ಕೆ ಅತಿ ಪ್ರಾಚೀನ ಅರ್ಥವು ಬೇರೆ ಏನಾದರೂ ಇರಬೇಕೆಂದು ಊಹಿಸಬಹುದಾಗಿದೆ. ಕಳ್ಳರು ಪುರಾತನ ಜನಾಂಗ. ದ್ರಾವಿಡವರ್ಗದ ಜನಾಂಗ. ದ್ರಾವಿಡರು ಆರ್ಯರಿಗಿಂತಲೂ ಮೊದಲಿನಿಂದ ಹಿಂದೂದೇಶದಲ್ಲಿ ನೆಲೆಸಿದ್ದರೆಂದು ಇತಿಹಾಸವು ಹೇಳುತ್ತದೆ. ಮಾನವ ಕುಟುಂಬದ ವಿಕಾಸಕ್ರಮವನ್ನು ನಿರೀಕ್ಷಿಸಿದರೆ ಅದು ಕೆಲವೊಂದು ಮೆಟ್ಟು ಮೆಟ್ಟನಿಂದ ಇಂದಿನ ವರೆಗೆ ಬೆಳೆದು

† HT, p. 190

ಬಂದುದು ಅನುಭವಕ್ಕೆ ಬರುತ್ತದೆ. ಕಳ್ಳ ಶಬ್ದವು ಈ ಜನಾಂಗದ ಪ್ರಾಥಮಿಕ ಸ್ಥಿತಿದರ್ಶಕವಾಗಿದೆಯೆಂದು ನನ್ನ ಅಭಿಪ್ರಾಯವು.

ಬೇಟೆಗಾರಿಕೆಯ ಮುಂದಡಿಯೇ ದನಗಾರಿಕೆ. ದನಗಾರಿಕೆಯಲ್ಲಿ †ಹಟ್ಟಿಗಳನ್ನು ಕಟ್ಟಿಕೊಂಡು ಇರಲಾರಂಭಿಸಿದ ಬಳಿಕ ಮಾನವನು ಒಕ್ಕಲನಾದನು. ಊಡುವನಾದನು. ಇವನೇ ಕುಂಟುಬಿ. ನಾಡವನಾಗಿ ರಾಷ್ಟ್ರಿಕನಾಗಿ ಅರಸುತನದ ಪಟ್ಟವನ್ನೇರಿದನು. ನಮ್ಮ ನಾಡಿನ ಮೊದಲಿಗನು ಗೌಳನು. ತೆಲುಗಿನಲ್ಲಿ ಗೌ(ಂ)ಡು ಶಬ್ದಕ್ಕಿರುವ ವಿವಿಧ ಛಾಯಾರ್ಥಗಳು ಅಭ್ಯಸನೀಯ್ಯವಾಗಿವೆ. ಗೌ(ಂ)ಡು—ಕುರುಬ, ಗಲ್ಲ; ಒಕ್ಕಲುರಲ್ಲಿ ಒಂದು ಜ್ಯಾತಿ. ಗೋವಳರಿಗೆ ಅಥವಾ ರಸವಿಕ್ರಯಿಗಳಿಗೆ ಗೌ(ಂ)ಡುಗಳೆಂದೆಂಬುವುದು ಈ ಶಬ್ದದ ಮೂಲಾರ್ಥವನ್ನು ವ್ಯಕ್ತಗೊಳಿಸುತ್ತಿದೆ. ಗೌಳನು ಸಂಪೂರ್ಣ ಗೌಡನಾಗಿ, ನಾಡಿಗೊಡೆಯನಾಗಿ, ವೀರ ಕ್ಷತ್ರಿಯ ಪದವಿಗೇರಿದುದರ ವಿವೇಚನೆಯು 'ಕರ್ಣಾಟಕದ ವೀರ ಕ್ಷತ್ರಿಯರು' ಎಂಬ ಪುಸ್ತಕದಲ್ಲಿ ಬಂದಿದೆ. ಈ ಪುಸ್ತಕದಲ್ಲಿ ಕೊನೆಯಲ್ಲಿ ಕೊಟ್ಟಿರುವ 'ವಂಶವೃಕ್ಷ'ದ ೨ನೆಯ ಪರಿಶಿಷ್ಟದಲ್ಲಿ 'ಹಾಲು—ಮತ'ದವರಾದ ದ್ರಾವಿಡ ಜನಾಂಗದ ಪೀಳಿಗೆಯ ಹಬ್ಬುಗೆಯನ್ನು ವಿವರಿಸಿದ್ದುದುಂಟು. ದ್ರಾವಿಡ ಜನಾಂಗವು ಮೊದಲು ಗೋವಳರ ಉದ್ಯೋಗವನ್ನೆ ಕೈಕೊಂಡಿದ್ದಿತೆಂದು ಎಲ್ಲರೂ ಒಪ್ಪತಕ್ಕ ಸಂಗತಿಯಾಗಿದೆ.* 'ಗೋವಳರು' ಎಂಬುದು ಸಂಸ್ಕೃತಜನ್ಯ; 'ಕಳ್ಳರು' ಎಂಬುದು ಇದೇಅರ್ಥದ (ಅಚ್ಚ ಇದೇ ಜನಾಂಗದ) ಶಬ್ದ. 'ಕಳ್' ಎಂದರೆ ಹಾಲು. ಅತಿ ಪ್ರಾಚೀನ ಕಾಲದಲ್ಲಿ ರೂಢವಿದ್ದ ಈ ಅರ್ಥವು ಇಂದು ಬಹುತರವಾಗಿ ಕಣ್ಮರೆಯಾಗಿದ್ದರೂ ಅಲ್ಲಿ ಇಲ್ಲಿ ನುಸಳಿಕೊಂಡು ಇನ್ನೂ ಒಂದೆರಡು ಕಡೆಗಳಲ್ಲಿ ಉಳಿದಿದೆ. 'ಕಳ್ಳಿ' (Milk hedge) ಎಂಬುದು ಒಂದು ವಿಶಿಷ್ಟ ಗಿಡ. ಕಳ್ ಎಂದರೆ ಹಾಲು. ಕಳ್ಳನ್ನು ಉಳ್ಳದು ಕಳ್ಳಿ. ಕಳ್ಳಿ ಎಂದರೆ ಹಾಲಿನ ಗಿಡ, ಎಂಬರ್ಥ. 'ಕಳ್ಳು' ಎಂದು ಹೆಂಡಕ್ಕೂ ಹೆಸರಿದೆ. ಏಕೆ? ಅದೂ ಬಿಳಿರಸ—ಹಾಲು. ಇದಕ್ಕೆ 'ಹಾಲಾ' ಎಂದೂ ಹೆಸರಿದೆ. ಆದುದರಿಂದಲೇ ಕಳ್=

† ಪಟ್ಟಿ, ಪಾಡಿ, ವಾಡಿ, ಹಟ್ಟಿ, ಹಕ್ಕಿಗಳೆಂಬ ಗ್ರಾಮ ನಾಮಗಳಿಂದ ವ್ಯಕ್ತವಾಗುವ ನಮ್ಮ ನಾಡ ಮೂಲೆಗಾರ ಇರವಿನ ಬಗೆಯನ್ನ ಕಂನಾಡ ಕತೆಯಲ್ಲಿ ಸಂಪೂರ್ಣವಿವರಿಸಲಾಗಿದೆ.

* ಕವೀಕ್ಷ ೫೬—೫೭

ಹಾಲು ಎಂಬುದು ನಿಃಸಂಶಯ. ‡ ಹಿಂಡುವ ಗೋವಿಗೆ 'ಕಳ್ಳ-ಪಶು' ಎಂದು ತಮಿಳಿನಲ್ಲುಂಟು.+ ಆದಕಾರಣ ಕಳ್ ಎಂದರೆ ಹಾಲು; ಕಳ್ಳನು ಎಂದರೆ ಹಾಲಿನವ, ಗೌಳಿ. ಕುರು(ಂ)ಬರಲ್ಲಿ ಒಂದು ಶಾಖೆಗೆ ಹಾಲುಮತದವರೆಂದು ಹೆಸರಿದ್ದುದು ಸುಪ್ರಸಿದ್ಧವಿದೆ. ಕುರು(ಂ)ಬರು 'ಕಳ್ಳ'ರ ಪಂಗಡದವರೆಂದು ಈ ಜಾತಿಯ ಜನಾಂಗದ ವರ್ಣನೆಯಲ್ಲಿ ಥರ್ಸಟನ್‌ರು ಹೇಳಿದ್ದಾರೆ.* ಇಂತೀ ಬಗೆಯಾಗಿ ಕಳ್ಳರು ಹಾಲುಮತದ—ಗೋವಳರ ಕುಲದವರೆಂದು ನಿಶ್ಚಿತವಾಗುತ್ತದೆ.

ಸರಿ. ಕಣ್ಣರು ಎಂಬ ಪದದ ಮೂಲವು ಕಳ್ಳರು ಎಂಬುದಾಗಿರ ಬೇಕೆಂಬ ಊಹೆಗೆ ಇನ್ನೂ ಬೇರೆ ಆಧಾರಗಳೂ ಉಂಟು. ಳ ಕಾರವು ಣ ಕಾರ ಅಥವಾ ಅನುಸ್ವಾರವಾಗುವುದುಂಟು. ಆದುದರಿಂದ ಕಣ್ ಅಥವಾ ಕಂ ಎಂಬ ಶಬ್ದವು ಕಳ್ ಇದರಿಂದಲೇ ಆಗಿರಬೇಕು, ಎಂದು ಕೇವಲ ಭಾಷಾ-ಶಾಸ್ತ್ರದ ನಿಯಮದ ಮೇಲೆಯೇ ಕೈಯೂರಿ ಕುಳ್ಳಿರಬೇಕಾದ ಕಾರಣವಿಲ್ಲ. ನಾಟ (ನಾಡವ)ರೂ ಕಣ್ಣರೂ ಒಂದೇ ಜನಾಂಗ ಎಂಬ ಮಾತು ಹಿಂದೆ ಬಂದಿದೆ. ನಾಟರಲ್ಲಿ ಕಳ್ಳರೆಂಬ ಪಂಗಡವುಂಟೆಂದು ಥರ್ಸ್ಟನ್‌ರು ಹೇಳುತ್ತಾರೆ. ನಾಟ್ಟರ್—The title of certain castes as ಕಳ್ಳರ್ etc. ಎಂದು ತಮಿಳುಮಹಾಕೋಶವು.‡ ಆದುದರಿಂದ ಕಳ್ಳರ್ ಎಂಬವರು ಕಣ್ಣರ ಪೂರ್ವಿಕರೆಂಬ ಮಾತು ನಿಶ್ಚಿತ. ಬಳ್ಳಾರಿ ಜಿಲ್ಲೆಯೊಳಗಿನ ಕಪ್ಪಗಲ್ಲಿನ ಅತಿ ಪುರಾತನ ಅವಶೇಷಗಳನ್ನು ಕುರಿತು ಬರೆವಾಗ ಗೌಳಿಗರೇ ಈ ನಾಡಿನ ಮೊದಲಿಗರೆಂಬ ಪ್ರಾಚೀನ ಪರಂಪರೆಯನ್ನು ಉಲ್ಲೇಖಿಸಿ ಪ್ರೊ. ಪಂಚಾನನ ಮಿತ್ರರು ಬರೆದಿದ್ದಾರೆ.† ಗೌಳರೆಂದು ಸುವಿಖ್ಯಾತರಾಗಿದ್ದ (ಯದು) ತುರುವಸುಗಳ ಸಂತತಿಯವರೇ§ ಈ ನಾಡಿನ ಮೊದಲಿಗರು ಎಂದು ಮತ್ಸ್ಯಪುರಾಣವು ಹೇಳುತ್ತದೆ. ತುರುಕಾರ ವಂಶದ ದೇಸಾಯಿಗಳನ್ನು ಬೆಳಗಾಂವಿ ಜಿಲ್ಲೆಯಲ್ಲಿ ಈಗಲೂ ಕಾಣಬಹುದು. ಶಿವಾಜಿ ಮಹಾರಾಜನಿಗೆ ಎದುರಿಸಿದ ಬೆಳವಡಿಯ

---

‡ ಅಳ್-ಕಳ್ ಅಲ್-ಪಾಲ್ ಈರ್-ನೀರ್ ಎಂಬ ಸಮಾರ್ಥಕ ಶಬ್ದಗಳನ್ನು ಕುರಿತು ವಿವೇಚಿಸಿದ ಲೇಖ ನೋಡು, ಜ,ಕ ೧೯೪೦. + Tamil Lexicon.

* CTS, V p. 249. ‡ Tamil Lexicon. † I. A. 1919, p. 64

§ ಕವೀಕ್ಷ ಪುಟ ೩೯, ೪೦, ೪೫-೪೬.

ಮಲ್ಲವ್ವನು ತುರುಕಾರ ಸಂಗಡದವಳೆಂದು ಐತಿಹ್ಯವಿದೆ.* ಸಮಗ್ರ ಕರ್ಣಾಟ ದಲ್ಲಿ ಜಿಲ್ಲೆ ಜಿಲ್ಲೆಗೂ ಹೇರಳವಾಗಿ ಸಿಕ್ಕುತ್ತಲಿರುವ ವೀರಗಲ್ಲುಗಳ ಹಿಂದಿನ ಕಾಲದ ತುರು ಕಾರರ ಅಸ್ತಿತ್ವಕ್ಕೆ ಸಾಕ್ಷಿಯಾಗಿವೆ.

ಈಗಣ ತಿಳುವಳಿಕೆಯಂತೆ ಕಳ್ಳರು ತಮಿಳರು. ಈಗ ಕಳ್ಳರ ಅವಶೇಷ ಗಳು ಸಿಕ್ಕುವುದು ತಮಿಳ ನಾಡಿನಲ್ಲಿಯೆ. ಆದುದರಿಂದ ಕಳ್ಳರು ಕನ್ನಡಿಗರ ಮೊದಲಿಗರಿಗೆ ಹೇಗೆ ಸಂಬಂಧಪಡುವರು ? ಎಂಬ ಒಂದು ಶಂಕೆಯುಂಟಾಗ ಬಹುದು. ಆದರೆ ಈ ಸಂಶಯದಲ್ಲಿ ಹುರುಳಿಲ್ಲ. ಕನ್ನಡಿಗರೂ ತಮಿಳರೂ ಅತಿ ಪ್ರಾಚೀನ ಕಾಲದಲ್ಲಿ ಒಂದೇ ಪೀಳಿಗೆಯವರೆಂಬ ಮಾತು ಆಧುನಿಕ ಸಂಶೋಧಕರಿಗೆಲ್ಲ ಮಾನ್ಯವಿದೆ. ಇವರೆಲ್ಲ 'ದ್ರಾವಿಡ' ವರ್ಗಕ್ಕೆ ಸೇರಿದವರು, ಎಂದು ಸ್ಥೂಲವಾಗಿ ಹೇಳುವುದೇ ಈವರೆಗೆ ನಡೆದಿದ್ದಿತು. ದ್ರಾವಿಡರ ಇಂತಹ ಶಾಖೆಗಳು ಪರಸ್ಪರ ಹತ್ತುಗೆಯುಳ್ಳವು. ಕನ್ನಡರು ಈ ಶಾಖೆಯವರು, ತಮಿಳರು ಈ ಶಾಖೆಯವರು, ಇಲ್ಲಿ ಇವೆರಡೂ ಶಾಖೆಗಳು ಒಂದಕ್ಕೊಂದು ಕೂಡುವುವು. ಇವರೆಲ್ಲರೂ ಮೂಲದಲ್ಲಿ ಒಂದು ಎಂಬ ಮಾತನ್ನು ಇನ್ನೂ ಚೆನ್ನಾಗಿ ಸಿದ್ಧಪಡಿಸಿದವರಾರೂ ಇಲ್ಲ. ತಮಿಳ ಮತ್ತು ಕನ್ನಡರು ಒಂದೇವೃಕ್ಷದ ಎರಡು ಶಾಖೆಗಳೆಂಬುದು, ಕನ್ನಡ ಮತ್ತು ತಮಿಳ ಭಾಷೆಗಳ ತುಲನಾತ್ಮಕ ಅಭ್ಯಾಸದ ಬಲದಿಂದಲೇ ಕೇವಲ ಊಹಿಸಿದ ಸಿದ್ಧಾಂತವಾಗಿತ್ತು. ಜಾತಿಜನಾಂಗ ಗಳ ಅಭ್ಯಾಸದಿಂದ ಕನ್ನಡಿಗರ ಈ ಶಾಖೆಯೂ ತಮಿಳರ ಈ ಶಾಖೆಯೂ ಒಂದಕೊಂದು ಹೊಂದಿಕೊಳ್ಳುವುದರಿಂದ ಇವರೆಲ್ಲ ಒಂದು ಎಂಬ ಮಾತು ಇನ್ನೂ ಬೆಳಕಿಗೆ ಬರಬೇಕಾಗಿ ಇದ್ದಿತು. ಕೀರ್ತಿಶೇಷರಾದ ಆರ್. ನರಸಿಂಹಾಚಾರ್ಯರು ಕನ್ನಡ ಭಾಷಾಚರಿತೆಯಲ್ಲಿ ಬರೆಯುವುದೇನೆಂದರೆ: †

> Now, the forms ಸಂದಾನ್, ಬಂದೋನ್, ನೋಂಪಿ etc............are indentical or nearly so with the forms used in Tamil. It may be stated that as we go further back to the early period of Kannada literature we shall find the forms approximate more and more to the Tamil ones.

* ತುಪಂ ಇ. ಪುಟ ೬

† HKL, p. 131

ಇಷ್ಟೊಂದು ತಮಿಳಕ್ಕೆ ಸಮೀಪದ—ತಮಿಳದ ಇನ್ನೊಂದು ರೂಪವೆ ಎನಿಸುವ ಭಾಷೆಯನಾಡುವ ಕನ್ನಡದ ಮೊದಲಿಗರು ತಮಿಳರ ತೀರ ಹತ್ತಿರದವರೇ ಆಗಿರಬೇಕಲ್ಲವೆ? ಕಣ್ಣರು ಕನ್ನಡದ ಮೊದಲಿಗರು. ಕನ್ನ(ಣ್ಣ)ರೇ ಕಳ್ಳರು. ಕಳ್ಳರು ತಮಿಳರಲ್ಲಿಯೂ ಉಂಟೆಂದು ಇಂದಿನ ಅವಶೇಷಗಳಿಂದ ಗೊತ್ತಾಗುತ್ತದೆ. ಆದುದರಿಂದ ತಮಿಳರಿಗೂ ಕನ್ನಡಿಗರಿಗೂ ಸಾಮಾನ್ಯರಾಗಿದ್ದ ಸಮಾನ ಭಾಷೆಯ ಪ್ರಾಚೀನ ಜನಾಂಗವೆಂದರೆ ಈಗ ಇಲ್ಲಿ ವ್ಯಕ್ತರಾಗಿರುವ ಕಳ್ಳರೇ ಎಂದು ನಿರ್ಧರಿಸಬಹುದಾಗಿದೆ.

Reqion inhabited by Kallas in and arround Madura district is called 'ಕಳ್ಳನಾಡು,' ಎಂದು ತಮಿಳನಾಡಿನ ಐತಿಹ್ಯದಲ್ಲುಂಟು* ಕಳವರ್ ಅಥವಾ ಕಳ್ಳರು ತಮಿಳ ಜನಾಂಗ ಎಂದರೆ ಚೋಳ, ಪಾಂಡ್ಯ, ಚೇರ ರಾಜರಿಂದ ಭಿನ್ನವಾದ ಬೇರೆ ಪಂಗಡದ ಪಾಳೆಯಗಾರರೆಂದು ಡಾ. ಕೃಷ್ಣಸ್ವಾಮಿ ಅಯ್ಯಂಗಾರರು ತಮಿಳ ಪ್ರಾಚೀನ ಉಲ್ಲೇಖದಿಂದ ನಿರ್ಧರಿಸಿದ್ದಾರೆ.+ ಕಳ್ಳರು ಚೋಳ ಚೇರಾದಿ ತಮಿಳರಿಂದ ಬೇರೆಯಾಗಿ ನಿಂತ ಕಂನಾಡವರ ಮೊದಲಿಗರಾಗಿರಬೇಕೆಂಬ ವಿಚಾರಕ್ಕೆ ಇದಿಂದ ಪುಷ್ಟಿ ದೊರೆಯುತ್ತದೆ. ಇವರ ಒಂದು ಶಾಖೆಯಾದ ಕನ್ನರು ನೆಲಸಿದ ನಾಡೇ ಕನ್ನಾಡು-ಕನ್ನಡ. ಇನ್ನೊಂದು ಶಾಖೆಯವರು ಕಮ್ಮರು. ಅವರು ಬೇರೂರಿದ್ದ ಭಾಗವೇ ಕಮ್ಮನಾಡು. ತಮಿಳು ಕನ್ನಡ ಮತ್ತು ಆಂಧ್ರ ಭಾಷೆಗಳು ಒಂದೇ ಶಾಖೆಯವೆಂದು ಕಾಲ್ಡವೆಲ್ಲ ಪ್ರಭೃತಿಗಳು ಆಳವಾದ ಅಭ್ಯಾಸದಿಂದ ಸಿದ್ಧಪಡಿಸಿ ಮೂಲದಲ್ಲಿ ಇವೆಲ್ಲ ಜನಾಂಗಗಳು ಒಂದೇ ಪಂಗಡಕ್ಕೆ ಸೇರಿದುವಾಗಿರಬೇಕೆಂದು ತರ್ಕಿಸಿದ್ದರು. ಇದೀಗ ಆ ತರ್ಕವು ಜಾತಿ ಜನಾಂಗಗಳ ಅಭ್ಯಾಸದ ಬಲದಿಂದ ಸುಪ್ರತಿಷ್ಠಿತವಾಯ್ತು; ಅದೊಂದು ಸತ್ಯಸಿದ್ಧಾಂತವೆಂದು ನೆಲೆಗೊಂಡಿತು.

'ಕಳವ'ರ ರೀತಿ ನೀತಿಗಳು, ಅವರ ಕುಲದ ಕಥೆ-ಪರಂಪರೆಗಳು ಇವನ್ನೆಲ್ಲ ನಿರೀಕ್ಷಿಸಿದರೆ ಈ ಜನಾಂಗವು ಅತಿ ಪುರಾತನಕಾಲದ್ದೆಂದು ಕಂಡುಬರುತ್ತದೆ. ಮೂಲ ದ್ರಾವಿಡರೆಲ್ಲ ಕಳವರ ಕುಲದವರು ಎಂದರೆ 'ಹಾಲುಮತ'ದವರೇ.

---

* A. I. & S. I. H. C. p. 42-43

+ Tamil Lexicon.

ಆದರೂ ಅನೇಕ ಕಾರಣಾಂತರಗಳಿಂದ ಅವರಲ್ಲಿ ಹಲವು ಬಗೆಗಳಾಗಲಾರಂಭಿಸಿದುದು ಗೋಚರನಾಗುತ್ತದೆ. ಕಳ್ಳನು ಉಳ್ಳವನಾಗುತ್ತಲೆ ಮರವನಾಗುತ್ತಾನೆ, ಎಂಬರ್ಥದ ಒಂದು ಗಾದೆಯ ಮಾತು ತಮಿಳಿನಲ್ಲಿದೆ. * ಮರವರಿಂದಲೂ ಮೇಲ್ತರಗತಿಯವರು ಜಹಮುಡಿಯರ್, ಅಂತೆ.

ಗೆಳೆಯ ಶಬ್ದದ ಇನ್ನೊಂದು ರೂಪವೆ ಗೆಣೆಯ. ಆದರೆ ರೂಢಿಯಿಂದ ಇವೆರಡರ ಅರ್ಥದಲ್ಲಿ ಎಷ್ಟೊಂದು ವ್ಯತ್ಯಾಸ! ಳ–ಣ ಕಾರಗಳ ಪಲ್ಲಟದೊಡನೆ ಅರ್ಥದಲ್ಲಿಯೂ ಕೆಲವೊಂದು ಅಂತರವು ತಲೆದೋರಲಾರಂಭಿಸುವುದು. ಕನ್ನರು ಮತ್ತು ಕಮ್ಮರಲ್ಲಿ ನಾಡುಗಳ ಭೇದದಿಂದ ನಡೆನುಡಿಗಳಲ್ಲಿಯೂ ವಿಪರೀತ ವ್ಯತ್ಯಾಸಗಳು ಬೆಳೆದುಬಂದುದು ಅನುಭವಕ್ಕೆ ಬರುತ್ತಲಿದೆ.† 'ಕಂ' ಎಂಬುದು ಮೊದಲಿಗೆ ಒಂದೇ ಜನಾಂಗವಾದರೂ, ಮುಂದಿನ ಬೆಳವಣಿಗೆಯಲ್ಲಿ ಇವೆರಡೂ ಶಾಖೆಗಳೂ ತೀರ ಸ್ವತಂತ್ರವಾದುದನ್ನು ನ್ (ಕನ್ನ) ಮತ್ತು ಮ್ (ಕಮ್ಮ) ಗಳು ತೋರಿಸುತ್ತಿವೆಯೆಂದು ಹೇಳಬಹುದು. ಇದೇ ಮೇರೆಗೆ ಕಳ್ಳರಲ್ಲಿ ಕೆಲವೊಂದು ಪಂಗಡದವರು 'ಕನ್ನ(ಣ್ಣ)'ರಾದ ಬಳಿಕ ಕಳ್ಳರಿಂದ ಇವರು ಬೇರೆಯಾಗಿ ಬೆಳೆಯಲಾರಂಭಿಸಿದವರೆಂದು ಊಹಿಸಲು ಏನೂ ಅಡ್ಡಿ ತೋರುವುದಿಲ್ಲ.

ದ್ರಾವಿಡ ವರ್ಗದೊಳಗಿನ ತೀರ ಪ್ರಾಥಮಿಕ ಅವಸ್ಥೆಯ ಅತ್ಯಂತ ಪ್ರಾಚೀನ ಶಾಖೆಯೆಂದರೆ ಕಳವರು. ಕಳವರೊಳಗಿಂದ ಕಾಲಪರಿಸ್ಥಿತಿಗಳು ಬದಲಾದಂತೆ ಮಾರ್ಪಾಟಗಳನ್ನು ಹೊಂದುತ್ತ–ಹೊಸಹೊಸ ಸಂಸ್ಕಾರಗಳಿಗೆ ಒಳಗಾಗುತ್ತ ಮುಂದೆ ನಡೆದವರು ಮುಂದೆಯೆ ಹೋದರು. ಕಳವರು ಮಾತ್ರ ತೀರ ಪುರಾತನ ಪರಂಪರಾಪ್ರಿಯರಾಗಿ ಇನ್ನೂ ಎಂದಿನಂತೆ ಹಾಗೆಯೆ ಇದ್ದುಬಿಟ್ಟಿದ್ದಾರೆ! ಸಾಧಾರಣವಾಗಿ ಕಳವರು ಮತ್ತು ಮರವರೂ ಒಂದೇ. ದಕ್ಷಿಣಕ್ಕೆ ಅಡಿಯಿಟ್ಟ ದ್ರಾವಿಡರ ಪ್ರಥಮಶಾಖೆಯವರಲ್ಲಿ ಇವರುಂಟು, ಎಂದು ತಜ್ಞರ ಅಭಿಪ್ರಾಯವಿದೆ. §

---

* CTS. III. p. 63. † ಕಮ್ಮವಾರಿ ಚರಿತ್ರಮು ಎಂಬ ಗ್ರಂಥದ ಲೇಖಕರಾದ ಶ್ರೀ. ಕೆ. ಭವಯ್ಯನವರು ಕಮ್ಮರು, ರಡ್ಡಿಗಳು ಒಂದೇ ಬಳಗದವರೆಂದಿರುವರು ರಡ್ಡಿಗಳ ಮೊದಲಿಗರೆ ನಾಡವರೆಂದು ಹಿಂದೆ ವಿವರಿಸಿವೆ. § CTS. V. p. 22.

The Maravars must have been one of the first of the Dravidian tribes that penitrated to the south of peninsula, and like Kallars, they have been but little affected by Brahamanic influence.

ಇಂದು ಕಳವರನ್ನು ತಮಿಳರಲ್ಲಿ ಎಣಿಸಬಹುದಾಗಿದ್ದರೂ ಪುರಾತನ ತಮಿಳ ಸಾಹಿತ್ಯದೊಳಗಣ ವರ್ಣನೆಗಳನ್ನು ನೋಡಿದರೆ ಈ ಜನಗಳ ಬಗ್ಗೆ ಚೋಳ ಪಾಂಡ್ಯರಲ್ಲಿ ಆತ್ಮೀಯ ಭಾವವು ಇದ್ದಂತೆ ತೋರುವುದಿಲ್ಲ.* ಕಳ್ಳ ವಡುಕರ ಭಾಷೆ ಬೇರೆ, ರೀತಿ ಬೇರೆ ಎಂದು ತಮಿಳ ಕವಿಗಳು ವರ್ಣಿಸಿದ್ದುಂಟು.‡ ಆದುದರಿಂದ ಕಳವರೊಳಗಿನ ಈ ವಡುಕರು ತಮಿಳರಿಂದ ಭಿನ್ನರಾಗುತ್ತಲಿದ್ದ ಕನ್ನ ಮತ್ತು ಕಮ್ಮರೇ ಆಗಿರಬೇಕೆಂಬಲ್ಲಿ ಸಂದೇಹವಿಲ್ಲ. ಕ್ರಿ. ಶ. ೬–೭ ನೆಯ ಶತಮಾನದಿಂದ 'ಕಳಭ್ರ' ರೆಂಬ ರಾಜರು ಕಾಣಿಸಿಕೊಳ್ಳುವರು: ಇವರು 'ಕನ್ನಡಿಗರೆ' ಆಗಿರಬೇಕೆಂದು ಹಿಂದುಸ್ಥಾನ ಸರಕಾರದ ಶಾಸನ ಇಲಾಖೆಯ ವರಿಷ್ಠ ಅಧಿಕಾರಿಗಳಾಗಿದ್ದ ರಾ. ಸಾ. ವೆಂಕಟಯ್ಯನವರ ಅಭಿಪ್ರಾಯವಿದೆ. ಕಳವರೇ ಕಳಭ್ರರೆಂಬ ಹೆಸರಿನಿಂದ ಮುಂದೆ ಪ್ರಖ್ಯಾತಿಗೆ ಬಂದರೆಂದು ಸಾಮಾನ್ಯವಾಗಿ ಎಲ್ಲ ಸಂಶೋಧಕರೂ ಒಪ್ಪಿಕೊಂಡಿದ್ದಾರೆ. ಪ್ರೊ. ಪಿ. ಟಿ. ಶ್ರೀನಿವಾಸ ಅಯ್ಯಂಗಾರ್ಯರು ಇದನ್ನು ಕುರಿತು ಬರೆಯುವುದೇನೆಂದರೆ:§

Dr. S. Krishnaswamy Iyangar has given his support to the theory that the Kalabhras were Kallar of old Tamil poetry. Kallar has as alternative from Kalavar and Kallvar.

ಕಳವರು, ಕಳ್ವರು ಅಥವಾ ಕಳ್ಳರು ಎಂದು ಸ್ವಲ್ಪ ವ್ಯತ್ಯಾಸದಿಂದ ಕರೆಯಲ್ಪಡುತ್ತಿದ್ದ ಜನಾಂಗಕ್ಕೆ ಸಂಬಂಧಪಟ್ಟವರೇ ಕಳಭ್ರರು, ಎಂಬ ಬಗ್ಗೆ ಭಿನ್ನಾಭಿಪ್ರಾಯಗಳಿಲ್ಲವಾದರೂ ಕಳಭ್ರರು ತಮಿಳರೇ ಆಗಿರಬೇಕೆಂದೂ

---

* STL. pp. 228, 229; SCS. pp. 24, 25 & HT. 190. etc.

‡ SCS. p. § HT. p. 536

ಕೆಲವರ ಅಭಿಪ್ರಾಯಗಳಿವೆ. ಆದರೆ ಕಳವರ ವಿಷಯಕ್ಕಿರುವ ತಮಿಳ ಸಾಹಿತ್ಯದ ಪ್ರಾಚೀನ ಉಲ್ಲೇಖಗಳಿಂದ ಅವರು ತಮಿಳರಿಂದ ಸ್ವಲ್ಪ ಭಿನ್ನರಾದವರಾಗಿರಬೇಕೆಂಬ ಭಾವನೆಯೆ ದೃಢವಾಗುವಂತಿದೆ. ಆದುದರಿಂದ ಶ್ರೀ. ವೆಂಕಯ್ಯನವರು ಇನ್ನೂ ಬೇರೆ ಪ್ರಮಾಣಗಳ ಮೇಲಿಂದ ಕಳಭ್ರರು ಕನ್ನಡಿಗರಿಗೆ ಸಂಬಂಧಪಟ್ಟವರಾಗಿರಬೇಕೆಂದು ಮಾಡಿದ ನಿರ್ಣಯವು ಸರಿಯಾದುದೆಂದು ತೋರುತ್ತದೆ.

ಮತ್ಸ್ಯಪುರಾಣದ 'ಕರ್ಣ' ರೆಂಬ ಪದದಲ್ಲಿ ವಾಯು ಮುಂತಾದುವುಗಳಲ್ಲಿ 'ಕುಲ್ಯ' ವೆಂಬ ಪಾಠಾಂತರವು ಇದ್ದುದು ದೊರೆಯುತ್ತದೆ. ಇಲ್ಲಿಯ 'ಕುಲ್ಯ' ಶಬ್ದವು ವಿಚಾರಾರ್ಹವಾಗಿದೆ. ಇದು ನಿಜವಾಗಿಯೂ 'ಕಲ್ಯ' ಎಂದಿರಬೇಕು. ಈ ಬಗೆಯ ತಪ್ಪು ಪಾಠಗಳು ಪುರಾಣಗಳಲ್ಲಿ ಬೇಕಾದಷ್ಟು ಇದ್ದುದು ಸಂಶೋಧಕರಿಗೆ ಕಂಡುಬಂದಿದೆ. ಮಿ. ಪಾರ್ಜಿಟರರು ಬರೆದ Ancient Indian Historical Traditions ಎಂಬ ಗ್ರಂಥದಲ್ಲಿ ಇಂತಹ ಕೆಲವು ಪಾಠಾಂತರಗಳನ್ನು ಸಂಗ್ರಹಿಸಿ ಕೊಟ್ಟಿದ್ದಾರೆ (ಪು. ೧೨೮). 'ಕರ್ಣರ' ಬದಲು ಉಲ್ಲೇಖಿತ 'ಕುಲ್ಯ' ರು ಎಂಬ ಪದವು ಕಳವರ್ ಎಂಬ ದೇಶೀಯ ನಾಮಕ್ಕೆ ತೀರ ಸಮೀಪದ್ದಾಗಿದೆ. 'ಕಳ್' ಎಂಬ ದೇಶೀಯ ನಾಮವೇ ಸಂಸ್ಕೃತದಲ್ಲಿ ಕಲ್ಯವೆಂದಾಗಿದೆ. ( ಕಿಟ್ಟೆಲ್ ಕೋಶದ ಮುನ್ನುಡಿ ನೋಡು ) ಎಂದರೆ ಈ ಬಗೆಯಿಂದಲೂ ನಾವು ಈ ಮೊದಲು ಊಹಿಸಿದ ಮಾತೇ ದೃಢಪಡುತ್ತಿದೆ. ಕಳವರೇ ಕಣ್ಣ ಜನಾಂಗವೆಂದು ಸಿದ್ಧವಾಗುತ್ತಿದೆ.

× × × ×

ಕರ್ನಾಟದ ಇತಿಹಾಸದಲ್ಲಿ ಒಂದು ಕಾಲಕ್ಕೆ ಕಣ್ಣ ಅಥವಾ ಕನ್ನ ಎಂಬ ಹೆಸರು, ಮತ್ತು ಈ ಹೆಸರಿನ ಶಿವಾಲಯಗಳು ವಿಶೇಷವಾಗಿ ಪ್ರಚಾರದಲ್ಲಿದ್ದುವೆಂದು ಕಂಡುಬರುತ್ತದೆ. ಕ್ರಿ. ಶ. ೯೬೫ರ ಒಂದು ಶಾಸನದಲ್ಲಿ ಅಡನೂರ ಕನ್ನೇಶ್ವರ ದೇವರಿಗೆ ದತ್ತಿಬಿಟ್ಟ ಉಲ್ಲೇಖವುಂಟು.§ ದೇವಗಿರಿ ಯಾದವರ ಕಾಲದಲ್ಲಿ ಕನ್ನಿಶೆಟ್ಟಿಯು ಕನ್ನೇಶ್ವರ ಗುಡಿಯನ್ನು ಕಟ್ಟಿಸಿದ್ದಾನೆ.* ೧೦೮ಳನೆಯ ಇಸವಿಯ ಒಂದು ನೆಟ್ಟಕಲ್ಲಿನಲ್ಲಿ, ಕಣ್ಣಮಾತ್ಯನು ತಾನು 'ಕನ್ನೇಶ್ವರ

§ EC. XI· HR· 30, 33; * MAR· 1933-34, p, 181;

ದೇವರ ಪದಸರಸಿಜ ಶಿಲೀಮುಖನ್ ' ಎಂದು ಹೇಳಿಕೊಂಡಿದ್ದಾನೆ. * ಈ ಬಗೆಯ ಕನ್ನೇಶ್ವರ ದೇವರ ಮತ್ತು ಆ ಕನ್ನೇಶ್ವರನ ಭಕ್ತರಾದ 'ಕನ್ನ' ಎಂಬ ಜನಗಳ ಹೆಸರಿನ ಉಲ್ಲೇಖಗಳಿರುವ ಇನ್ನೂ ಹಲವು ಶಾಸನಗಳಿವೆ. ಇಲ್ಲಿ ಮಾದರಿಗಾಗಿ ಕೆಲವನ್ನು ಮಾತ್ರ ಹೇಳಿದೆ. §

ಕನ್ನೇಶ್ವರ ಅಥವಾ ಕಣ್ಣೇಶ್ವರ ಎಂದರೇನು? ಇದು ಶಿವನ ಹೆಸರು ಎಂಬ ಬಗ್ಗೆ ಯಾರೂ ಸಂದೇಹಪಡಲಾರರೆಂದು ತೋರುತ್ತದೆ. ಆದರೆ ಶಿವನಿಗೆ ಈ ಹೆಸರು ಏಕೆ? ಮತ್ತು ಹೇಗೆ? ಎಂಬುದನ್ನು ಕುರಿತು ಕೂಲಂಕಷವಾದ ವಿಚಾರವು ಇನ್ನೂ ಆಗಬೇಕಾಗಿದೆ. ಮೈಸೂರು ಶಾಸನ ಇಲಾಖೆಯವರ ದೃಷ್ಟಿಯಿಂದ ಇದರ ವಿವರಣೆಯು ಹೀಗಿದೆ; ಡಾ. ಎಂ. ಎಚ್. ಕೃಷ್ಣರು ಬರೆಯುವುದೇನಂದರೆ:

> Herewith I am sending a note prepared in this office.
>
> Kannesvara is derived from Kanna and Isvara, the former being derived from Krishna. So, Kannesvara means Krishnesvara and this word is similar to Ramesvara, Vishnu-Isvara. It refers to Siva or his Linga set up by or for the merit of a person bearing some name which may be Vaishnava. The god is Siva though the name of the man may not be Saiva.

ಕಣ್ಣ+ಈಶ್ವರ ಎಂಬಲ್ಲಿ 'ಕಣ್ಣ' ಶಬ್ದವು ಕೃಷ್ಣ ಎಂಬುದರ ತದ್ಭವವೆಂದು ಗ್ರಹಿಸಿದ್ದಾರೆ. ಆದರೆ ಇಲ್ಲಿಯೆ ಎಲ್ಲವೂ ತಪ್ಪಿದೆ. ಸಂಸ್ಕೃತ ಮತ್ತು ಪ್ರಾಕೃತ ಭಾಷಾವಿಶಾರದರು ಕೃಷ್ಣ ಶಬ್ದದಿಂದ ಕಣ್ಣವು ಹುಟ್ಟಿತೆಂದು ಒಪ್ಪಿಕೊಳ್ಳಲು ಸಿದ್ಧರಿಲ್ಲ. ಕಡಬದ ತಾಮ್ರಪಟಗಳನ್ನು ವಿಮರ್ಶಿಸಿ ಅವುಗಳನ್ನು

* EC, VIII, Sa. 103.

§ EC. XI. Dg. 94; 97; 103; V, Kr. 35; XII. Introduction p. 4; Gd. 61; MAR. 1928, p. 8 etc.

ಕುರಿತು ಬರೆವಾಗ ಡಾ. ಎಚ್. ಲುಡರ್ಸ ಎಂಬ ವಿದ್ವಾಂಸರಿಗೆ 'ಕಣ್ಣೇಶ್ವರ ಶಬ್ದದ ಬಗ್ಗೆ ವಿಚಾರಿಸಬೇಕಾಗಿದೆ. ಕನ್ನರ, ಅಕಾಲವರ್ಷ ಎಂಬಿವೇ ಮೊದಲಾದ ಪರ್ಯಾಯ ನಾಮಗಳನ್ನುಳ್ಳ ಮೂರನೆಯ ಕೃಷ್ಣನೆಂಬ ರಾಷ್ಟ್ರಕೂಟ ರಾಜನು ತನ್ನ ಹೆಸರಿನಲ್ಲಿ ಕಣ್ಣೇಶ್ವರ ದೇವಾಲಯವನ್ನು ಸ್ಥಾಪಿಸಿದ ಸಂಗತಿಯು ಅಲ್ಲಿ ಬಂದಿದೆ. ಕಣ್ಣ (ಕಣ್ನ) ಶಬ್ದವು ಕೃಷ್ಣ ಇದರ ತದ್ಭವವೆಂಬ ರೂಢಕಲ್ಪನೆಯನ್ನು ವಿರೋಧಿಸಿ ಡಾ. ಲುಡರ್ಸರು ಬರೆಯುವುದೇನೆಂದರೆ:*

> As the combination of a dental & lingual in the interior of a word is absolutely impossible, this must be a mistake for either ಕನ್ನೇಶ್ವರ or ಕಣ್ಣೇಶ್ವರ, and the name of the king would, therefore, be either ಕನ್ನ or ಕಣ್ಣ. As far as I know, neither of these forms can be considered as derived from Sanskrit ಕೃಷ್ಣ, the common Prakrit form being ಕಣ್ಹ and the Kanarese equivalent ಕನ್ನರ whereas both ಕನ್ನ and ಕಣ್ಣ represent the Sanskrit ಕರ್ಣ.

ಪ್ರಾಕೃತಭಾಷಾಕೋವಿದರಾಗಿರುವ ಪ್ರೊ. ಉಪಾಧ್ಯೆಯವರು ಈ ತದ್ಭವವನ್ನು ಕುರಿತು ಹೀಗೆ ಬರೆದಿದ್ದಾರೆ:

> The normal Prakrit from of ಕೃಷ್ಣ would be ಕಣ್ಹ.

ಆದುದರಿಂದ ಕಣ್ಣೇಶ್ವರ ಅಥವಾ ಕನ್ನೇಶ್ವರ ಎಂಬ ಹೆಸರಿನಲ್ಲಿರುವ ಕಣ್ಣ ಮತ್ತು ಕನ್ನ ಇವುಗಳ ಸಂಬಂಧವನ್ನು ಕೃಷ್ಣ ಶಬ್ದದೊಡನೆ ಜೋಡಿಸುವುದು ಸರಿಯಲ್ಲವೆಂದು ಸ್ಪಷ್ಟವಾಗುತ್ತದೆ. ಕಣ್ಣ (ಕನ್ನ) ಶಬ್ದದ ಮೂಲವನ್ನು ಸಂಸ್ಕೃತದಲ್ಲಿ ಹುಡುಕುವುದೇ ಆದರೆ, ಸಂಸ್ಕೃತ ಮತ್ತು ಪ್ರಾಕೃತಗಳಲ್ಲಿ ಜಗತ್ತಿನಲ್ಲಿ ಮಹಾವಿದ್ವಾಂಸರು ಖ್ಯಾತಿವೆತ್ತ ಡಾ. ಲುಡರ್ಸರು ಹೇಳುವಂತೆ 'ಕರ್ಣ' ಎಂಬಲ್ಲಿ ಅದನ್ನು ಕಾಣಬಹುದು. ಹೀಗೆ 'ಕರ್ಣ' ಎಂಬ ಮಾತಿಗೆ

* EI. IV, p. 336

ಬರುತ್ತಲೆ, ಈ ಸಂದರ್ಭದಲ್ಲಿ ತುರುವಸುವಿನ ಪೀಳಿಗೆಯಲ್ಲಿಮತ್ಸ್ಯಪುರಾಣವು ಹೇಳುವ 'ಕರ್ಣ' ಎಂಬ ಜನಾಂಗದ ಹೆಸರಿನ ನೆನಪು ಆಗದೆ ಇರದು. ಆದುದರಿಂದ ಕಣ್ಣೇಶ್ವರ=ಕರ್ಣೇಶ್ವರ. ಕರ್ಣೇಶ್ವರನು ಎಂದರೆ 'ಕರ್ಣ' ಎಂಬ ಜನಾಂಗದ ಈಶ್ವರನು, ಅಧಿದೇವತೆಯು, ಆತನೇ ಶಿವನು, ಎಂಬೀ ಬಗೆಯ ವಿಚಾರಗಳಿಗೆ ಇನ್ನಿಷ್ಟು ಬಲಬರುವುದು.

ಊರುಗಳಿಗೆ, ನಾಡಿಗೆ, ಜನಗಳಿಗೆ ಮತ್ತು ದೇವರಿಗೆ ಇರುವ ಕಣ್ಣ (ಕನ್ನ) ಎಂಬ ಹೆಸರಿನ ಸಂಬಂಧವು, ಸಂಸ್ಕೃತಕ್ಕೆ ಹೋದರೆ 'ಕರ್ಣ' ಎಂಬ ಪದದ ಕಡೆಗೇ ಇರುವುದೆಂಬುದು ಅನುಭವಕ್ಕೆ ಬರುವುದು. ಇವೆಲ್ಲವೂ ಕರ್ಣಾಟಕ್ಕೆ ಸಂಬಂಧಿಸಿದ ಮಾತುಗಳೆಂಬುದರ ವಿವರಣೆಯನ್ನು ಈ ಮೊದಲೆ ಮಾಡಿದ್ದಾಗಿದೆ. ಕಣ್ಣ ಇದರ ಸಂಸ್ಕೃತ ರೂಪವು 'ಕರ್ಣ' ಎಂದಾಗಿರುವಂತೆ, ಇದರ ಅತಿ ಪ್ರಾಚೀನ ದ್ರಾವಿಡ ರೂಪವು ಕಳ್ಳ ಎಂಬುದಾಗಿದೆಯೆಂಬ ಸಂಗತಿಯು ಹಿಂದೆ ಬಂದಿದೆ. ಕಳ್ಳರು ಮತ್ತು ಮರವರುಗಳಲ್ಲಿ ತಲೆತಲಾಂತರಗಳಿಂದ ಬಂದ ಅವರ ಕುಲದ ಜನ್ಮಕಥೆಗಳು ಈ ಜನಾಂಗದ ಪ್ರಾಚೀನತೆಯನ್ನೆ ಸೂಚಿಸುತ್ತವೆ.* ರಾಮಾಯಣ ಕಾಲದಲ್ಲಿದ್ದವರೆಂದೂ ರಾಮನಿಗೆ ನೆರವಾದರೆಂದೂ ಮರವರ ದಂತಕಥೆಗಳು ಹೇಳುತ್ತವೆ. ಕಳವರ ಪರಂಪರೆಯು ಇದಕ್ಕೂ ಪ್ರಾಚೀನ ಕಾಲಕ್ಕೆ ಒಯ್ಯುತ್ತವೆ. ವೇದಕಾಲದ ವಾತಾವರವು ಅದರಲ್ಲಿದೆ.

> ಅಹಲ್ಯೆಯ ಚೆಲುವಿಕೆಗೆ ಮನಸೋತ ಇಂದ್ರನು ಅವಳನ್ನು ಮದುವೆಯಾಗಬೇಕೆಂದು ಹಾರೈಸಿದನು. ಆದರೆ ಗೌತಮನು ಅವಳನ್ನು ವರಿಸಿದನು. ಗೌತಮನು ಇಲ್ಲದಾಗ ಇಂದ್ರನು ಅಹಲ್ಯೆಯೊಡನೆ ಇಟ್ಟ ಸಂಬಂಧದಿಂದ ಮೂರು ಮಕ್ಕಳಾಗಿದ್ದರಂತೆ. ಗೌತಮನು ಆಶ್ರಮಕ್ಕೆ ಬಂದಾಗ ಒಮ್ಮೆ ಈ ಮೂವರಲ್ಲಿ ಒಬ್ಬನು ಗೌತಮ ಋಷಿಯ ಎದುರಿಗೆ ಬರಲು ಅಂಜಿ ಕದದ ಹಿಂದೆ ಅಡಗಿದನು. ಆದುದರಿಂದ ಈತನಿಗೆ 'ಕಳ್ಳ' ನೆಂದು ಹೆಸ

* CTS. III. p. 62-63; & V. p. 25

ರಾಯಿತು. ಈತನ ಸಂತತಿಯೆ ಕಳವರು; ಕಳ್ಳರು. ಇನ್ನೊಬ್ಬನು ಆ ಋಷಿಯನ್ನು ಕಂಡು ಮರವನ್ನೇರಿ ದನು. ಇವನೇ ಮರವನು. ಈತನ ಪೀಳಿಗೆಗೆ ಮರವ ರೆಂಬ ಹೆಸರು. ಮೂರನೆಯವನು ಎದೆಗೊಟ್ಟು ಗೌತ ಮನ ಎದುರು ಬಂದು ನಿಂತನಂತೆ. ಇವನು ಅಭಿ ಮಾನಿ. ಅಹಮುಡಿಯ ಎಂದು ಈತನಿಗೂ, ಈತನ ವಂಶಕ್ಕೂ ಹೆಸರಾಯ್ತು.

ಇದೇ ಬಗೆಯ ಇನ್ನೂ ಒಂದು ಕತೆಯುಂಟು. ಸ್ವಲ್ಪ ಹೆಚ್ಚು ಕಡಿಮೆ ಇದ್ದರೂ ಮುಖ್ಯಾಂಶಗಳೆಲ್ಲ ಎರಡರಲ್ಲೂ ಒಂದೇ. ಇಂತು ಕಳವರು ಮತ್ತು ಮರವರ ಪೂರ್ವ ಪರಂಪರೆಯು ಕಥೆಗಳಿಂದ ಇವರ ಸಂಬಂಧವು ಇಂದ್ರನ ವರೆಗೆ ಹೋಗಿ ಮುಟ್ಟುತ್ತಲಿದೆ. ಅಥವಾ ಇನ್ನೊಂದೆಡೆಯಲ್ಲಿ ವಿವರಿಸಿದಂತೆ ನೋಡಿದರೂ ಯದು–ತುರುವಸುಗಳ ಉಲ್ಲೇಖಗಳಿಂದ ಋಗ್ವೇದ ಕಾಲದಲ್ಲಿ ಈ ಜನಾಂಗದ ಕುರುಹುಗಳು ಸಿಕ್ಕುತ್ತವೆ ಭಾರತದೊಳಗಿನ ಯಯಾತಿಯ (ಯದುತುರುವಸುಗಳ ತಂದೆ) ಕತೆಯನ್ನು ಈ ಸಂದರ್ಭದಲ್ಲಿ ನೆನೆದುಕೊಳ್ಳ ಬೇಕು. ಶುಕ್ರಾಚಾರ್ಯನ ಮಗಳು ದೇವಯಾನಿಯನ್ನು ಯಯಾತಿಯು ಮದುವೆಯಾದನು. ಇದು ಪ್ರತಿಲೋಮವಿವಾಹ. ಅಹಲ್ಯೆಯ ಕಥೆಯೆ ಆಗಲಿ, ದೇವಯಾನಿಯ ಕಥೆಯೆ ಆಗಲಿ ಕರ್ಣಾಟದ ಮೊದಲಿಗರ ವಿಚಾರ ದಲ್ಲಿ ಒಂದು ನೂತನ್ನು ಸ್ಪಷ್ಟೀಕರಿಸುತ್ತಲಿದೆ. ಕರ್ಣಾಟದ ಉಗಮದಲ್ಲಿಯೆ ಆರ್ಯ–ದ್ರಾವಿಡಗಳ 'ಕೂಡಲ-ಸಂಗಮ' ವಾಗಿರುವುದು ಈ ಕಥೆಗಳಿಂದ ಹೊರಬರುತ್ತದೆ. ಕನ್ನಡಿಯೂ ಈ ಮಾತಿಗೆ ಸಾಕ್ಷಿಯಾಗಿದೆ. ಕನ್ನಡಿಯಲ್ಲಿ ಒಂದುಗೂಡಿ–ಏಕಜೀವವಾಗಿರುವ ದ್ರಾವಿಡ ಮತ್ತು ಸಂಸ್ಕೃತ ಶಬ್ದಗಳನ್ನು ಸಂಪೂರ್ಣ ಬೇರ್ಪಡಿಸುವದಕ್ಕೆ ಅಸಾಧ್ಯವಾಗಿದ್ದುದರ ಕಾರಣವೇನು? ಆರ್ಯ ದ್ರಾವಿಡರ ಸಮ್ಮಿಲನಕ್ಕೆ ಋಗ್ವೇದಕಾಲದಲ್ಲಿಯೇ ಆರಂಭವಾಗಿದ್ದಿತೆಂದು ಪ್ರಿಲಸ್ಕಿ ಮೊದಲಾದ ವಿದ್ವಾಂಸರು ಊಹಿಸುತ್ತಿದುದು ವಿಚಾರಣೀಯವಾಗಿದೆ. ವೇದ, ಉಪನಿಷತ್ತು, ಬ್ರಾಹ್ಮಣಗಳಲ್ಲಿ ಎಷ್ಟೋ ದ್ರಾವಿಡ ಶಬ್ದಗಳು ಸಿಕ್ಕುತ್ತ ವೆಂದು ವಿದ್ವಾಂಸರು ಕಂಡು ಹಿಡಿದಿರುವುದು ಮೇಲಣ ಮಾತಿಗೆ ಪೋಷಕವಾ ಗಿದೆ. ಕಳವರ—ಕಣ್ಣರ ಆರ್ಯೀಕರಣಕ್ಕೆ ಅತಿ ಪ್ರಾಚೀನಕಾಲದಲ್ಲಿಯೇ

ಆರಂಭವಾಗಿ ಮೂಲದ್ರಾವಿಡವರ್ಗದಲ್ಲಿ ಕವಲು ಒಡೆದುವೆಂದು ಹೇಳಬಹು ದಾಗಿದೆ. ಇವರೇ *ಕಣ್ಣಾ*ರಾಗಿರಬೇಕು. ಕಳವರು ಮೂಲದ್ರಾವಿಡರು; *ಕಣ್ಣಾ*ರು ಆರ್ಯದ್ರಾವಿಡರು. ಈ ಬಗೆಯಾದ ಆರ್ಯ ದ್ರಾವಿಡರ ಮಿಶ್ರ ಣದ ಫಲವೆ ಕರ್ಣಾಟ ಮತ್ತು ಕರ್ಣಾಟ ಸಂಸ್ಕೃತಿಯು.

ತೀರ ಪ್ರಾಥಮಿಕ ಸ್ಥಿತಿಯಲ್ಲಿರುವ ಜನಗಳಷ್ಟು ಪರಂಪರಾಪ್ರೀತಿಯು—ಹಳೆಯದೆಲ್ಲವೂ ಹೊನ್ನು ಎಂಬ ಭಾವದಿಂದ ಪುರಾಣಪದ್ಧತಿಗಳಿಗೇ ಅಂಟಿ ಕೊಂಡಿರುವ ಸ್ವಭಾವವು ಸುಧಾರಣೆಯ ಮೇಲಣ ಮಟ್ಟದಲ್ಲಿ ಇದ್ದವರೊಳಗೆ ಇರುವುದಿಲ್ಲ. ಸಂಪ್ರದಾಯ ಶರಣನಾಗಿರುವುದು ಸಾಮಾನ್ಯವಾಗಿ ಮನುಷ್ಯ ಸ್ವಭಾವವೇ ಆಗಿದ್ದರೂ ಈ ಗುಣವು ಕೆಲವು ಜನಗಳಲ್ಲಿ ಹೆಚ್ಚು, ಇನ್ನು ಕೆಲವು ಜನಗಳಲ್ಲಿ ಕಡಿಮೆ ಪ್ರಮಾಣದಲ್ಲಿರುವುದು ಕಂಡುಬರುತ್ತದೆ. ಆರ್ಯರು ಕಾಲಮಾನಕ್ಕನುಸರಿಸಿ ಬದಲಾಗುತ್ತ ಮುಂದೆ ನಡೆವ ಜನಾಂಗದವರಾದುದ ರಿಂದ ಇವರು ತೀರ ಆರಂಭದಲ್ಲಿ ಅದಾವ ಸ್ಥಿತಿಯಲ್ಲಿದ್ದರೆಂಬುದನ್ನು ಬರಿ ಊಹಿಸ ಬೇಕಾಗಿದೆಯೆ ಹೊರತು ಅವರ ಪ್ರಾಥಮಿಕ ಸ್ಥಿತಿಯ ಅವಶೇಷ ಗಳನ್ನು ಈಗ ಪ್ರತ್ಯಕ್ಷ ನೋಡಲಿಕ್ಕೆ ಸಿಕ್ಕುವುದಿಲ್ಲ. ಆದರೆ ದ್ರಾವಿಡರಲ್ಲಿ ಇಂತಹ ಕೆಲವು ತಂಡಗಳು ಇನ್ನೂ ಉಳಿದಿರುವುದನ್ನು ಕಾಣಬಹುದಾಗಿದೆ. ಏಕೆಂದರೆ ಆರ್ಯರಿಗಿಂತಲೂ ಇವರು ಬದಲಾವಣೆಗೆ ಹೆಚ್ಚು ಬೇಸರಪಟ್ಟು ಕೊಳ್ಳುವ ಜನಾಂಗ. ಕಳವರು ಮತ್ತು ಮರವರೆ ಇದಕ್ಕೆ ನಿದರ್ಶನ.

ಕಳವರು ಎಂದರೆ ಗೋವಳರು; ತುರುಕಾರರು. ದನವೇ ಇವರ ಧನ. 'ಪರಾಕ್ರಮ' ವು ಒಂದು ಆದರ್ಶಗುಣವಾಗಿದ್ದ ಅತಿಪುರಾತನ ಕಾಲದಲ್ಲಿ ಪರ ರನ್ನು ಆಕ್ರಮಿಸಿ ಅವರ (ಗೋ)ಧನವನ್ನು ಗೆದ್ದುಕೊಂಡು ಬರುವುದರಲ್ಲಿ ಆ ಕಾಲದ ಜನಗಳಿಗೆ ಹೆಮ್ಮೆಯೆನಿಸುತ್ತಲಿತ್ತು. ಇಂದ್ರನು ೯೯ ಪುರಗಳನ್ನು ನಾಶಮಾಡಿ ದಸ್ಯುಗಳ ಧನಕನಕಾದಿ ವಸ್ತುಗಳನ್ನು ಸೂರೆಗೆಯ್ದನೆಂದು ವೇದಗಳು ಹೊಗಳುತ್ತವೆ. ಕಳವರಿಗೂ 'ಧನ' ಸಂಪಾದನೆಯ ಹಂಬಲವು ಕಡಿಮೆ ಇದ್ದಿಲ್ಲ. ದಸ್ಯುಗಳೂ ಪಣಿಗಳೂ ಆರ್ಯರ ಗೋಧನವನ್ನು ಹರಣ ಮಾಡುತ್ತಿದ್ದುದರ ವರ್ಣನೆಗಳು ಅದೇ ವೇದದಲ್ಲಿವೆ. ದನವೇ ಧನವೆಂದು ಅತಿ ಪುರಾತನಕಾಲದಲ್ಲಿ ನೆರೆನಂಬಿದ್ದ ಕಳವರು ಮತ್ತು ಮರವರು ಇಂದಿನ ಬದಲಾದ ಪರಿಸ್ಥಿತಿಯೊಳಗೂ ಅದೇ ಬಗೆಯ ಭಾವನೆಯುಳ್ಳವರಾಗಿದ್ದಾರೆಂದು

ಅವರ ಇಂದಿನ ಕೃತಿಗಳ ಮೇಲಿಂದ ವ್ಯಕ್ತವಾಗುತ್ತಲಿದೆ. ದನಗಳನ್ನು ದೋಚಿಕೊಂಡೊಯ್ವಲ್ಲಿ ಕಳವರ ಮತ್ತು ಮರವರ ನೈಪುಣ್ಯವು ಆಶ್ಚರ್ಯಕರವಾಗಿದೆ ಎಂದು ಥರ್ಸಟನ್‌ರು ಸಂಗ್ರಹಿಸಿರುವ ಬೇರೆಬೇರೆ ಕಾಲದ ವರ್ಣನೆಗಳಿಂದ ಗೊತ್ತಾಗುತ್ತದೆ.

> Cattle-theft is now the most popular calling among them (Kallars)· They are clever at handling animals. (Vol. III, p· 67)

> (Maravaras) Most expert cattle-lifters in the presidency· (Vol. V· p. 28)

ಇವರ ಪುರಾಣಪ್ರಿಯತೆಯನ್ನು ಕಂಡು ಕೌತುಕಪಡುವಂತಹ ಇನ್ನೂ ಒಂದು ಸಂಗತಿಯಾಗಿದೆ. ಈ ಜನಗಳು ದನಗಳನ್ನು ದೋಚಿಕೊಂಡು ಬರಲು ಹೆರವರ ಮನೆಹೊಕ್ಕಾಗ ಆ ಮನೆಯವರ ಮೈಮೇಲಣ ಮುತ್ತುರತ್ನಗಳಿಗೆ ಆಸೆಪಟ್ಟುಕೊಳ್ಳದೆ ಕೇವಲ ದನಗಳನ್ನೇ ಓಡಿಸಿಕೊಂಡೊಯ್ಯುವರಂತೆ! ಈ ಲೇಖಕರಿಗೆ ದೊರೆತ ಇನ್ನೂ ಹೆಚ್ಚಿನ ಸಂಗತಿಗಳನ್ನು ಕುರಿತು ಅವರು ಬರೆಯುವದೇನೆಂದರೆ:

> I gather the following additional information 'the Kallars are largely guilty of cattle-thefts. In many cases they return the cattle on receiving tappukooli.'
>
> (Vol. III, p. 69)

ಅತಿ ಪುರಾತನ ತಮಿಳ ಸಾಹಿತ್ಯದಲ್ಲಿ ಬರುವ ಕಳವರ ( ವಡುಕರ ) ವರ್ಣನೆಗಳಲ್ಲಿಯೂ ದನಗಳನ್ನು ದೋಚಿಕೊಂಡು ಹೋಗುವ ಅವರ ಸ್ವಭಾವವೇ ಎದ್ದುಕಾಣುತ್ತದೆ.

> The chief function of (Tamil) kings was to protect the land from cattle-lifters. The cattle was lifted either by predatory chieftains, the heads of the Maravar or Kallar clans, or by neighbouring Rajas (as a challenge to the Raja

of the country ).

× × ×

ವೇದಕಾಲದಲ್ಲಿ ಕೆಲವೊಂದು ದನಗಳ್ಳರಿದ್ದುದು ಕಂಡುಬರುತ್ತದೆ. * ಇವರಿಗೆ ಸ್ತೇನ, ತಾಯು, ತಸ್ಕರ ಎಂದು ಹೆಸರುಗಳಿವೆ. 'ಹಟ್ಟಿಯನ್ನು ಹೊಕ್ಕ ಸ್ತೇನ' (X. ೯೭ ೧೦), 'ದನಗಳನ್ನು ತೃಪ್ತಮಾಡಿದ ತಾಯು' ( VII. ೮೬.೫ ), 'ಪಶುಗಳನ್ನು ಅಡಗಿಸಿಟ್ಟ ಕಳ್ಳ' (I. ೬೫ ೧) ಎಂದು ಮುಂತಾಗಿರುವ ಉಲ್ಲೇಖಗಳೆ ಇದಕ್ಕೆ ಸಾಕ್ಷಿ. ಸ್ತೇನ, ತಸ್ಕರರು ದಾರಿ ಹೊಡೆಯುವ ದಂಡುಗವನ್ನೂ ಮಾಡುತ್ತಿದ್ದುದರ ವರ್ಣನೆಗಳು ಋಗ್ವೇದ ದಲ್ಲಿವೆ; ಆದರೆ ಅಥರ್ವವೇದದಲ್ಲಿ ಈ ಹೆಸರಿನವರು ದನಗಳನ್ನು ದೋಚಿ ಕೊಂಡು ಹೋಗುವವರೆಂದೇ ಸ್ಪಷ್ಟವಾಗಿದೆ.†

ಈ ಸ್ತೇನರುಗಳು ಯಾರು ಇರಬಹುದು? ಆರ್ಯೇತರ ಪಂಗಡದವ ರಾಗಿರುವ ಸಂಭವವೆ ಹೆಚ್ಚಾಗಿಲ್ಲವೆ? ಹಾಗಾದರೆ ವೇದಕಾಲದಲ್ಲಿದ್ದ ಆರ್ಯೇ ತರ ಪಂಗಡಗಳು ಎರಡೇ: ದ್ರಾವಿಡರು ಮತ್ತು ಕೋಲರು. ವಾಜಸನೇಯ ಸಂಹಿತೆಯಲ್ಲಿ 'ಮಲಿಮ್ಲು' ಎಂಬ ಹೆಸರಿನ ಕೆಲವು ಕನ್ನಗಾರರನ್ನು ಹೇಳಿದ್ದು ಇವರು ಸ್ತೇನರಿಂದ ಭಿನ್ನರೆಂದು ಸೂಚಿಸಿದ್ದಾಗಿದೆ. 'ಮಲಿಮ್ಲು'ಗಳು ಮನೆಗೆ ಕನ್ನವಿಕ್ಕುವ, ತುಡುಗು ಮಾಡುವ ಜನಗಳು. ಆದರೆ ಸ್ತೇನರು ಇದಕ್ಕೂ ಹೆಚ್ಚಿನವರು; ಅರಣ್ಯದಲ್ಲಿ ಮುತ್ತಿ ಹೊಡೆಯುವವರು; ಎಂದು ಆ ಸಂಹಿತೆ ಯಿಂದ ಅರಿತುಕೊಳ್ಳಬಹುದಾಗಿದೆ § 'ಮಲಿಮ್ಲು' ಎಂಬ ಹೆಸರು ಕೋಲ ಜನಾಂಗಕ್ಕೆ ಸಂಬಧಿಸಿದುದಾಗಿರಬೇಕೆಂದು ಹೇಳಬಹುದಾಗಿದೆ. ಇದು ಸಂಸ್ಕೃತ ಅಥವಾ ದ್ರಾವಿಡಭಾಷೆಗೆ ಸಂಬಧಿಸಿದ ಶಬ್ದವೇ ಅಲ್ಲ. ಇವೆರಡೂ ಭಾಷೆಗಳಿಂದ ಇದಕ್ಕೆ ಅರ್ಥವಾಗುವುದಿಲ್ಲ. 'ಸ್ತೇನ'ರು ಆರ್ಯಪಂಗಡದವ ರಾಗಿರುವ ಸಂಭವವಿಲ್ಲ. ಸ್ತೇನರು ಮತ್ತು ತಸ್ಕರರುಗಳು, ಇನ್ನುಳಿದ ಕಡೆಯು

* Vedic Index, Vol. I, pp, 302; 304.

† The Atharva veda reters to the Stena and the Taskar as cattle and horse thieves,—Vedic Index.

§ Ibid, Vol, II, p. 302.

ಉಲ್ಲೇಖಗಳನ್ನು ವಿಚಾರಿಸಿದರೆ ಇವರು ಆರ್ಯೇತರ ಪಂಗಡಕ್ಕೆ ಸಂಬಂಧಿಸಿದವರಾಗಿರಬೇಕೆಂಬ ಊಹೆಯು ಬಲಪಡುತ್ತದೆ.

ಯಜುರ್ವೇದದ ರುದ್ರಾಧ್ಯಾಯದೊಳಗಿನ ಹಲವು ವರ್ಣನೆಗಳು ಈ ದೃಷ್ಟಿಯಿಂದ ಅತ್ಯಂತ ಮಹತ್ತ್ವದುವುಗಳಾಗಿವೆ. ರುದ್ರನೆ ಒಮ್ಮೆ ದೇವಲೋಕದಲ್ಲಿ ಕಳವು ಮಾಡಿದನೆಂಬ ಒಂದು ಕಥೆಯನ್ನು ಸಾಯನರು ಹೇಳುತ್ತಾರೆ!§ ಆದುದರಿಂದ ಪ್ರತ್ಯಕ್ಷ ರುದ್ರನು ಕಳ್ಳನಾದ. ಇವನ ಅನುಯಾಯಿಗಳೆಲ್ಲರೂ ಇದೇ ಬಗೆಯವರೇ. ನಮ್ಮ ಈ ಭಾಗದ ಮಾಧ್ವರಲ್ಲಿ ಬಳಕೆಯಲ್ಲಿರುವ ಒಂದು ಪಡೆನುಡಿಯು (idiom) ಅನಾದಿಕಾಲದ ಈ ಪರಂಪರೆಯನ್ನು ಇಂದಿನ ಕಾಲದವರೆಗೆ ತಂದುಪಚ್ಚುವುದು; 'ಹುಡುಗನು ರುದ್ರ ಓದುತ್ತಲಿದ್ದಾನೆ' ಎಂದರೆ ಕಳವು ಮಾಡುವ ಅಭ್ಯಾಸದಲ್ಲಿದ್ದಾನೆ ಎಂಬುದು ಆ ಪಡೆನುಡಿಯಲ್ಲಿರುವ ವಿಶೇಷಾರ್ಥವು!

ರುದ್ರ–ಶಿವನು ಆರ್ಯರ ದೇವತೆಯೇ ಅಲ್ಲವೆಂದೂ ಆತನು ದ್ರಾವಿಡರ ದೇವತೆಯೆಂದೂ 'ಶಿವರಹಸ್ಯ'ದಲ್ಲಿ ಸ್ವಲ್ಪ ವಿಸ್ತಾರದಿಂದ ಈ ಮೊದಲೆ ವಿವೇಚಿಸಿದ್ದಾಗಿದೆ. ಆದುದರಿಂದ ಇಲ್ಲಿ ಮತ್ತೆ ಆಡಿದ್ದೇ ಆಡುವುದು ಬೇಡ. ರುದ್ರಾಧ್ಯಾಯದಲ್ಲಿ ಸ್ತೇನ, ತಸ್ಕರ, ಸ್ತಾಯುಗಳ ಹೆಸರು ಬರುವುವು. ಆದರೆ ಇವರ ವ್ಯವಸಾಯ ಬಂಧುಗಳಾದ 'ಮಲಿಮ್ಲು'ಗಳ ಉಲ್ಲೇಖವಿಲ್ಲ! ಶಿವನಿಗೆ 'ಸ್ತೇನಾನಾಂ ಪತಯೇ ನಮಃ,' 'ಸ್ತಾಯೂನಾಂ ಪತಯೇ ನಮಃ' ಎಂದು ಹೇಳಿದ್ದುಂಟು. ಆದರೆ 'ಮಲಿಮ್ಲೂನಾಂ ಪತಯೇ ನಮಃ' ಎಂದು ಒಂದೆಡೆಯಲ್ಲಿಯೂ ಇಲ್ಲ. ಶಿಶ್ನ—'ಲಿಂಗ'ಪೂಜೆಯು ಮಲಿಮ್ಲುಗಳ (ಕೋಲರ) ವರ್ಗದವರದು. ವೇದಕಾಲದಲ್ಲಿ ಶಿವ (ರುದ್ರ) ಮತ್ತು 'ಲಿಂಗ' ಇವೆರಡೂ ಒಂದೇ ಎಂದು ತಿಳಿಯಲ್ಪಡುತ್ತಿದ್ದಿಲ್ಲ.† ಆದುದರಿಂದಲೆ ಶಿವ (ರುದ್ರ) ನ ಅನುಯಾಯಿಗಳ ಸಾಲಿನಲ್ಲಿ ಮಲಿಮ್ಲುಗಳ ಉಲ್ಲೇಖವಿಲ್ಲ.

ಶಿವನು ಪ್ರಸನ್ನನಾಗಬೇಕೆಂದು ರುದ್ರಾಧ್ಯಾಯದ ಮಂತ್ರಗಳಿಂದ ಮಹಾ ಅಭಿಷೇಕಗಳನ್ನು ಮಾಡುವುದುಂಟು ಈ ಮಂತ್ರಗಳು ಸಂಸ್ಕೃತದಲ್ಲಿವೆ. ಮಂತ್ರಗಳ ಅರ್ಥದ ಕಡೆಗೆ ಮನಸುಗೊಟ್ಟು ಅವುಗಳನ್ನು ಹೇಳುವ

---

§ ಶಿರ. ಪುಟ ೯

† ಶಿರ. ಪು. ೨೯–೩೭

ಪದ್ಧತಿಯು ನಮ್ಮಲ್ಲಿ ಉಳಿದೇ ಇಲ್ಲ! ಈ ಅರ್ಥವು ತಿಳಿದಿದ್ದರೆ ನಮ್ಮ ಆಚಾರ ವಿಚಾರಗಳಲ್ಲಿ—ಕುಲಧರ್ಮ, ಕುಲಾಚಾರಗಳಲ್ಲಿ ಇದಕ್ಕಿಂತಲೂ ಎಷ್ಟೋ ಹೆಚ್ಚು ಜೀವಂತತನವನ್ನು ಕಾಣಬಹುದಾಗಿತ್ತು. ನಾವು ಬಾಯಿಂದ ಹೇಳುವ ಮಂತ್ರವೇನು? ಮಾಡುವ ಕೃತಿಯೇನು? ಇವು ಪರಸ್ಪರ ಸುಸಂಬದ್ಧವಾಗಿವೆಯೆ? ಅಸಂಬದ್ಧವಾಗಿಯೆ? ಇದಾವುದರ ಅರಿವು ಇದ್ದರಲ್ಲವೆ ಮುಂದಿನ ವಿಚಾರ! ಇವಾಗ ರುದ್ರಾಭಿಷೇಕದ ಕಾಲಕ್ಕೆ ನಾವು ಹೇಳುವ ಮಂತ್ರಗಳೇನು?

> 'ನಮಃ ಕಕುಭಾಯ ನಿಷಂಗಿಣೇ ಸ್ತೇನಾನಾಂ ಪತಯೇ ನಮಃ'; 'ನಮೋ ನಿಷಂಗಿಣ ಇಷುಧಿ ಮತೇ ತಸ್ಕರಾಣಾಂ ಪತಯೇ ನಮಃ'; 'ನಮೊ ವಂಚತೇ ಪರಿವಂಚತೇ ಸ್ತಾಯೂನಾಂ ಪತಯೇ ನಮಃ'; 'ನಮೊ ನಿಚೇರವೇ ಪರಿಚರಾಯಾಽರಣ್ಯಾನಾಂ ಪತಯೇ ನಮಃ'; 'ನಮಃ ಸೃಕಾವಿಭ್ಯೋ ಜಿಘಾಂಸದ್ಭ್ಯೋಮುಷ್ಣತಾಂ ಪತಯೇ ನಮಃ'; 'ನಮ ಉಷ್ಣೀಷಿಣೇ ಗಿರಿಚರಾಯ ಕುಲುಂಚಾನಾಂ ಪತಯೇ ನಮಃ'.

ಇಂತೀ ಬಗೆಯಾಗಿ ರುದ್ರಾಧ್ಯಾಯದಲ್ಲಿ ಬಗೆಬಗೆಯ ಕನ್ನಗಾರರ ಮತ್ತು ತುಡುಗರ ಉಲ್ಲೇಖಗಳಿವೆ. ಇವರೆಲ್ಲರೂ ಆರ್ಯ-ವಿರೋಧಿಗಳು. ಆರ್ಯರನ್ನು ನಾನಾತೆರದಿಂದ ಪೀಡಿಸುತ್ತಿದ್ದವರು,* ಎಂದು ಹೇಳಬಹುದಾಗಿದೆಯೆ ಹೊರತು ನಮ್ಮನೆ ತುಡುಗು ಹೊಡೆದಾಟಗಳನ್ನು ಕೈಕೊಂಡಿರುವ ಜನಗಳೆಂದು ಅರ್ಥ ಮಾಡುವುದು ಅಷ್ಟು ಸಮರ್ಪಕವಾಗಿ ತೋರುವುದಿಲ್ಲ. ತುಡುಗರ ದೇವರು ನೀನು, ಎಂದು ಶಿವನಿಗೆ ಹೇಳಿದರೆ ಶಿವನೂ ಒಬ್ಬ ಹಿರಿತುಡುಗನೆಂದಂತಾಗಲಿಲ್ಲವೆ?

ಇನ್ನೂ ಸ್ವಲ್ಪ ಬೇರೆ ದೃಷ್ಟಿಯಿಂದ ಇದನ್ನು ಪರ್ಯಾಲೋಚಿಸುವುದು ಅವಶ್ಯವಿದೆ. ಇನ್ನು ಮುಂದೆ ಮುಸಲ್ಮಾನರ ದೇವರನ್ನು ಹಿಂದೂ ಜನರು ಸ್ವೀಕರಿಸಿದರೆಂದು ಗ್ರಹಿಸಿ. ಆಗ ಆ ದೇವನನ್ನು ಕವಿಯು ಹೇಗೆ ವರ್ಣಿಸ

* ಶಿರ. ಪುಟ ೫೫–೫೮

ಬಹುದು? 'ಎಲ್ಲೈ ಜೆಂಡಿಕೆ ಇಲ್ಲದ (ನಿಶಿಖಾಸಃ) ದೇವನಿಗೆ ನಮುಸ್ಕಾರ; ತುಂಡುಜನಗಳ ದೇವನಿಗೆ (ಪುಷ್ಟಾನಾಂ ಪತಯೇ) ನಮುಸ್ಕಾರ; ಹಿಂಸೆಗೆ ಹೆಸದವರ ದೇವರೆ........' ಎಂಬೀ ಬಗೆಯಾಗಿಯೆ ಹೊಗಳಬೇಕಾದೀತಲ್ಲವೆ? ರುದ್ರ–ಶಿವದ ನಿಜಸ್ಥಿತಿಯೂ ಹಾಗೆಯೆ ಇದೆ. ಇವನು ಪತಿತರ ದೇವರೆಂದು, ವ್ರಾತ್ಯರ ದೇವರೆಂದು ಅಥರ್ವವೇದವು ಹೇಳುತ್ತದೆ. ಕರಣ(ನಟ)ರು ವ್ರಾತ್ಯ ರೆಂದು ಮನುವು ಹೇಳುತ್ತಾನೆ. ಕರಣರೇ—ಕಣ್ಣರು—ಕಳ್ಳರು ಎಂಬ ಮಾತ್ನು ಸಿದ್ಧವಿದೆ. ಆದುದರಿಂದ ಶಿವನು 'ಕಳ್ಳರ ದೇವರು' ಎಂಬುದು ಈ ಅರ್ಥ ದಿಂದ. ಶಿವನು 'ಸ್ತೇನಾನಾಂ ಪತಿ' ಎಂಬುದು ನಿಜ. ಆದರೆ ಸ್ತೇನರು ಎಂಬುದು ಕೇವಲ ಉದ್ಯೋಗವಾಚಿಯಲ್ಲ. ಆಗ ಈ ಉದ್ಯೋಗವನೂ ಮಾಡುತ್ತಲಿರಬಹುದು. ಆದರೂ ಆ ಉದ್ಯೋಗದಿಂದಲೆ ಅವರಿಗೆ ಈ ಹೆಸರು ಬಂದುದಲ್ಲ. ಕಳವರು ಮೂಲದಲ್ಲಿ ಗೋವಳರು; ಕರ್ಣರು—ಕಣ್ಣರೇ ಕಳ್ಳ ರೆಂಬುದು ನಿಜವಿದ್ದರೆ ಈ ಜನಗಳು ಹಟ್ಟಿಕಾರ–ದನಗಾರರಾಗಿದ್ದರೆಂಬುದು ನಿಶ್ಚಿತ. 'ಕರ್ಣ' ಎಂಬ ಹೆಸರಿನ ಪ್ರಾಥಮಿಕ ಅವಸ್ಥೆಯೊಳಗಿನ ಒಂದು ಜಾತಿಯಿದ್ದು, ಅವರೂ ಕೆಲರು ಈಗಲೂ ಗೋವಳರಾಗಿಯೇ ಇರುವರು, ಎಂದು ಹಿಂದೆ ವಿವರಿಸಿದೆ.

ಹಗೆಗಳನ್ನು ಮನಬಂದಂತೆ ತೆಗಳುವುದು ಮನುಷ್ಯಸ್ವಭಾವ. ಹೆರವರ ಮೇಲೆ ತಾನು ಏರಿ ಹೋದರೆ ಅದು ಪರಾಕ್ರಮ; ಜೈತ್ರಯಾತ್ರೆ; ಹೆರವರು ಏರಿಬಂದರೆ ಪರಪೀಡೆ; ಸುಲಿಗೆ. ಮುಸಲ್ಮಾನ ಇತಿಹಾಸಕಾರರು ಶಿವಾಜಿಗೆ ಕಳವು ಸುಲಿಗಾರನೆಂದಂತೆ ತಮಗೆ ಬೇಕು ಆದವರು 'ಗೆದ್ದು' ತಂದರೆಂಬು ವುದು; ಆಗದವರು ಒಯ್ದರೆ 'ಅಪಹರಿಸಿದರು' 'ಕದ್ದರು' ಎಂಬುವುದು. ಆದುದರಿಂದ ಎದುರಾಳಿಗಳು ಎದುರಾಳಿಗಳನ್ನು ವರ್ಣಿಸಿದ್ದುದನ್ನು ಓದುವಾಗ ಸ್ವಲ್ಪ ಎಚ್ಚರವಿರುವುದು ಲೇಸು. ಇದರಿಂದ ಕಳವರು ಬಹಳ ಒಳ್ಳೆಯವ ರೆಂದು ಹೇಳುವ ಉದ್ದೇಶವುಂಟೆಂದು ಭಾವಿಸಲಾಗದು. ನಿಜಸ್ಥಿತಿಯ ಅರಿವು ಉಂಟಾಗಬೇಕೆಂಬುದು ಹಿರಿಗುರಿ. ಕಳವರು ತುಂಟರೂ, ಹೊಡೆದಾಟಕ್ಕೆ ಸಿದ್ಧರೂ ಆಗಿದ್ದರೆಂಬುದು ಸುಳ್ಳಲ್ಲ. ಇನ್ನೂ ಒಂದು ವಿಶೇಷ. ಕಳವರು (ಮರವರು. ವಡುಕರು) ಇವರನ್ನು ಪ್ರಾಚೀನ ತಮಿಳರೂ ಆತ್ಮೀಯತೆಯಿಂದ ನೋಡಲಿಲ್ಲ. ಆರ್ಯರಂತು ಹಾಗೆ ಭಾವಿಸುವುದು ಸಾಧ್ಯವೆ ಇಲ್ಲ. ಪ್ರಾಚೀನ

ತಮಿಳ ಸಾಹಿತ್ಯದಲ್ಲಿರುವಂತೆ ರುದ್ರಾಧ್ಯಾಯದಲ್ಲಿಯೂ ಕಳವರನ್ನು ಹೀಯಾಳಿಸಿದ್ದುದುಂಟು. ಆದರೆ ಇವೆರಡೂ ವರ್ಣನೆಗಳಲ್ಲಿರುವ ಸಾಮ್ಯವು ಸೋಜಿಗವನ್ನುಂಟುಮಾಡುವಂತಿದೆ! ಪ್ರಾಚೀನ ತಮಿಳ ಸಾಹಿತ್ಯದೊಳಗಿನ ಕಳವರ ಉಲ್ಲೇಖಗಳೊಡನೆ ಥರ್ಸಟನ್ ಸಾಹೇಬರು ಸಂಗ್ರಹಿಸಿದ ಆಧುನಿಕ ಕಾಲದ ವರ್ಣನೆಗಳನ್ನೂ ಸೇರಿಸಿ ಅವನು ರುದ್ರಾಧ್ಯಾಯಗಳೊಳಗಣ ಸ್ತೇನ ತಸ್ಕರಾದಿಗಳ ರೀತಿ ನೀತಿಗಳೊಡನೆ ಹೋಲಿಸಿದರೆ ಸಾಕು: ಆ ಕಳವರೂ ಈ ಸ್ತೇನರೂ ಅಭಿನ್ನರೆಂದು ಸಿದ್ಧಪಡಿಸುವುದಕ್ಕೆ ಬೇರೆ ಶ್ರಮ ವಹಿಸುವ ಕಾರಣವೇ ಇಲ್ಲ.

ಪುರಾತನ ತಮಿಳ ಸಾಹಿತ್ಯೋದಧಿಯನ್ನು ಕಡೆದು ಅದರಲ್ಲಿ ಬಂದ ಉಲ್ಲೇಖಗಳ ಸಾರವನ್ನು ಡಾ. ಕೃಷ್ಣಸ್ವಾಮಿ ಅಯ್ಯಂಗಾರರು ಹೀಗೆ ಹೇಳಿದ್ದಾರೆ*

> The general trend of all this description is to make them a class of hunters. Their chief occupation was cattle-raiding by cruel dogs. Entering into their territory language changed.
>
> They were habitually resident in forests and lived by way-laying travellers. They worshipped 'Nadukal' (stones planted in honour of warrsiors that fell in battle), and offered sacrifices to them. These are again referred to as uneducated and with raised bows, and entering their country, language changed. The forest ways infested by these Mallavar, says Mamulanar.

ಈ ಜನಗಳೆಲ್ಲ ದನಗಾರರು—ಗೋವಳರು ಆಗಿದ್ದರೆಂದೂ ಇವೇ ಗ್ರಂಥಗಳಿಂದ ಹೊರಬರುತ್ತದೆ.†

* SIS, pp. 24, 25, 26 † Ibid p. 159-160

> We have pointed out already that the whole border land of the Tamils beyond this was occupied by a race of people known to them by the generic name Vadukar whose profession was cattle raiding. That this rigion was divided among a number of petty chieftains is also known ...They are also classed as cowherds (Idaiyar).

ಈ ಜನಗಳು ಗೋವಳರೆಂಬುದಕ್ಕೆ ಇನ್ನೂ ಎರಡು ಪ್ರಮಾಣಗಳನ್ನು ಇಲ್ಲಿ ಕೊಡಬಹುದು. ಮದರಾಸಇಲಾಖೆಯಲ್ಲಿ ಆರ್ಕಾಟ ಮೊದಲಾದ ಕಡೆಗೆ 'ಕನ್ನಡಿಯರ್' ಎಂಬ ಜನಗಳಿದ್ದು ಅವರು ದನಗಾರರಾಗಿದ್ದಾರೆ. They are known as Goulis ಎಂದು ಆ ಭಾಗದ ಜಾತಿ ಜನಾಂಗಗಳನ್ನು ವಿವರಿಸುವ ಗ್ರಂಥದಿಂದ ಗೊತ್ತಾಗುತ್ತದೆ ‡ ಉತ್ತರದಲ್ಲಿಯೂ ಇದೇ ಬಗೆಯ ಕುರುಹುಗಳು ದೊರೆಯುತ್ತಲಿದ್ದುದನ್ನು 'ಕಣ್ಮರೆಯಾದ ಕನ್ನಡ' ದಲ್ಲಿ ವಿವರಿಸಿದೆ (ಪುಟ ೪೧–೪೮). ನಾಸೀಕ, ಅಹಮ್ಮದನಗರ; ಖಾನದೇಶ ಜಿಲ್ಲೆಗಳಲ್ಲಿ ಕನ್ನಡ ಗೌಳಿಗಳಿದ್ದಾರೆ. ಇವರನ್ನು ಕುರಿತು ಖಾನದೇಶದ ಗ್ಯಾಝಿಟಿಯರಿನಲ್ಲಿ ಕನ್ನಡ ಗೋವಳರನ್ನು ಕುರಿತು ಬರೆದಿರುವುದು ಏನೆಂದರೆ: §

> 'Kannadas are a peculier race of drovers who some times visit the western forests of Khandesh, ........They appear to be descended from Dravidian immigrants but ( to our misfortune ) no tradition to the effect and special language. More civilized and respectable than most wandering herdsmen they differ little from Maratha—hasuband—men, and in parts of Nasik they have taken entirely to agriculture. They have a peculiar breed of black

‡ Khan. Gazett p. 106 § CTS- Vol. III, p. 200.

and white cattle, Hatakar ( ಹಟಕಾರ=ದನಗಳು ) which though not large are much prized for their strength and spirit....take good care of their cattle.

ತಮಿಳರ ನಾಡಿನ ಉತ್ತರಸೀಮೆಯವರು—ಎಂದರೆ ವಡಕರು ಗೋವಳ ರೆಂದು ಡಾ. ಕೃಷ್ಣಸ್ವಾಮಿಯವರು ವಿವರಿಸಿರುವ ತಮಿಳರ ಪ್ರಾಚೀನ ಕಾವ್ಯ ಗಳಿಂದಲೇ ಸಿದ್ಧವಾಗುತ್ತಲಿದೆ. ಕನ್ನಡಿಗರು ತಮಿಳರ ಉತ್ತರನಾಡಿನವರು. ಕನ್ನಡಿಯರು ಗೌಳಿಗಳೆಂದು ತಮಿಳ ಸೀಮೆಯಲ್ಲಿಯೂ 'ಕಾನಡರು' ಗೌಳಿ ಗಳೆಂದು ಮಹಾರಾಷ್ಟ್ರ ದೇಶದಲ್ಲಿಯೂ ಪ್ರತೀತಿಯುಂಟು. ಆಯಾ ಸೀಮೆ ಗಳಲ್ಲಿ ಈಗಲೂ ಅಲೆವ ಹಲವು ತಂಡಗಳೇ ಇದಕ್ಕೆ ದೃಷ್ಟಾಂತ. ಈ ಹಟ್ಟಿ ಕಾರ—ದನಗಾರರಾದ ಗೋವಳರು ಇವರೇ 'ಕಳವರು' 'ಕುರುನಿಲಮನ್ನೆಯ' ರಾಗಿದ್ದರೆಂದೂ ಪುರಾತನ ತಮಿಳ ಕಾವ್ಯಗಳಿಂದಲೆ ಗೊತ್ತಾಗುತ್ತದೆ. 'ಕಾನಡಾ ಗೌಳಿ' ಗಳ ವಿಚಾರವಾಗಿ ಬರೆಯುತ್ತ ಖಾನದೇಶ ಗ್ಯಾಝಿಟಿಯರಿನ ಲೇಖ ಕರು 'ಈ ನಾಡಿನಲ್ಲಿ ಪುರಾತನ ಕಾಲದಲ್ಲಿ ಗೋವಳರು ರಾಜ್ಯವಾಳಿದರು' ಎಂಬ ಪ್ರಾಚೀನ ಪರಂಪರಾಗತ ಒಂದು ಸಂಗತಿಯನ್ನು ಉಲ್ಲೇಖಿಸಿದ್ದಾರೆ. ತಮಿಳರು ತಮ್ಮ ಎದುರಾಳಿಗಳನ್ನು 'ಕುರುನಿಲಮನ್ನೆಯರು' ಎಂದರೆ ಸಣ್ಣ ಪುಟ್ಟ ಸಾಮಂತ ರಾಜರು ಎಂದು ಕೀಳು ಬಗೆದು ವರ್ಣಿಸಿರುವ ಸಂಭವವೂ ಉಂಟು. ಹಾಗೆ ಕೀಳು ಬಗೆದಿಲ್ಲವೆಂದು ಭಾವಿಸಿದರೂ ಈ ವಡುಕರು ಸಣ್ಣ ಪುಟ್ಟ ರಾಜರಾಗಿದ್ದರೆಂಬುದನ್ನಂತೂ ಅಲ್ಲಗಳೆಯಲಿಕ್ಕಾಗುವುದಿಲ್ಲವಷ್ಟೆ. ಈ ವಡುಕರನ್ನೇ ಅರಣ್ಯವಾಸಿಗಳು, ದಾರಿಹೊಡೆಯುವವರು, ದನಗಳ್ಳರು ಎಂದು ವರ್ಣಿಸಿದವರೂ ತಮಿಳ ಕವಿಗಳೇ!

ಪ್ರೊ. ವ್ಹಿ. ಆರ್. ದೀಕ್ಷಿತರು ಬರೆದ ಗ್ರಂಥದಲ್ಲಿ ಈ ಜನಾಂಗದ ವರ್ಣನೆಯಲ್ಲಿ ಇನ್ನೂ ಒಂದೆರಡು ಮಾತುಗಳು ಹೆಚ್ಚಿಗಿವೆ.*

The Marawars wore mustaches & beards and were brave & fierce-looking, being endowed with good physical strength, their profession was high way robbery. Their weapons

* STL. p. 228

were simple, constituting of bows and arrows.

Vadukar, Maravar are described in this body of (Tamil) Literature as still in the savage stage of frontier tribes living as marauders.

They are located in the region immediately to the north of the Tamil fronter.

ಇವೆಲ್ಲ ವರ್ಣನೆಗಳಿಂದ ಈ ಜನಗಳು ಕನ್ನಡಿಗರೆಂಬ ಬಗ್ಗೆ ಸಂದೇಹವಿಲ್ಲ. ಉಗ್ರರೂ, ಕಾಡಿನಲ್ಲಿರುವವರೂ, ಪುಷ್ಟವಾದ ಮೈಕಟ್ಟಿನವರೂ, ಬಿಲ್ಲವಿದ್ಯೆಯಲ್ಲಿ ಬಲ್ಲಿದರೂ, ಕ್ರೂರ ನಾಯಿಗಳನ್ನು ಸಾಕಿದವರೂ ದನಗಳನ್ನು ಓಡಿಸಿಕೊಂಡು ಒಯ್ವಲ್ಲಿ ನಿಪುಣರೂ, ಗಡ್ಡಮೀಸೆಗಳನ್ನು ಬಿಟ್ಟವರೂ ಆಗಿದ್ದರೆಂದು ಕಂಡು ಬರುತ್ತದೆ.

ಆದರೆ ಕಳವರು ಕ್ರೂರರೂ, ಕೊಲೆಸುಲಿಗೆಗಳೇ ಮುಖ್ಯವಾದ ಹೋರೆಯಾಗಿರುವವರೂ ಎಂಬೀ ಬಗೆಯಾಗಿ ಅವರನ್ನು ಚಿತ್ರಿಸಿದುದಕ್ಕೆ ಮಾತ್ರ ಕೇವಲ ಹಗೆತನವೇ ಕಾರಣವೆಂದು ಹೇಳಬೇಕಾಗುತ್ತದೆ. ತಮಿಳ ಕವಿಗಳ ಮೇಲಣ ವರ್ಣನೆಗಳಿಂದ ಕನ್ನಡದ ಮೊದಲಿಗರು ತೀರ ಹೀನಸಂಸ್ಕೃತಿಯವರಾಗಿದ್ದರೆಂಬ ಭಾಸವಾಗುವಂತಿದೆ. ಆದರೆ ವಸ್ತುಸ್ಥಿತಿಯು ಹಾಗಿಲ್ಲ; ಯಾವ ನದಿಯ ಉಗಮವಾಗಲಿ ಅಷ್ಟೇ ರಮಣೀಯವಾದುದು. ಋಷಿಯ ಕುಲ ನದಿಯ ಮೂಲ ನೋಡಬಾರದೆಂಬ ಗಾದೆಯಲ್ಲಿ ಒಂದು ಬಗೆಯ ತಥ್ಯಾಂಶವಿದೆ. ಪ್ರಾಥಮಿಕ ಸ್ಥಿತಿಯು ಪರಿಪೂರ್ಣವಾಗಿರಲಾರದು. ಕಳವರಿಗೆ, ಮರವರಿಗೆ ಮೂಗುಮುರಿಯುವ ತಮಿಳರಾದರೂ ಆಗ ಬಹಳ ಉಚ್ಚ ರೀತಿನೀತಿಗಳುಳ್ಳವರಾಗಿದ್ದರೆಂಬ ಹಾಗಿಲ್ಲ. ಪ್ರೊ. ದೀಕ್ಷಿತರ ಗ್ರಂಥದಲ್ಲಿಯ ಒಂದು ಅವತರಣಿಕೆಯಿಂದ ಈ ಮಾತು ಸ್ಪಷ್ಟವಾಗುವಂತಿದೆ.*

It could not be said that their ethical standard rose to any higher level. Mr. M. Shrinivas Ayyangar remarks that the ancient

* STL, p, 251–252

Tamils were a ferocious race of huniers and soldiers like the ancient Assyrians and Babylonians making war for pleasure of slaying, flunderping and devastating. In support of this statement he quotes chapter and verse from that great classic work 'Silappadigaram'. Possesed of such characteristics, it could not but be that most of their wars were aggressive in character .......... Even the Chola kings at a much later period (tenth & eleventh centuries A. D.) entered into aggressive warfares.......... not only were their wars were aggressive but also their treatment of the vanquished was far from humane.

ಇನ್ನು ವೇದದಲ್ಲಿ ಬಂದ ಸ್ತೇನರ ವರ್ಣನೆಗಳನ್ನು ನೋಡಿ:—

ರುದ್ರನ ಅನುಯಾಯಿಗಳು ರುದ್ರಿಯರು. ರುದ್ರಿಯರಲ್ಲಿ ಸ್ತೇನ, ತಸ್ಕರ; ಸ್ತಾಯು ಮೊದಲಾದವರುಂಟೆಂಬ ಸಂಗತಿಯು ಮೇಲೆ ಬಂದಿದೆ. 'ಅರಣ್ಯರು' ಎಂದೂ (ಅರಣ್ಯಾನಾಂ ಪತಿ=ಶಿವ)ಈ ಜನಗಳನ್ನು ಹೇಳಿದ್ದುಂಟು. 'ಮಾರ್ಗೇ ಗಂ ತ್ವನ್ ದ್ರವ್ಯಾಪಹಾರೇಣ ಬಾಧಿತುಂ ನಿರಂತರಂ ಅರಣ್ಯೇ ವರ್ತಮಾನಾಃ ಚೋರಾಃ ಅರಣ್ಯಾಃ' ಎಂದು ಸಾಯಣರು ಭಾಷ್ಯಮಾಡುತ್ತಾರೆ. ಭಟ್ಟ ಭಾಸ್ಕರನು ತನ್ನ ಟೀಕೆಯಲ್ಲಿ ಇವರಿಗೆ ದಸ್ಯುಗಳೆಂದೇ ನಿರ್ಧರಿಸಿದ್ದಾನೆ! 'ಅರಣ್ಯವಾಸಿನಃ ದಸ್ಯವಃ,' ಎಂದು ಈತನ ಅಭಿಪ್ರಾಯ. 'ಶ್ವಭ್ಯಃ ಶ್ವಪತಿಭ್ಯಃ', 'ಶ್ವನಿಭ್ಯಃ' ಎಂದೂ ರುದ್ರಿಯರ ವರ್ಣನೆಯುಂಟು. 'ಶ್ವನಿಭ್ಯಃ, ಶುನಾಂಗಲೇಷು ಬದ್ಧಾನಾಂ ಪಾಶಾನಾಂ ಧಾರಕಾಃ' ಎಂದು ಸಾಯಣರ ಅರ್ಥ; 'ಶುನಾಂ ನೇತೃಭ್ಯಃ' ಎಂದು ಭಟ್ಟಭಾಸ್ಕರನು. ಇನ್ನು ಇವರ ಶಸ್ತ್ರಾಸ್ತ್ರಗಳ ವಿಚಾರ; 'ಕಕುಭಯ ನಿಷಂಗಿಣೇ ಸ್ತೇನಾನಾಂ ಪತಯೇ' ನಿಷಂಗಿಣ ಇಷು ಧಿಮತೇ ತಸ್ಕರಾಣಾಂ ಪತಯೇ', 'ಸೃಕಾವಿಭ್ಯೋ', 'ಇಷುಮದ್ಭ್ಯೋ ಧನ್ವಾವಿಭ್ಯಃ', 'ಅತನ್ವಾನೇಭ್ಯಃ', 'ಪ್ರತಿದಧಾನೇಭ್ಯಃ',

'ಆಯುಚ್ಛದ್ಭ್ಯೋ ವಿಸ್ಮಜದ್ಭ್ಯಃ' 'ಇಂತಿವೆಲ್ಲವುಗಳಿಂದ ಈ ರುದ್ರಿಯರು ಬಿಲ್ಲು ಬಾಣಗಳಿಂದಲೂ ಬೀಸಿ ಒಗೆಯುವ ಒಂದು ಬಗೆಯ ಆಯುಧ (ಸೃಕಾವಿಭ್ಯಃ) ದಿಂದಲೂ ಯಾವಾಗಲೂ ಸನ್ನದ್ಧರಾಗಿರುತ್ತಿದ್ದರೆಂದು ವ್ಯಕ್ತವಾಗುತ್ತದೆ.

ಕಳವರನ್ನು ಕುರಿತು ಥರ್ಸಟನ್‌ರು ಬರೆದುದೇನೆಂದರೆ:

> These people are said to be in general a brave people, expert in the use of the lance, and throwing the carved stic.

ಬಿಲ್ಲು ಬರ್ಚಿಗಳನ್ನು ಉಪಯೋಗಿಸುವುದರಲ್ಲಿ ಕರ್ಣಾಟರು ಬಹಳ ಪ್ರಖ್ಯಾತರೆಂದು ಇತಿಹಾಸದಿಂದ ಗೊತ್ತಾಗುತ್ತದೆ. ಆದರೆ ಬೀಸಿ ಒಗೆವ ಮೇಲೆ ಉಲ್ಲೇಖಿಸಿದ ಆಯುಧವು ಕಳವರಲ್ಲಿ ಮಾತ್ರ ಉಳಿದಿರುವಂತೆ ತೋರುತ್ತದೆ. ಇದು ಒಂದು ವಿಶೇಷಪ್ರಕಾರದ ಆಯುಧವಾಗಿದೆಯೆಂದು ಥರ್ಸಟನ್‌ರು ಹೇಳುತ್ತಾರೆ. ರುದ್ರಾಧ್ಯಾಯದಲ್ಲಿ ವರ್ಣಿತವಾದ 'ಸೃಕ್' ಎಂಬ ಆಯುಧವೆ ಇದೊ, ವಿಚಾರಿಸತಕ್ಕ ವಿಷಯವಾಗಿದೆ.

ಕಳವರಲ್ಲಿ ರೂಢವಾಗಿದ್ದ ಇನ್ನೊಂದು ನಡೆವಳಿಯನ್ನು ಥರ್ಸಟನ್‌ರು ಹೇಳುತ್ತಾರೆ. ಕಳವರಲ್ಲಿ ಹಲಕೆಲವರು, ಪಟ್ಟಣದ ನಾಗರಿಕರ ಮನೆಗಳಲ್ಲಿ ಕೆಲಸಕ್ಕೆ ನಿಲ್ಲುವುದುಂಟು. ಊರೊಳಗಿನ ದನಗಳು ಕಳವಾಗಿ ಹೋದ ಬಳಿಕ ಅವುಗಳನ್ನು ಓಡಿಸಿಕೊಂಡು ಹೋದ ಸ್ಥಳಗಳು ಓಡಿಸಿಕೊಂಡೊಯ್ದವರು ಇವೆಲ್ಲ ಸಂಗತಿಗಳು ಊರ ಸಭ್ಯಗೃಹಸ್ಥರಲ್ಲಿ ಕೆಲಸಕ್ಕೆ ನಿಂತ ಕಳವರಿಗೆ ಗೊತ್ತಿರುವುದುಂಟು. ಅವರು ದನವೊಯ್ದ ಕಳವರಿಗೆ ಸುಂಕದ ಹಣವನ್ನು ಆ ದನಗಳ ಒಡೆಯನಿಂದ ಸಲ್ಲಿಸಿ, ಅವನ್ನು ತಿರುಗಿಕೊಡಿಸುವ ಸಂಪ್ರದಾಯವು ಉಂಟಂತೆ. ಕಳವ ಜನಾಂಗದವರು ಈ ಬಗೆಯ ಸುಂಕವನ್ನು ಸಂಪಾದಿಸುವುದು ತಮ್ಮ ಹಕ್ಕಿನ ಬಾಬ್ತು ಎಂದು ಪ್ರಾಚೀನಕಾಲದಿಂದ ತಿಳಿದಿರಬೇಕೆಂದು ತೋರುತ್ತದೆ. ಈ ಹಕ್ಕಿನ ಬಾಬ್ತು ದೊರೆಯದಾಗುತ್ತಲೆ ದನಗಳನ್ನು ದೋಚಿಕೊಂಡೊಯ್ವ ರೂಢಿಯಿರಬೇಕು. ಮುಂದೆ ಮರಾಠರ ಕಾಲದ 'ಚೌಥಾಯಿ', 'ಸರದೇಶಮುಖಿಯ' ಕಪ್ಪಕಾಣಿಕೆಯ ಉಗಮವು ಈ ಪ್ರಾಚೀನ ರೂಢಿಯಲ್ಲಿ ಅಡಗಿದೆಯೆಂದು ತೋರುತ್ತದೆ. ಅದಂತಿರಲಿ. ಥರ್ಸಟನ್‌ರ ವಿವರಣೆಯಿಂದ ಕಳವರು ದೋಚಿಕೊಂಡೊಯ್ದ ದನಗಳ ಜಾಡು

ಹಿಡಿದು ಅವನ್ನು ದೊರಕಿಸಿಕೊಡುವಂತಹರು ಊರೂರಿಗೆ ಇರುತ್ತಿದ್ದರೆಂಬ ಮಾತು ಸ್ಪಷ್ಟವಿದೆ. ಋಗ್ವೇದದ ಎರಡು ಋಚೆ (VI ೫೪.೧,೨) ಗಳಲ್ಲಿರುವ ವರ್ಣನೆಗಳಿಂದ ವೇದಕಾಲದಲ್ಲಿಯೂ ಇದೇ ಬಗೆಯ ಒಂದು ನಡೆವಳಿ ಇದ್ದಿತೆಂದು ಗೊತ್ತಾಗುತ್ತದೆ! ಒಬ್ಬ ವೈದಿಕಋಷಿಯು ಪೂಷನ್ ದೇವರನ್ನು ಕುರಿತು ಪ್ರಾರ್ಥಿಸುತ್ತಾನೆ:

ಸುಪೂಷನ್ವಿದುಷಾನಯಯೋ ಅಂಜಸಾನುಶಾಸತಿ । ಯ
ಏವೇದಮಿತಿ ಬ್ರವತ್ ॥ ೧॥

ಎಲೈ ಪೂಷನ್, ಯಾವನು ಪ್ರಾಮಾಣಿಕತನದಿಂದ
ಇವು(ದನ), ಇಲ್ಲಿವೆ ಎಂದು ಹೇಳುವನೊ ಆ ತಿಳಿದವನ
ಸಂಗತಿಯನ್ನು ಕೊಡು.

ಸಮುಪೂಷ್ಣಾಗವೇಮಹಿಯೋ ಗೃಹಾ ಅಭಿಶಾಸತಿ ।
ಇಮ ಏವೇತಿ ಚ ಬ್ರವತ್ ॥ ೨॥

ಪೂಷನ್ನನ ದಯೆದಿಂದ ಅದಾವನು ನಮಗೆ (ಕಳೆದು
ಹೋದ ದನಗಳಿರುವ) ಮನೆಗಳನ್ನು ತೋರಿಸುವನೊ
ಮತ್ತು ಇವೇ ಅವು, ಎಂದು ಹೇಳುವನೊ ಅಂತಹನ
ಸಂಗತಿಯು ದೊರೆಯಲಿ.

ಈ ಸೂಕ್ತದೊಳಗಿನ ಮಂತ್ರಗಳನ್ನು ಪಠಿಸಿದರೆ ಈಗಲೂ ಕಳೆದ ಧನವು ಸಿಕ್ಕುವುದೆಂದು ಭಾವಿಕರ ನಂಬುಗೆಯುಂಟು. ಹಿಂದಕ್ಕೆ ಕಳೆದ ದನಗಳನ್ನು ದೊರಕಿಸುವುದಕ್ಕಾಗಿ ಮಾಡಿದ ಪೂಷನ್ನನ ಪ್ರಾರ್ಥನೆಯಿದು.

ಇಂತಿವೆಲ್ಲ ಸಂದರ್ಭಗಳನ್ನು ಒಂದರೊಂದರೊಡನೆ ಜೋಡಿಸಿ, ಹೋಲಿಸಿ ವಿಮರ್ಶಿಸಿದರೆ ಸ್ತೇನರೆಂಬವರು ಪ್ರಾಚೀನ ದ್ರಾವಿಡಶಾಖೆಯ ಒಂದು ಜನಾಂಗವೆಂಬ ಮಾತು ಬಲಗೊಳ್ಳುತ್ತದೆ. ತಮಿಳಸಾಹಿತ್ಯದಲ್ಲಿ ಉಲ್ಲೇಖಿತರಾದವರಾಗಿರಬೇಕೆಂದು ಊಹಿಸಲು ಸಾಕಷ್ಟು ಆಧಾರಗಳಿವೆ. ಆ ಆಧಾರಗಳನ್ನು ಸಾರಾಂಶರೂಪದಿಂದ ಹೀಗೆ ಹೇಳಬಹುದು:

೧. ಕಳವರೆಂಬವರು ದ್ರಾವಿಡಶಾಖೆಯ ಅತಿ ಪ್ರಾಚೀನ ಜನಾಂಗ.

೨. ವೇದಗಳಲ್ಲಿ ಉಲ್ಲೇಖಿತರಾದ ಸ್ತೇನ–ತಸ್ಕರರ ವರ್ಣನೆಗಳಿಗೂ ಪುರಾತನ ತಮಿಳ ಸಾಹಿತ್ಯದೊಳಗಿನ ವರ್ಣನೆಗಳಿಗೂ ತುಂಬ ಹೋಲಿಕೆಯಿದೆ. ಈಗ ಅವಶಿಷ್ಟರಾದ ಕಳ್ಳರ ಜಾತಿಯನಡೆವಳಿಯಲ್ಲಿ ಪುರಾತನ ಕಳ್ಳರ ಇರುವಿಕೆಯನ್ನು ನೆನಪಿಗೆ ತಂದುಕೊಡುವ ಅನೇಕ ಸಂಗತಿಗಳಿವೆ.

೩. ವೇದದಲ್ಲಿ ವರ್ಣಿತರಾದ ಸ್ತೇನ–ತಸ್ಕರರು ಆರ್ಯೇತರ ಪಂಗಡದವರೇ ಆಗಿರಬೇಕು. ಅದರಲ್ಲಿಯೂ ದ್ರಾವಿಡರೇ ಇವರೆಂದೂ ಅರಿತುಕೊಳ್ಳಬಹುದಾಗಿದೆ.

೪. ವೈದಿಕ ಸಾಹಿತ್ಯದಲ್ಲಿ ದ್ರಾವಿಡರ ಅಂಶವುಂಟೆಂದು ಸಂಶೋಧಕರು ನಿಶ್ಚಿತವಾಗಿ ಹಲವು ಸಂಗತಿಗಳನ್ನು ಕಂಡುಹಿಡಿದಿರುವರು.

೫. ಶಿವನಿಗೆ 'ಸ್ತೇನಾನಾಂ ಪತಿ' ಎಂದು ಹೆಸರುಂಟು. ಸ್ತೇನರು ಕಳವರೆಂದು ನಿರ್ಧರಿಸಿದರೇನೇ 'ಕಣ್ಣೇಶ್ವರ' ಎಂಬ ಶಿವವಾಚಕವಾಗಿರುವ ಪ್ರಾಚೀನ ಶಬ್ದದ ಔಚಿತ್ಯದ ಸೊಗಸು ಅನುಭವಕ್ಕೆ ಬರುತ್ತದೆ.

ಕರ್ಣಾಟದಲ್ಲಿ ಸುಮಾರಾಗಿ ಹಳ್ಳಿಹಳ್ಳಿಗೂ ಒಂದೊಂದು ಶಿವಾಲಯ ಉಂಟು. ಅಥವಾ ಒಂದಿಲ್ಲೊಂದು ಹೆಸರಿನ ಶಿವನ ಗುಡಿಯಿಲ್ಲದ ಊರೇ ದೊರೆಯದು. ಅದರೊಳಗೂ ಪುರಾತನ ಗುಡಿಯಿದ್ದರೆ ಕಲ್ಲೇಶ್ವರ, ಕಲ್ಮೇಶ್ವರ, ಕಲ್ಲಿನಾಥ ಎಂಬೀ ಬಗೆಯ ಹೆಸರಿನ ದೇಗುಲಗಳೆ ಹೆಚ್ಚು. ಮೂಲಸ್ಥಾನ ಕಲ್ಲೇಶ್ವರ' ನ ಉಲ್ಲೇಖವಿರುವ ಹಲವು ಶಾಸನಗಳು ದೊರೆತಿವೆ; ದೊರೆಯುತ್ತಲಿವೆ. ಆದರೆ 'ಕಲ್ಲ' ಎಂಬ ಈ ಪದದ ಅರ್ಥವನ್ನು ಇನ್ನೂ ಯಾರೂ ನಿರ್ಧರಿಸಿಲ್ಲ. ಶಿವನ ಈ ಸ್ವರೂಪದಲ್ಲಿ ನಮ್ಮ ನಾಡಿನ ಜನಗಳಿಗೆ ತುಂಬ ಪ್ರೀತಿಯೆಂದು ಕಾಣುತ್ತದೆ. ಕಣ್ಣಪ್ಪ, ಕನ್ನಯ್ಯ ಎಂಬೀ ಬಗೆಯ ಹೆಸರುಗಳು ಈಗ ಹಿಂದೆ ಬಿದ್ದಿರುವುದಾದರೂ ಕಲ್ಲಪ್ಪ, ಕಲ್ಲಯ್ಯ ಎಂಬುವುಗಳಿಗೆ ಕೊರತೆಯಿಲ್ಲ. ಕಲ್ಲೇಶ್ವರ ಎಂಬಲ್ಲಿ ಪೂರ್ವಪದಕ್ಕೆ ಶಿಲೆ ಎಂಬ ಅರ್ಥವನ್ನೂ ಮಾಡಬಹುದಾಗಿದೆ. ಕಣ್ಣೇಶ್ವರದ ಪೂರ್ವರೂಪವು 'ಕಳ್ಳೇಶ್ವರ' ಎಂದಿರಬೇಕಾಗಿತ್ತು. ಆದರೆ ಕಳ್ಳೇಶ್ವರ ಎಂಬ ಹೆಸರಿನ ದೇವಾಲಯಗಳು

ಎಲ್ಲಿಯೂ ಇದ್ದಂತಿಲ್ಲ. ಕಳ್ಳ ಶಬ್ದಕ್ಕೆ ಅಂಟಿಕೊಂಡ ಅಪಾರ್ಥದ ಮೂಲಕವಾಗಿಯೊ ಏನೊ 'ಕಳ್ಳೇಶ್ವರ' ಎಂಬ ಹೆಸರು ಕೇಳಬರುವುದಿಲ್ಲ. ರುದ್ರಾಧ್ಯಾಯವು ಸಂಸ್ಕೃತದಲ್ಲಿರುವುದರಿಂದ, ಜನಗಳು ಅರ್ಥವನ್ನು ಅರಿತುಕೊಂಡು ಮಂತ್ರಗಳನ್ನು ಪಠಿಸುವ ಗೋಜಿಗೆ ಹೋಗುವುದಿಲ್ಲವಾದುದರಿಂದ, ಅಥವಾ ವೇದದ ಪದಕ್ರಮವನ್ನು ಬದಲಿಸುವುದು ಪಾಪಕರ್ಮವೆಂಬ ಶ್ರದ್ಧೆಯಿದ್ದುದರಿಂದ 'ಸ್ತೇನಾನಾಂ ಪತಿ' ಎಂಬೀ ಮೊದಲಾದ ಹೆಸರುಗಳು ಇದ್ದಕ್ಕಿದ್ದಂತೆಯೆ ಉಳಿದುಕೊಂಡಿರಬೇಕು. ಅದಾವ ಕಾರಣವೆ ಇರಲಿ, ಕನ್ನಡದಲ್ಲಿ ರುದ್ರಕ್ಕೆ ಕಳ್ಳತನದ ಅರ್ಥವು (ಮಾಧ್ವರಲ್ಲಿ) ಉಳಿದುಕೊಂಡು ಬಂದಿರುವುದಾದರೂ ಕಳ್ಳೇಶ್ವರನೆಂಬ ಹೆಸರು ಮಾತ್ರ ಎಲ್ಲಿಯೂ ಸಿಕ್ಕುವುದಿಲ್ಲೆಂಬುದು ನಿಜವು. ಮದರಾಸ ಇಲಾಖೆಯ ಶಾಸನಗಳ ಸಂಗ್ರಹವು ಮೂರು ಸಂಪುಟಗಳಲ್ಲಿ ಪ್ರಕಟವಾಗಿದ್ದು ಅದರ ಮೇಲಿಂದ ಬಳ್ಳಾರಿ ಜಿಲ್ಲೆಯ ಕೆಲವೆಡೆಗಳಲ್ಲಿ 'ಕಳ್ಳೇಶ್ವರ' ಎಂಬೀ ಬಗೆಯ ಹೆಸರಿದ್ದುದು ಗೊತ್ತಾಗುತ್ತದೆ.* ಕೊನೆಯ ಸೂಚಿಯಲ್ಲಿ ಕಳ್ಳೇಶ್ವರ ಎಂದು ಕೊಟ್ಟಿರುವ ಎಡೆಗಳಲ್ಲಿ ಒಳಗೆ ಕೆಲವು ಸ್ಥಳದಲ್ಲಿ ಕಲ್ಲೇಶ್ವರ ಮತ್ತು ಕೆಲವು ಸ್ಥಳದಲ್ಲಿ ಕಳ್ಳೇಶ್ವರ ಎಂದುಂಟು. ತೆಲುಗಿನಲ್ಲಿ ಕಳ್ಳು ಶಬ್ದವು ಕಲ್ಲು ಎಂಬುದಾಗಿ ವ್ಯವಹರಿಸುತ್ತದೆ. ಆದುದರಿಂದ ಕಲ್ಲೇಶ್ವರನೆಂಬುದರೊಳಗಿನ ಕಲ್ಲು ರಸಾರ್ಥಕ ಕಳ್ ಶಬ್ದವೇ ಆಗಿರಬೇಕೆಂದೆನ್ನಲು ತುಂಬ ಇಂಬಿದೆ. ಕಳ್ಯ, ಕಲಾಲ ಮೊದಲಾದ ಶಬ್ದಗಳನ್ನು ಇದರೊಡನೆ ಹೋಲಿಸಿ ನೋಡಬಹುದು.

ಜನಗಳಿಂದ ದೇವರಿಗೆ ಹೆಸರು ಬರುವುದು. ಮುಸಲ್ಮಾನರ ದೇವರು, ಹಿಂದುಗಳ ದೇವರು, ಪಠಾಣರ ದೇವರು ಎಂಬಂತೆ ಕಳ್ಳರ ದೇವನು ಈತನು. ಹೀಗೆ ಹೇಳುವಲ್ಲಿ ನಿಜವಾಗಿ ನಿಂದೆಯ ಭಾವನೆಗೆ ಎಳ್ಳಷ್ಟೂ ಅವಕಾಶವಿಲ್ಲ. ಆದುದರಿಂದ 'ಸ್ತೇನಾನಾಂ ಪತಿಃ' ಎಂಬೀ ಬಗೆಯ ರುದ್ರಾಧ್ಯಾಯದೊಳಗಿನ ಉಲ್ಲೇಖಗಳು ಹೀನಾರ್ಥದಿಂದ ಕೂಡಿದುವೆಂದು ಬಗೆವ ಕಾರಣವಿಲ್ಲ. 'ಸ್ತೇನ ಎಂಬುದು ಒಂದು ಜಾತಿಯನ್ನು ಹೇಳುವ ಶಬ್ದವು. ರುದ್ರಾಧ್ಯಾಯದಲ್ಲಿ ಕುಂಬಾರ (ಕುಲಾಲ), ಕಮ್ಮಾರ (ಕರ್ಮಾರ), ಪಾಂಚಾಳ (ರಥಕಾರ ಮತ್ತು ತಕ್ಷ), ಬಿಲ್ಲವ, ಬೇಡ (ನಿಷಾದ) ಈ ಮೊದಲಾದ ಜಾತಿಗಳಂತೆ ಸ್ತೇನ-ತಸ್ಕರ

* MPI, by 75, 108, 182, 197, 213, 231, 238.

ಎಂಬುದೂ ಒಂದು ಜಾತಿಯಾಗಿರಬೇಕು. ಬಡಿಗತನ, ಕಮ್ಮಾರಿಕೆ, ಕುಂಬಾರಿಕೆಗಳಂತೆ ತುಡುಗುತನವು ಒಂದು ಉದ್ಯೋಗವಾಗಿರಲಾರದು. ಲೋಕವ್ಯವಹಾರಕ್ಕನುಸರಿಸಿ ನೆರೆಹೊರೆಯ ಇನ್ನುಳಿದ ಜಾತಿಯವರಂತೆ ಹೊಟ್ಟೆಹೊರಕೊಳ್ಳುವ ಒಂದು ಮುಖ್ಯ ಉದ್ಯೋಗವು ಬೇರೆ ಇದ್ದು ಅದರೊಡನೆ ತುಡುಗು-ದಾಳಿ-ಪುಂಡು-ಬಂಡು-ಕಾಳಗ ಮೊದಲಾದುದುವನ್ನೂ ಹೊತ್ತು ಬಂದಂತೆ ಮಾಡುತ್ತಿರಬಹುದು. ಇಲ್ಲಿ ಶಿವನಿಗೆ 'ತುಡುಗರ ಒಡೆಯ'ನೆಂದು ನಿಜವಾಗಿ ಹೇಳುವ ಉದ್ದೇಶವು ಇರುವ ಸಂಭವವಿಲ್ಲ. ಹಾಗೆ ಹೇಳಿದರೆ ಶಿವನ ಸ್ತೋತ್ರವು ಅದು ಆಗುವ ಸಂಭವವಿಲ್ಲ ಆದುದರಿಂದ 'ಸ್ತೇನ' ಎಂಬುದು ಒಂದು ವಿಶಿಷ್ಟ ಜಾತಿಯಿರಬೇಕು. 'ಸ್ತೇನರು', 'ರಥಕಾರರು' ಮೊದಲಾದವರೆಲ್ಲ ಈ ಭೂಲೋಕದ ಮೇಲಿನ ಜನಗಳೇ ಎಂಬುದು ಇದೇ ವೇದದೊಳಗಿನ ಇನ್ನೊಂದು ಮಂತ್ರದಿಂದ ಗೊತ್ತಾಗುತ್ತದೆ.

ನಮೋ ರುದ್ರೇಭ್ಯೋ ಯೇ ಪೃಥಿವ್ಯಾಂ ಯೇಽಂತ
ರಿಕ್ಷೇಯೇ ದಿವಿ ಯೇಷಾಂ । ಅನ್ನಂ ವಾತೋ ವರ್ಷ
ಮಿಷವಃ ತೇಭ್ಯೋ....ನಮಸ್ತೇನೋ ವೃಡಯಂತು ॥

ಅಂತರಿಕ್ಷ ಮತ್ತು ದೇವಲೋಕದೊಳಗಿನ ರುದ್ರಿಯರೊಡನೆ ಭೂಲೋಕದೊಳಗಿನ ರುದ್ರಭಕ್ತರಿಗೂ ಈ ವೈದಿಕ ಋಷಿಯು ತಲೆವಾಗಿ ಬೇಡಿಕೊಂಡಿದ್ದಾನೆ! ಹಾಗಾದರೆ ಭೂಲೋಕದಲ್ಲಿ ವಾಸಿಸುವಂತಹ 'ಯೇ ರುದ್ರಾಃ ಪೃಥಿವ್ಯಾಂ ವರ್ತಂತೇ' ಈ ರುದ್ರಿಯರು ಯಾರು? ಈ ಮಂತ್ರದ ಮೇಲಣ ಭಾಷ್ಯದಲ್ಲಿಯೂ 'ಚೋರರು, ಹಿಂಸಕರು ಆದ ಶಿವಭಕ್ತರು' ಎಂದೇ ಸಾಯಣರು ವಿವರಿಸುತ್ತಾರೆ. ವೇದಕಾಲದಲ್ಲಿ ಆರ್ಯರಿಗೆ ಪ್ರಬಲ ವಿರೋಧಿಗಳು ದ್ರಾವಿಡ ವರ್ಗದ ಜನಗಳು, ಎಂದು ಆಧುನಿಕ ಸಂಶೋಧಕರೆಲ್ಲ ಒಪ್ಪಿಕೊಳ್ಳುತ್ತಾರೆ. ದ್ರಾವಿಡರು ಸಾಮಾನ್ಯವಾಗಿ ರುದ್ರ—ಶಿವನ ಉಪಾಸಕರೆಂಬ ಮಾತು ನಿಜವಿದ್ದರೆ,‡ ವೈದಿಕ ಋಷಿಯು ಮೇಲಣ ಮಂತ್ರದಲ್ಲಿ ಕೈಮುಗಿದು ಬೇಡಿಕೊಂಡ ಭೂಲೋಕದೊಳಗಿನ ಪ್ರಬಲ ರುದ್ರಿಯರೆಂದರೆ ದ್ರಾವಿಡವರ್ಗದವರೇ ಎಂದು ಬೇರೆ ಸಿದ್ಧಪಡಿಸುವ ಅವಶ್ಯಕತೆಯಿಲ್ಲ.

‡ ಶಿವರಹಸ್ಯದಲ್ಲಿ ಇದರ ವಿವರಣೆಯೂ ಬಂದಿದೆ.

ರುದ್ರನ ಪರಮ ವೀರಭಕ್ತರೆಂಬೇ ಇವರಿಗೆ ರುದ್ರರು, ರುದ್ರಿಯರು ಎಂಬ ಹೆಸರು ಬಂದಿದೆ. ರುದ್ರನಿಂದ ಆತನ ಭಕ್ತರಿಗೆ ಹೆಸರು ಬಂದಿರುವಂತೆ ಭಕ್ತ ರಿಂದಲೂ ದೇವರಿಗೆ ಹೆಸರು ಪ್ರಾಪ್ತವಾಗಿದ್ದರೆ ಅದರಲ್ಲೇನು ಸೋಜಿಗ? ಆದುದರಿಂದ ಕಳವರ ದೇವರು ಕಳ್ಳೇಶ್ವರ, ಕಲ್ಲೇಶ್ವರನಾಗಿರುವುದು ಸಂಭವ ನೀಯವಾಗಿದೆ. ಸಂಸ್ಕೃತದಲ್ಲಿ ಶಿವನಿಗೆ ಗಿರೀಶನೆಂದು ಹೆಸರಿದೆ. ಮಲ್ಲಯ್ಯ, ಗುಡ್ಡಪ್ಪ ಎಂದು ಕನ್ನಡದ ಆ ಪರಂಪರೆಯ ಹೆಸರು. 'ಕಲ್ಲೇಶ್ವರ' ಎಂಬೀ ಹೆಸರಿನ ಶಿವಾಲಯಗಳು ಕರ್ಣಾಟ (ದ್ರಾವಿಡ) ದೇಶದ ಹೊರಗೆ ಎಲ್ಲಿಯೂ ಇದ್ದಂತೆ ತೋರುವುದಿಲ್ಲ. 'ಕಲ್ಲು' (stone) ಎಂಬುದೆ ಪೂರ್ವಪದ ವಾಗಿದ್ದರೆ 'ಕಲ್ಲು' ಈ ಅರ್ಥದ ಸಂಸ್ಕೃತ ಶಬ್ದದೊಡನೆ ಕೂಡಿಕೊಂಡಿರುವ ಹೆಸರಿನ ಶಿವಾಲಯಗಳು ಎಲ್ಲಿಯಾದರೂ ಇರಬೇಕಾಗಿದ್ದಿತಲ್ಲವೆ? ಕಲ್ಲೇಶ್ವರ ಎಂಬ ಹೆಸರಿನ ಗುಡಿಗಳು ಕರ್ಣಾಟದಲ್ಲಿ ಹೇರಳವಾಗಿವೆ. ಕಲಿದೇವರು ಮತ್ತು ಕಲ್ಲೇಶ್ವರ ಭಿನ್ನವಲ್ಲ. 'ಕಲಿದೇವ' ಎಂದು ಉಲ್ಲೇಖವಿರುವ ಶಾಸನವಿರುವ ಗುಡಿಗೆ 'ಕಲ್ಲೇಶ್ವರನ ದೇವಾಲಯ' ಎಂದು ಈಗ ಹೆಸ ರುಂಟು.* ಇನ್ನೊಂದೆಡೆಯಲ್ಲಿ 'ಕಲ್ಲೇಶ್ವರನ ದೇವಾಲಯದ ಬಾಗಿಲಿನ ದಕ್ಷಿಣದ ಕಡೆ ನಟ್ಟಿರುವ ಕಲ್ಲುಂಟು.'; ಈ ಕಲ್ಬರೆಹದಲ್ಲಿ ಈ ಗುಡಿಯು 'ಕಂನ್ನೇಶ್ವರ' ನ ದೆಂದು ಸ್ಪಷ್ಟವಿದೆ.§ ಇಂತಹ ಇನ್ನೂ ಒಂದು ಉದಾ ಹರಣವುಂಟು. ಕನ್ನವಳ್ಳಿಯಲ್ಲಿ ಮುಖ್ಯ ಗುಡಿ—ಮೂಲಸ್ಥಾನ ಕಲ್ಲೇಶ್ವರ ನದು.† ಆದುದರಿಂದ *ಕಣ್ಣ* ಈಶ್ವರನೇ ಕಲ್ಲೇಶ್ವರ (*ಕಣ್ಣ* ಈಶ್ವರ)— ಸ್ತೇನಾನಾಂ ಪತಿ ಎಂಬಿವು ಈ ನಾಡಿನ ಮೊದಲಿಗರಾದ *ಕಣ್ಣ*ರ ಪೂರ್ವ ಪೀಠಿಕೆಯನ್ನೆ ಸೂಚಿಸುತ್ತಿಲ್ಲವೆ?

* EC. XI. Dg. 74, 70

§ Ibid 103.

† MER, 1933, No. 135

## ೭. ಕನ್ನರ ನಾಡು.

ಕನ್ನ(ಣ್ಣ)ರು ಎಂದರೆ ಕಳ್ಳರು, ಇವರು ಗೋವಳರು. ಇದು ಪ್ರಾಚೀನ ಜನಾಂಗ, ರುದ್ರ—ಶಿವನು ಇವರ ಕುಲದೈವತ. ರುದ್ರ (ಶಿವ)ನೇ ವೀರ—ಬೀರದೇವ.* ಬೀರದೇವನ ವೀರಭಕ್ತರು ಇವರು. ವೀರ—ಭಕ್ತರಾದ ಕನ್ನ(ಣ್ಣ)ರ ದೇವರಿಗೆ ಕನ್ನೇ(ಣ್ಣೇ)ಶ್ವರ ಎಂಬ ಹೆಸರು; 'ಸ್ತೇನಾನಾಂ ಪತಿ' ಎಂದು ಮುಂತಾಗಿ ರುದ್ರಾಧ್ಯಾಯದಲ್ಲಿ ಬಂದಿರುವ ರುದ್ರನ 'ಕಳ್ಳ' ಅನುಯಾಯಿಗಳು ದ್ರಾವಿಡ ಕಳವರೆ ಆಗಿರಬೇಕು; ರುದ್ರನೂ ದ್ರಾವಿಡರ ದೇವತೆ; ಇವೆ ವೊದಲಾದ ಸಂಗತಿಗಳು ಹಿಂದಿನ ಪ್ರಕರಣದಲ್ಲಿ ಬಂದಿವೆ. ಇನ್ನು ಈ ಕನ್ನೆ ಜನಾಂಗವು ವೊದಲು ಕಾಲೂರಿ ನಿಂತ ನಾಡಾವುದು ಎಂಬುದೆ ಈಗ ವಿಚಾರಿಸತಕ್ಕ ವಿಷಯವಾಗಿದೆ.

ದ್ರಾವಿಡರು ಹಿಂದೂ ದೇಶದವರು; ದಕ್ಷಿಣ ಹಿಂದುಸ್ಥಾನವೇ ಅವರ ತವರುಮನೆ, ಎಂದು ಒಂದು ಪಂಗಡ. ಆರ್ಯರಂತೆ ದ್ರಾವಿಡರೂ ಹೊರನಾಡಿನಿಂದ ಬಂದವರೆಂದು ಇನ್ನೊಂದು ಪಂಗಡ. ಈ ಎರಡನೆಯ ಪಂಗಡದಲ್ಲಿ ಮತ್ತೆ ಎರಡು ಬಣಗಳು. ಆರ್ಯರಂತೆ ದ್ರಾವಿಡರು ಉತ್ತರದಿಂದ ದಕ್ಷಿಣದೇಶಕ್ಕೆ ಬಂದರು, ಎಂಬುವವರು ಕೆಲರು; ಸಮುದ್ರಮಾರ್ಗವಾಗಿ ದಕ್ಷಿಣದಿಂದಲೆ ಹಿಂದೂದೇಶವನ್ನು ಹೊಕ್ಕರೆಂದು ಹೇಳುವವರು ಕೆಲರು. ಪ್ರಸ್ತುತ ಇದಾವ ಚರ್ಚೆಯೂ ನಮ್ಮ ಗುರಿಯಾಗಿಲ್ಲ. ಮೂಲ ದ್ರಾವಿಡರ ಒಂದು ಶಾಖೆಯಾದ ಕನ್ನರು ಬೇರೂರಿದ ನಾಡಾವುದು ? ಎಂಬುದೆ ಇಲ್ಲಿ ವಿವೇಚಿಸತಕ್ಕ ಮುಖ್ಯ ವಿಷಯವಾಗಿದೆ.

ಇದನ್ನು ಅರಿತುಕೊಳ್ಳಲು ಹವಣಿಸುವಾಗ ಅಡ್ಡಬರುವ ಒಂದೆರಡು ಸಂಗತಿಗಳಿವೆ. ಈ ವಿಷಯದಲ್ಲಿ ನಮ್ಮ ತಿಳುವಳಿಕೆಯನ್ನು ಸರಿಯಾಗಿ ತಿದ್ದಿಕೊಳ್ಳದೆ ಇದ್ದರೆ ಮುಂದಿನ ವಿವೇಚನದ ಅರ್ಥವೆ ಆಗಲಿಕ್ಕಿಲ್ಲ. ದ್ರಾವಿಡರು ಹಿಂದೂದೇಶಕ್ಕೆ ಹೊರಗಿನಿಂದ ಬಂದವರಾಗಲಿ ಅಥವಾ ಮೂಲ ಇಲ್ಲಿಯವರೆ ಆಗಿರಲಿ, ಒಂದು ಸಂಗತಿಯು ಮಾತ್ರ ನಿಶ್ಚಿತ. ಅವರು ಮೆಲ್ಲಮೆಲ್ಲನೆ

---

* ಶಿರ. ಪುಟ ೪೧

ಉತ್ತರದಿಂದ ದಕ್ಷಿಣಕ್ಕೆ ಸರಿಯುತ್ತ, ಸಂಕೋಚ ಹೊಂದುತ್ತ ನಡೆದುದು ಇತಿಹಾಸದಿಂದ ಅನುಭವಕ್ಕೆ ಬರುತ್ತಲಿದೆ. ಬಲುಚಿಸ್ತಾನದ ಹತ್ತರಿನ ಬ್ರಾಹುಯಿ ಭಾಷೆಯು ದ್ರಾವಿಡವರ್ಗಕ್ಕೆ ಹತ್ತರಿನದೆಂದು ಬಲ್ಲಿದರು ನಿರ್ಧರಿಸಿದ್ದಾರೆ. ಸಿಂಧಿ ಭಾಷೆಯಲ್ಲಿರುವ ದ್ರಾವಿಡ ಅಂಶಗಳನ್ನು ಕುರಿತು ಲೇಖನಗಳು ಪ್ರಕಟವಾಗಿವೆ. ರೆವರಂಡ ಶರ್ಟ ಎಂಬವರು ತಮ್ಮ ಲೇಖನದಲ್ಲಿ ಕೊನೆಗೆ ಬರೆಯುವುದೇನೆಂದರೆ: *

> I believe they ( all things ) point to the fact that the Indus Valley was a home to some part of the Dravidian race, before the Aryan immigration.

ವೇದದಲ್ಲಿ ಸಿಕ್ಕುವ ಹಲವು ಶಬ್ದಗಳ ಆಧಾರದಿಂದ ಪಂಜಾಬಿನಲ್ಲಿ ಆರ್ಯರು ಬರುವ ಮೊದಲು ದ್ರಾವಿಡರೇ ನೆಲಸಿದ್ದರೆಂದು ಸಂಶೋಧಕರ ಅಭಿಪ್ರಾಯವಿದೆ. §

ಹಾಗಾದರೆ: ಒಂದು ಕಾಲದಲ್ಲಿ ಪಂಜಾಬಿನ ವರೆಗೆ ವ್ಯಾಪಿಸಿದ್ದ ದ್ರಾವಿಡರು ಈಗ ಕೇವಲ ದಕ್ಷಿಣ ಭಾರತದಲ್ಲಿ ಮಾತ್ರ ಕಾಣಿಸಿಕೊಳ್ಳುತ್ತಿರುವುದರ ಅರ್ಥವೇನು ? ಉತ್ತರಭಾರತದೊಳಗಣ ಹಲವು ದ್ರಾವಿಡರು, ಆರ್ಯರು ಬಂದಬಳಿಕ ನುಗ್ಗಾಟಕ್ಕೆ ಆರಂಭವಾಗಿ, ದಕ್ಷಿಣಕ್ಕೆ ಸರಿದಿರಬೇಕು; ಇನ್ನು ಹಲವರು ಆರ್ಯರಲ್ಲಿಯೆ ಬೆರೆತುಕೊಂಡಿರಬೇಕಲ್ಲವೆ ? ಕನ್ನಡ ಮತ್ತು ತಮಿಳ ಜನಗಳಾದ ವೆಳ್ಳರು, ರಡ್ಡಿಗಳು, ಗಂಗಡಿಕಾರರು, ಮೊದಲಾದ ಜಾತಿಯವರಲ್ಲಿ, ತಾವು ಉತ್ತರದಿಂದ ಹರಿದುಬಂದವರೆಂಬ ಪರಂಪರೆಯಿದ್ದುದು ಕಂಡುಬರುತ್ತದೆ. ‡

ಕನ್ನರು ದ್ರಾವಿಡರ ಒಂದು ಶಾಖೆ, ಎಂಬುದು ನಿಶ್ಚಿತವಿದ್ದರೆ, ಒಂದಿಲ್ಲೊಂದು ಹೆಸರಿನಿಂದ ಈ ಜನಾಂಗವು ವೇದಗಳಲ್ಲಿ ಕಾಣಿಸಿಕೊಂಡುದು ನಿಜವಿದ್ದರೆ ಇವರ ಕೆಲವೊಂದು ನೆಲೆವೀಡಿನ ಕುರುಹುಗಳು ಮೊದಲು ಉತ್ತರದಲ್ಲಿಯೂ ಇರಬೇಕಾದ್ದಿತಲ್ಲವೆ? ಅವು ಆವುವು?

* IA. VII. p. 295. † CL. p. 27.
§ CTS. III. p. 226; II. 273; VII. 262 etc.

ವಿಂಧ್ಯ-ಹಿಮಾಲಯದ ನಡುವಣ ನಾಡು ಆರ್ಯಾವರ್ತವೆಂದು ಖ್ಯಾತಿ. ಆ ಪ್ರದೇಶದಲ್ಲಿ ಸಾವಿರಾರು ವರುಷಗಳಿಂದ ಆರ್ಯರ ವರ್ಚಸ್ಸು ವಿಶೇಷ ವಾಗಿದ್ದುದರಿಂದ ಅಲ್ಲಿಯ ನಾಡು, ಬೀಡುಗಳ ಉಲ್ಲೇಖಗಳು ಸಿಕ್ಕುವುದು ಅಸಾಧ್ಯ. ಆದರೆ ಬಹಳ ಕಾಲದವರೆಗೆ ಆರ್ಯರ ವರ್ಚಸ್ಸು ವಿಶೇಷವಾಗಿಲ್ಲದ ಆರ್ಯಾವರ್ತದ ಹೊರಗಣ ಕೆಲವು ನಾಡುಗಳಲ್ಲಿ (ಈಗ ಅಲ್ಲಿ ದ್ರಾವಿಡರ ಯಾವ ಶಾಖೆಯೂ ತಲೆಯೆತ್ತಿ ಬಾಳುವುದು ಕಂಡುಬರುವುದಿಲ್ಲವಾದರೂ) ಪೂರ್ವಕಾಲದ ದ್ರಾವಿಡರ ಹಲವು ಬಗೆಯ ಕುರುಹುಗಳನ್ನು ಕಂಡುಹಿಡಿಯು ವುದು ಕಷ್ಟವಾಗಿಲ್ಲ. ಬಂಗಾಳಿನ ಸಂಶೋಧಕರು ಈ ವಿಷಯದಲ್ಲಿ ಬಹಳ ಮುಂದುವರೆದಿದ್ದಾರೆ. ಬಂಗಾಳದಲ್ಲಿ, ಊರುಗಳ ಹೆಸರುಗಳಲ್ಲಿ ಇರುವ ದ್ರಾವಿಡ ಅಂಶಗಳನ್ನು ವಿಂಗಡಿಸಿ ತೋರಿಸಲು ಹಲವರು ಯತ್ನಯಿಸಿದ್ದಾರೆ.* ಯಶಸ್ವಿಗಳಾಗಿದ್ದಾರೆ. ಅಲ್ಲಿಯ ವಿದ್ವಾಂಸರಿಗೆ ತಮ್ಮ ನಾಡು, ನಡೆ, ನುಡಿ ಗಳಲ್ಲಿ ದ್ರಾವಿಡ ಅಂಶವಿದೆಯೆಂದು ಒಪ್ಪಿಕೊಳ್ಳಲು ಸಂಕೋಚವೆನಿಸುವುದಿಲ್ಲ. ಬಂಗಾಳವನ್ನಾಳಿದ ಸೇನರೆಂಬ ಅರಸರು ಕರ್ಣಾಟ–ಕ್ಷತ್ರಿಯರು ಎಂಬ ಮಾತನ್ನು ಸಪ್ರಮಾಣವಾಗಿ ಸಿದ್ಧಪಡಿಸಿ ಬೆಳಕಿಗೆ ತಂದವರು ಒಬ್ಬ ಬಂಗಾಳಿ ವಿದ್ವಾಂಸರು.†

ಬಂಗಾಳದಷ್ಟು ದೂರಿನ ನಾಡಿನಲ್ಲಿ ಪ್ರಾಚೀನ ಕರ್ಣಾಟದ ಅಂಶಗಳಿವೆ ಯೆಂಬುದು ಸಿದ್ಧವಾಗುತ್ತಿದ್ದು, ಕರ್ಣಾಟಕ್ಕೆ ಹೊಂದಿಕೊಂಡಿರುವ ಮಹಾ ರಾಷ್ಟ್ರದಲ್ಲಿ ಮಾತ್ರ ಕನ್ನಡದ ಗಾಳಿಯೂ ಕೂಡ ಸೋಂಕಿಲ್ಲವೆಂಬಂತೆ ಅಲ್ಲಿಯ ಸಂಶೋಧಕರು ಈ ವಿಷಯವನ್ನು ಸಂಪೂರ್ಣವಾಗಿ ದುರ್ಲಕ್ಷಿಸುತ್ತಿರುವುದು —ಅಲ್ಲಗಳೆಯುತ್ತಿರುವುದು ಸೋಜಿಗವನ್ನುಂಟುಮಾಡುವ ಹಾಗಿದೆ! ಸ್ವಲ್ಪ ಹೆಚ್ಚು ಕಡಿಮೆ ಪ್ರಮಾಣದಿಂದ ಗುಜರಾತಿನ ವಿಚಾರವೂ ಹೀಗೆಯೆ ಇದೆ.

---

* Dr, S. K. Chatterjee: OBDL, Appendix A and B., Mr, B, C, Mujumdar: 'ಬಂಗಾಳಿ ಸಾಹಿತ್ಯಪತ್ರಿಕಾ' XX, quoted in CL. by Dr. D, R, Bhandarkar; K, P, Goswami: IHO, '39, pp, 137-143, etc,

† Dr, Romeshchandra Mujumdar, M. A.' ph. D· IHQ, Sept, '31, p. 455.

ತಮ್ಮ ನಾಡು ನುಡಿಗಳಲ್ಲಿ ಕನ್ನಡದ ಅಂಗವಿದೆ, ಎಂದು ಒಪ್ಪಿಕೊಂಡರೆ ಕನ್ನಡಿಗರು ಈಗ ತಮ್ಮಲ್ಲಿ ಬಂದು, ಎಲ್ಲಿ ಹಕ್ಕು ಸಾಧಿಸುವರೊ ಎಂಬ ಹೆದರಿಕೆಯು ಈ ಜನಗಳಿಗೆ ಇದ್ದಂತೆ ತೋರುತ್ತದೆ. ತಮ್ಮದು, ಕೇವಲ ಆರ್ಯ ಸಂಸ್ಕೃತಿ ಎಂಬೀ ಬಗೆಯ ಹೆಮ್ಮೆಯ ಧ್ವನಿಯೆ ಈ ನಾಡುಗಳ ಸಂಶೋಧಕ ರಲ್ಲಿ ಹೆಚ್ಚಾಗಿ ಕೇಳಬರುತ್ತದೆ. ಬಂಗಾಲಿ ಸಂಶೋಧಕರು ಮತ್ತು ಮರಾಠಿ-ಗುಜರಾತಿ ಸಂಶೋಧಕರ ಮನೋರಚನೆಯಲ್ಲಿ ಈ ಬಗೆಯ ವ್ಯತ್ಯಾಸವು ಕಂಡು ಬರುತ್ತದೆ. ಇದರ ಮನವರಿಕೆಗಾಗಿ ಡಾ. ಸುನೀತಿಕುಮಾರ ಚಟರ್ಜಿಯು ವರು ಬರೆದ ಬಂಗಾಳಿ ಭಾಷೆಯ ಇತಿಹಾಸದ ರೀತಿಯನ್ನು ನೋಡಬಹುದು; ಮತ್ತು ಮಹಾರಾಷ್ಟ್ರದ ಡಾ. ಭಂಡಾರಕರ, ಶ್ರೀ. ಭಾವೆ ಪ್ರಭೃತಿಗಳೂ ಗುಜ ರಾತಿನ ಶ್ರೀ. ಮುನಶಿಯುವರೂ ಬರೆದ ಅವರವರ ನಾಡು ನುಡಿಗಳ ಚರಿತೆ ಗಳನ್ನೂ ಓದಬಹುದು. ಡಾ. ಚಟರ್ಜಿಯುವರು ತಮ್ಮ ಗ್ರಂಥದಲ್ಲಿ ದ್ರಾವಿಡ ಅಂಶವನ್ನು ವಿವರಿಸುವುದಕ್ಕೆ ೧೦-೧೨ ಪುಟಗಳನ್ನು ಮೀಸಲಿಟ್ಟಿರುವರು. ಆದರೆ ಮರಾಠಿ ಮತ್ತು ಗುಜರಾತಿ ಭಾಷೆಗಳ ಚರಿತೆಗಳಲ್ಲಿ ಒಂದು ಅರ್ಧ ಪುಟವನ್ನಾದರೂ ಇದಕ್ಕೆ ಕೊಟ್ಟಿದ್ದರೆ, ಮತ್ತೆ ಅವರ ನಿಷ್ಪಕ್ಷಪಾತ ಬುದ್ಧಿಯ ಪ್ರದರ್ಶನವಾಗಬಹುದಾಗಿತ್ತು.

ಹೆರವರಿಗೆ ಹೆಸರಿಡುವುದರಲ್ಲೇನು ಹುರುಡಿದೆ? ಕರ್ಣಾಟದ ಸಂಶೋಧಕ ರಲ್ಲಿಯೇ ಕೆಲವರಿಗೆ, ನೃಪತುಂಗನ ಮಾತಿನಲ್ಲಿಯೆ ನಂಬುಗೆಯಿಲ್ಲ! 'ಕಾವೇರಿ ಯಿಂದಂ ಆ ಗೋದಾವರಿ ವರಂ ಇರ್ದ ನಾಡು ಅದುಕನ್ನಡ' ಎಂದು ಕವಿ ರಾಜ ಮಾರ್ಗದಲ್ಲಿರುವ ಉಲ್ಲೇಖವು ಮನೋರಾಜ್ಯವಂತೆ! ಕಾಲ್ಪನಿಕವಂತೆ! ವಿಂಧ್ಯದ ದಕ್ಷಿಣಕ್ಕೆ ಮ್ಲೇಚ್ಛಭೂಮಿಯೆಂದು ಮನು ಮೊದಲಾದವರೇ ಹೇಳುತ್ತಿರುವಾಗ ದಕ್ಷಿಣಾಪಥದಲ್ಲಿ ಆರ್ಯರ ಅಥವಾ ಆರಿಯರ ನಾಡು ಎಲ್ಲಿಂದ ಬರಬೇಕು ? ಉತ್ತರಕ್ಕೆ ಗೋದಾವರಿಯ ವರೆಗೇ ಏಕೆ ನರ್ಮದೆಯ (ವಿಂಧ್ಯದ) ವರೆಗೂ ಕನ್ನಡರ ಮೊದಲಿಗರು ನೆಲಸಿದ್ದರೆಂದು ಸಹಜವಾಗಿ ಅರಿತುಕೊಳ್ಳಬಹುದಾಗಿದೆ. ಪ್ರಾಚೀನಕಾಲದಲ್ಲಿ ದ್ರಾವಿಡಜನಾಂಗವು ಪಂಜಾ ಬಿನ ತನಕ ವ್ಯಾಪಿಸಿಕೊಂಡಿದ್ದಿತೆಂಬುದು ಒಪ್ಪಿಗೆಯಿದ್ದರೆ ಈ ದ್ರಾವಿಡರ ಒಂದು ಶಾಖೆಯವರಾದ ಕನ್ನಡರು ಗೋದೆಯವರೆಗೆ-ನರ್ಮದೆಯ ವರೆಗೂ ಒಂದು ಕಾಲದಲ್ಲಿ ನೆಲಸಿದ್ದರೆಂದರೆ ಅದರಲ್ಲಿ ಅಪನಂಬಿಗೆಯಾಗುವುದಕ್ಕೆ ಕಾರ

ಣವೇನು? ಗೋದೆಯು ವರೆಗೆ ಕರ್ಣಾಟವಿದ್ದಿತೆಂದು ಹೇಳಿದವರಾರು? ಆ ಕಾಲಕ್ಕೆ ಪ್ರತ್ಯಕ್ಷವಾಗಿ ಈ ನಾಡನ್ನೆಲ್ಲ ಆಳುತ್ತಿದ್ದ ಸಾಮ್ರಾಟನಾದ ನೃಪತುಂಗನು! ತಾನು ಕಣ್ಣಾರೆ ಕಂಡುದನ್ನು ಒಬ್ಬನು ಹೇಳುತ್ತಿರುವಾಗ (ಬೇರೆ ಬಲವಾದ ಯಾವ ಕಾರಣಗಳನ್ನೂ ಹೇಳದೆ) ಅದನ್ನು ಅಲ್ಲಗಳೆಯಲು ಹೊರಟವರ ಎದೆಗಾರಿಕೆಯು ಮಿಗಿಲು! ಪ್ರೊ. ಕೃ. ಪಾ. ಕುಲಕರ್ಣಿಯವರಂತಹ ಮಹಾರಾಷ್ಟ್ರದ ವಿದ್ವಾಂಸರಿಗೆ ನೃಪತುಂಗನು ಹೇಳಿದ ಕನ್ನಡದ ವಿಸ್ತಾರವು ಮಾನ್ಯವಿದ್ದುದು ಅವರು ಬರೆದ 'ಮರಾಠಿ ಭಾಷಾ, ಉಗಮದ ವಿಕಾಸ' ಎಂಬ ಗ್ರಂಥದಿಂದ ವ್ಯಕ್ತವಾಗುತ್ತದೆ. ಆದರೆ ನಮ್ಮಲ್ಲಿಯ ಪಂಡಿತರಿಗೆ ಕೆಲವರಿಗೆ ಇದರ ಬಗೆಗೆ ಸಂದೇಹ!

ಈ ಬಗೆಯ ಸಂದೇಹವೃತ್ತಿಗೆ ಕಾರಣವೇನು? ಕನ್ನಡದ ಇಂದಿನ ಹೀನ ಸ್ಥಿತಿ; ಅದರಿಂದುಂಟಾಗಿರುವ ಅವಿಶ್ವಾಸ, ಅಧೈರ್ಯ. ಆದರೆ ಇದಕ್ಕೆ ಪ್ರತಿಯಾಗಿ ಹೀಗೆ ಹೇಳಬಹುದು: 'ಕನ್ನಡವು ಅಷ್ಟು ಇತ್ತು, ಇಷ್ಟು ಇತ್ತು' ಎಂಬುವುದೂ ಪ್ರಾಂತಾಭಿಮಾನದಿಂದ ತಲೆತಿರುಗಿದವರ ಮಾತು; ಸರಿ. ಡಾ. ಸ್ಟೆನ್ ಕೊನೊ ( Sten Konow ) ಮೊದಲಾದ ಪರದೇಶದ ವಿದ್ವಾಂಸರೇನೂ ಈ ಪ್ರಾಂತಾಭಿಮಾನದಿಂದ ತಲೆಕೆಟ್ಟವರಲ್ಲವಷ್ಟೆ ? ಡಾ. ಕೊನೊ ಇವರ ಅಭಿಪ್ರಾಯದ ಮೇರೆಗೆ ಮಹಾರಾಷ್ಟ್ರ ಮತ್ತು ಗುಜರಾತಿನ ಮೂಲ ನಿವಾಸಿಗಳು ' ದ್ರಾವಿಡ ' ವರ್ಗಕ್ಕೆ ಸೇರಿದವರಾಗಿದ್ದಾರೆ!

> The substratum over which Gujarati and Marathi have spread was Dravidian.

ಡಾ. ಕೊನೊ ಅವರ ಅಭಿಪ್ರಾಯವು ಡಾ. ಗ್ರಿಯರಸನ್ನರಿಗೆ ಮಾನ್ಯವಿದೆ. ಹಲವು ಶತಮಾನಗಳಿಂದ ನಡೆದು ಬಂದ ಒಂದು ಪ್ರಾಚೀನ ಪರಂಪರೆಯಂತೆ ಗುಜರಾತ ಮತ್ತು ಮಹಾರಾಷ್ಟ್ರಗಳು ' ಪಂಚದ್ರಾವಿಡ ' ದಲ್ಲಿ ಒಳಗೊಳ್ಳುತ್ತವೆ. ಆದರೆ ' ದ್ರಾವಿಡರು ' ಎಂಬುದು ಸ್ಥೂಲಮಾತು ಆಯಿತು. ಹಾಗಾದರೆ ಈ ' ದ್ರಾವಿಡರು ' ಎಂದರೆ ಯಾರು ? ಮರಾಠಿ ಮತ್ತು ಗುಜರಾತಿ ಭಾಷೆಗಳಲ್ಲಿ, ಕನ್ನಡದ ಅಂಶವು ಉಂಟೆಂಬುದನ್ನು ಮಿ. ಎ. ಮಾಸ್ಟರ, I. C. S. ಇವರು ಒಂದು ವಿಸ್ತಾರವಾದ ಲೇಖನವನ್ನು ಬರೆದು ಹಲವು

ಉದಾಹರಣಗಳೊಂದಿಗೆ ತಮ್ಮ ಅಭಿಪ್ರಾಯವನ್ನು ಮಂಡಿಸಿದ್ದಾರೆ.* ಗುಜರಾತ ಮತ್ತು ಮರಾಠಿ ದೇಶದ ಹತ್ತರಿನ ದ್ರಾವಿಡರೆಂದರೆ ಕನ್ನಡಿಗರೇ. ಐತಿಹಾಸಿಕ ದೃಷ್ಟಿಯಿಂದ ವಿಚಾರಿಸಿದರೂ ಗುಜರಾತ ಮತ್ತು ಮಹಾರಾಷ್ಟ್ರಗಳೊಂದಿಗೆ ದ್ರಾವಿಡವರ್ಗದಲ್ಲಿ ಕನ್ನಡಿಗರಷ್ಟು ಬೇರಿನ್ನಾವ ಶಾಖೆಯವರ ಸಂಬಂಧವೂ ಬಂದಿಲ್ಲ. ಆದುದರಿಂದ ಗುಜರಾತಿ ಹಾಗೂ ಮರಾಠಿಯಲ್ಲಿರುವುದೆಂದು ಹೇಳುವ 'ದ್ರಾವಿಡ' ಅಂಶವು ಕನ್ನಡವೇ ಎಂದು ಎದೆತಟ್ಟಿ ಹೇಳಬಹುದಾಗಿದೆ. ಇಲ್ಲಿ ಅಹುದು ಬಹುದಿನ ಶಂಕೆಗೆ ಎಳ್ಳಷ್ಟು ಅವಕಾಶವಿಲ್ಲ.

ಡಾ. ಸ್ಟೆನ್ ಕೊನೊ ಪ್ರಭೃತಿಗಳು ಕಂಡುಹಿಡಿದಿರುವಂತೆ ಈಗ ಗುಜರಾತಿ ಮತ್ತು ಮರಾಠಿ ಭಾಷೆಗಳು ಹಬ್ಬಿಕೊಂಡಿರುವ ನಾಡಿನ ಮೂಲನಿವಾಸಿಗಳು ದ್ರಾವಿಡವರ್ಗದವರು—ಎಂದರೆ ಕನ್ನಡಶಾಖೆಗೆ ಸಂಬಂಧಪಟ್ಟವರೇ ಇರಬೇಕು ಎಂಬುದು ನಿಜವಿದ್ದಬಳಿಕ ಕನ್ನಡದ ವ್ಯಾಪ್ತಿಯು ಅಲ್ಲಿಯ ವರೆಗೂ ಇದ್ದಿತೆಂದೆ ಅದರ ಅರ್ಥವಲ್ಲವೆ ?

ಇದನ್ನು, ಬರಿ ಡಾ. ಕೊನೊ ಪ್ರಭೃತಿಗಳು ಹೇಳುವರೆಂದೇ ನಂಬಬೇಕೋ ? ಅಥವಾ ಬೇರೆ ವಿಶ್ವಸನೀಯ ಪ್ರಮಾಣಗಳುಂಟೊ ? ಇದನ್ನು ಸಿದ್ಧಮಾಡಿ ತೋರಿಸಲು ಹಲವು ಪ್ರಮಾಣಗಳೂ ಉಂಟು. ರಾಜಕೀಯ ಇತಿಹಾಸ, ಸಂಸ್ಕೃತಿ, ಮೂಲಜನಾಂಗಗಳು, ಭಾಷೆ ಇವುಗಳಲ್ಲಿ ಮಾದರಿಗಾಗಿ ಒಂದೆರಡು ಸಂಗತಿಗಳನ್ನಷ್ಟೆ ಎತ್ತಿಕೊಂಡು ವಿಚಾರಿಸಬಹುದಾಗಿದೆ.

ಮೊದಲು ಗುಜರಾತ ಮತ್ತು ಮಹಾರಾಷ್ಟ್ರ ಎಂಬ ದೇಶ—ನಾಮಗಳನ್ನೆ ವಿಮರ್ಶಿಸಬಹುದು ಇವೆರಡು ನಾಡಿನ ಮೂಲಜನಾಂಗವು 'ದ್ರಾವಿಡ' ಪಂಗಡಕ್ಕೆ ಸೇರಿದ್ದು—ಕನ್ನಡಕ್ಕೆ ಸಂಬಂಧಪಟ್ಟದ್ದು, ಎಂದು ಹೇಳುವುದಾದರೆ ಈ ನಾಡುಗಳಿಗೆ, 'ಗುಜರಾತ' ಮತ್ತು 'ಮಹಾರಾಷ್ಟ್ರ' ಎಂಬ ಹೆಸರುಗಳು ಏಕೆ ? ಎಂದು ಕೇಳಬಹುದು. ಸಂದೇಹವು ಬಹಳ ಸಮರ್ಪಕವಾಗಿದೆ. ಗುಜರಾತ ಮತ್ತು ಮಹಾರಾಷ್ಟ್ರ ಎಂಬ ಎರಡೂ ಹೆಸರುಗಳು, ತಾರತಮ್ಯ

* Some parallelisms in Indo-Aryan and Dravidian with special reference to Marathi, Gujarati and Kanarese.

—JBRAS. Vols. V and VIII.

ದಿಂದ ನೂತನಾಡುವುದಾದರೆ, ಅರ್ವಾಚೀನ. ಈ ನಾಡುಗಳಿಗೆ ಇರುವ ಹಳೆಯ ಹೆಸರುಗಳು ಬೇರೆ ಇವೆ. 'ಗುರ್ಜರ' ಎಂಬ ಹೊರಗಿನ ಜನಾಂಗವು ಪಂಜಾಬಿನತ್ತಣಿಂದ ದಕ್ಷಿಣಕ್ಕೆ ಸಾಗುತ್ತ ಸಾಗುತ್ತ ಬಂದು ಇಲ್ಲಿ ನೆಲಸಿದ ಬಳಿಕ ಈ ನಾಡಿಗೆ ಗುರ್ಜರದೇಶವೆಂಬ ಹೆಸರಾಯಿತು. ಬೇರೆಬೇರೆ ಕಾಲದಲ್ಲಿ ಲಾಟದೇಶ, ನಾಗದೇಶ, ಅನೂಪದೇಶ 'ಎಂದು ಮುಂತಾಗಿ ಹಲವು ಮೊದಲಿನ ಹೆಸರುಗಳಿದ್ದುದು ಕಂಡುಬರುತ್ತದೆ, ಎಂದು ಶ್ರೀಮಾನ ಮುನಶಿಯವರೆ ಬರೆದಿರುತ್ತಾರೆ.*

ಮಹಾರಾಷ್ಟ್ರವು ಮೊದಲು ಈಗಿನಷ್ಟು ವಿಸ್ತೃತವಾಗಿರಲಿಲ್ಲವೆಂದೂ, ವರ್ಹಾಟವೆ ಪ್ರಥಮ ಮಹಾರಾಷ್ಟ್ರವೆಂದೂ ಆ ನಾಡಿನ ವಿದ್ವಾಂಸರೆ ಹೇಳುತ್ತಿದ್ದಾರೆ. ಮಹಾರಾಷ್ಟ್ರ ಶಬ್ದವು ಹೇಗೆ ಹುಟ್ಟಿತೆಂಬ ಬಗ್ಗೆ ಆ ನಾಡಿನ ವಿದ್ವಾಂಸರಿಗೆ ದಿಗಿಲು. ಇದೆಲ್ಲವನ್ನೂ ಕುರಿತು ತುಂಬ ಅರೆದಾಟವು ನಡೆದಿದೆ.*

ಈಗಣ ಕರ್ಣಾಟ—ಮಹಾರಾಷ್ಟ್ರಗಳ ಸಂಲಗ್ನ ಪ್ರಾಂತಕ್ಕೆ ಒಂದು ಕಾಲದಲ್ಲಿ ' ಕುಂತಲ ' ಎಂಬ ಹೆಸರಿದ್ದಂತೆ ಕಂಡುಬರುತ್ತದೆ. ಕುಂತಲವು ಆರ್ಯಾವರ್ತದ ಹೊರಗಣ ನಾಡು. ಇಲ್ಲಿಯ ಮೂಲನಿವಾಸಿಗಳಿಗೆ ಗಡ್ಡ, ಮೀಸೆ, ಜಡೆಗಳ ಮೇಲೆ ವಿಶೇಷ ಪ್ರೀತಿಯೆಂದು ಇವರಿಗೆ ಕೂಂದಲ ( ಕುಂತಲರು ) ಎಂಬ ಹೆಸರು ಬಂದಿತೇನೋ ತಿಳಿಯದು. ಈ ಬಗೆಯಾಗಿ ಊಹಿಸುವದಕ್ಕಂತು ಸಾಕಷ್ಟು ಆಧಾರಗಳಿವೆ.‡ ಮಧ್ಯಕಾಲದಲ್ಲಿ ಕರ್ಣಾಟಕ್ಕೇ ಕುಂತಲವೆಂದು ಹೇಳುವ ರೂಢಿಯಿದ್ದಿತೆಂದು ಶಾಸನಗಳಿಂದ ನಿಶ್ಚಿತವಾಗಿ ಗೊತ್ತಾಗುತ್ತದೆ § ಆದುದರಿಂದ ಡಾ. ಬಿ. ಸಿ. ಲಾ. ಡಾ. ಬುಲ್ಹರ ಮೊದಲಾದವರು ಕುಂತಲ=ಕರ್ಣಾಟವೆಂದು ಅರ್ಥ ಮಾಡಿದ್ದುಂಟು. ಆದರೆ ರಾಜಶೇಖರನ ಕರ್ಪೂರಮಂಜರಿಯಲ್ಲಿ ವಿದರ್ಭವೂ ಕುಂತಲ ದೇಶವೆಂದು ವರ್ಣಿಸಿದ್ದುಂಟು. ಒಂದುಕಾಲದಲ್ಲಿ ತುಂಗಭದ್ರೆಯಿಂದ ವಿದರ್ಭದ ವರೆಗೆ ಕುಂತಲ ದೇಶವೆಂದು ತಿಳಿಯಲ್ಪಡುತ್ತಿದ್ದಿತೆಂದು ಪ್ರಾಚೀನ ಭಾರತದ ಭೌಗೋಲಿಕ ಸ್ಥಳಗಳನ್ನು ದೇಶಗಳನ್ನು ವಿವರಿಸುವಾಗ ಡಾ. ನಂದೋಲಾಲರು ಹೇಳು

* Gl. p. 2. † ಮಮೂ. ಪು. ೧–೬. § ಕವೀಕ್ಷೆ. ಪು. ೨೦–೨೪; ೨೮–೨೯; ೧೨೨.
‡ Nandolal Dey.

ತ್ತಾರೆ. ಮೊದಲಿನ ರೂಢಿಯು ಹಿಂದೆ ಬಿದ್ದು ಕೊನೆಗೆ ಕರ್ಣಾಟಕಕ್ಕೇ ಕುಂತಲವೆಂದು ಕರೆವ ವಾಡಿಕೆಯು ಮಾತ್ರ ಜೀವಂತವಾಗಿ ಉಳಿಯುವದಕ್ಕೆ ಕಾರಣವೇನಿರಬಹುದು ? ಕುಂತಲರೆಂದರೆ ಕನ್ನಡರು. ಎಂದಿನ ವರೆಗೆ ಕನ್ನಡರು ವಿದರ್ಭದ ವರೆಗೂ ಹಬ್ಬಿಕೊಂಡಿದ್ದರೊ ಅಲ್ಲಿಯು ವರೆಗೆ ವಿದರ್ಭವು ಕುಂತಲ ದೇಶವೇ ಆಗಿದ್ದಿತು. ಕನ್ನಡರ ಉತ್ತರದ ಮೇರೆಯು ದಕ್ಷಿಣಕ್ಕೆ ಸರಿದಂತೆ ಕುಂತಲವು ಕಿರಿದು ಕಿರಿದಾಗಲಾರಂಭಿಸಿದ್ದುದು ಗೋಚರವಾಗು ತ್ತದೆ. ಶಕ್ತಿಸಂಗಮ ತಂತ್ರದಲ್ಲಿ 'ದ್ವಾರಕಾಂತಂ ಕುಂತಲಾಭಿದೋ ದೇಶಃ' ಎಂದು ಹೇಳಿದೆ.* ಇದರಿಂದಲೂ ಗುಜರಾಥ, ಮಹಾರಾಷ್ಟ್ರ ಮತ್ತು ಕರ್ಣಾಟಗಳು ಕೂಡಿ ಒಮ್ಮೆ ಒಂದೇ ಜನಾಂಗದ ನಾಡಾಗಿದ್ದಿತೆಂಬ ಮಾತು ನಿದರ್ಶನಕ್ಕೆ ಬರುತ್ತಲಿದೆ. ಮರಾಠ ಮತ್ತು ಗುಜರಾತಗಳ ಮೂಲಜನ ಗಳು ( substratum ) ದ್ರಾವಿಡರೆಂದು ಡಾ. ಕೊನೊ ಅವರು ಹೇಳುವ ಮಾತಿಗೇ ಇನ್ನೊಂದು ದಿಕ್ಕಿನಿಂದ ಬಂದಂತಾಯಿತು ! ಈ ಪ್ರದೇಶದಲ್ಲಿ ಹಬ್ಬಿಕೊಂಡಿದ್ದ ದ್ರಾವಿಡರ ಶಾಖೆಯು ಆವುದೆಂಬುದೂ ಈಗ ನಿಶ್ಚಿತವಾಗಿ ಗೊತ್ತಾಗುವಂತಿದೆ. ದ್ರಾವಿಡರ ಈ ಶಾಖೆಯೆ ಕುಂತಲರು. ಈ ಕುಂತಲ ರಿಂದಲೆ ದ್ವಾರಕೆಯವರೆಗಣ ನಾಡಿಗೂ ಕುಂತಲ ದೇಶವೆಂಬ ಹೆಸರು ಬಂದಿರ ಬೇಕೆಂಬುದು ಸ್ಪಷ್ಟವಿದೆ.

ಗುಜರಾತ ಎಂಬ ಹೆಸರು ಅರ್ವಾಚೀನ. ಪ್ರಾಚೀನ ಶಾಸನಗಳಲ್ಲಿ 'ಲಾಟ' ವೆಂಬುದೆ ಪ್ರಾಮುಖ್ಯವಾಗಿ ಬಳಕೆಯಲ್ಲಿತ್ತು. ಮಹಾರಾಷ್ಟ್ರವೆಂಬ ಶಬ್ದವು ಎಷ್ಟೋ ಪ್ರಾಚೀನವಿದ್ದರೂ ಶಾಸನಾದಿಗಳಲ್ಲಿ ಅದರ ಉಲ್ಲೇಖವು ಕಡಿಮೆ. ಕರ್ಣಾಟ ಮಹಾರಾಷ್ಟ್ರಗಳನ್ನು ನಾಲ್ಕುನೂರು ವರ್ಷಗಳ ವರೆಗೆ ಅಖಂಡವಾಗಿ ಆಳಿದ ಚಲುಕ್ಯರು ರಾಷ್ಟ್ರಕೂಟರಲ್ಲಿ (೨ನೆಯ ಪುಲಿಕೇಶಿಯನ್ನು ಳಿದು) ಯಾರೂ ಮಹಾರಾಷ್ಟ್ರದ ಹೆಸರನ್ನೇ ಎತ್ತಿಲ್ಲ. ಒಂದು ಶಾಸನ್ನ ದಲ್ಲಿಯೂ ಮಹಾರಾಷ್ಟ್ರದ ಉಲ್ಲೇಖವಿಲ್ಲ ! ಚಲುಕ್ಯರು ಕುಂತಲಾಧಿಪತಿ ಗಳೆನಿಸಿದರು. ಇವರು ಆಳಿದ ನಾಡು ಕುಂತಲವಾಯ್ತು. ರಾಷ್ಟ್ರಕೂಟರು ಆಳುವಾಗ ಅದೇ ನಾಡಿಗೆ 'ರಟ್ಟ ಪಾಡಿ' ಎಂಬ ಹೆಸರು ಬಂದಿತು. ಇದನೆ

* ವಾಚಸ್ಪತ್ಯಕೋಶ

ತಮಿಳ ಶಾಸನಗಳಲ್ಲಿ 'ಇಲಟ್ಟಿ' ಅಥವಾ 'ಇರಟ್ಟಿಪಾಡಿ' ಎಂದು ಕರೆದುದು ಉಂಟು.

ಹಿಂದಿನ ಶಾಸನವೊಂದರಲ್ಲಿ 'ಬಹತ್ ಕರ್ಣಾಟ' ಎಂಬ ಮಾತು ಒಂದೆಡೆಗೆ ಕಾಣಿಸಿಕೊಳ್ಳುತ್ತದೆ * ಕರ್ಣಾಟ ಮತ್ತು ಮಹಾರಾಷ್ಟ್ರ ಸೇರಿದ ನಾಡಿಗೆಲ್ಲ 'ಬೃಹತ್ ಕರ್ಣಾಟ' ವೆಂದಂತೆ ಕಾಣುತ್ತದೆ. ಪ್ರಾಚೀನ ರಾಜರು ತಾವು ಆಳಿದ ಅಥವಾ ಗೆದ್ದುಕೊಂಡ ನಾಡುಗಳ ನಾಮಾವಳಿಯನ್ನು ಹೇಳುವಾಗ ಮಹಾರಾಷ್ಟ್ರದ ಹೆಸರೇ ಲೋಪವಾಗಿರುತ್ತದೆ. ಸುತ್ತಲಿನ ಎಲ್ಲ ನಾಡುಗಳ ಹೆಸರುಗಳು ಬಂದು ಒಂದು ಮಹಾರಾಷ್ಟ್ರವೇ ಉಳಿದುಬಿಟ್ಟಿರುವುದಕ್ಕೆ ಕಾರಣವೇನು? ಕಾರಣಗಳು ಎರಡು. ಮರೆತುಹೋಗಿರಬೇಕು; ಅಥವಾ ಅವುದೊಂದು ದೇಶದಲ್ಲಿ ಅದು ಒಳಗೊಳ್ಳುತ್ತಿದ್ದುದರಿಂದ ಮಹಾರಾಷ್ಟ್ರದ ಹೆಸರನ್ನು ಸ್ವತಂತ್ರವಾಗಿ ಹೇಳುವ ಅವಶ್ಯವಿಲ್ಲದಿರಬೇಕು. ಸುತ್ತಲಿನ ಎಲ್ಲ ನಾಡುಗಳ ಹೆಸರುಗಳಿದ್ದು ಮಹಾರಾಷ್ಟ್ರವನ್ನು ಒಂದೇ ಮರೆತರೆಂದು ಹೇಳುವುದು ಅಸಮರ್ಪಕ. ಹಿಂದಿನ ಶಾಸನಗಳಲ್ಲಿ 'ಲಾಟ-ಕರ್ಣಾಟ' ಎಂಬವುಗಳ ಜೋಡಿಯು ಹಲವೆಡೆಗಳಲ್ಲಿ ಕಾಣಿಸಿಕೊಳ್ಳುತ್ತದೆ. ಲಾಟ ಎಂದು ಹೇಳಿದೊಡನೆ ಕರ್ಣಾಟವು ಬರುವ ಕಾರಣವಿದ್ದಿಲ್ಲ. ನಡುವೆ ಮಹಾರಾಷ್ಟ್ರ ದೇಶವಿದೆ. ಆದರೂ ಲಾಟ-ಕರ್ಣಾಟಗಳು ಎಡೆಬಿಡದೆ ಕೂಡಿಕೊಂಡಿರಲು ಕಾರಣವೇನು?

> ಜಿತ್ವಾ ಚೋಳ ಕಳಿಂಗ ಸೇವುಣ ಬೃಹತ್ ಕರ್ಣಾಟಲಾಟಾಧಿಪಾನ್ ||
> ಲಾಟ ಕರ್ಣ್ಣಾಟ ಕರಹಾಟ ಕಲಿಂಗ ಕೊಂಗ ವಂಗ ವೆಂಗಿ ‡........
> ಜಿತ್ವಾ ವಂಗ ತಿಲಂಗ ಗೂರ್ಜರ ಲಸತ್ ಕರ್ಣಾಟ ಗೌಡಾಧಿಪಾನ್ ||+
> ಕರ್ಣಾಟಲಾಟೋದ್ಭಟಕ್ಷೋಣೀ ಪಾಲ ವಿಡಂಬನಃ

ಇವೆ ಮೊದಲಾದ ಉಲ್ಲೇಖಗಳಲ್ಲಿ ಮರಾಠ ದೇಶದ ಹೆಸರೆ ಕಾಣಬರುವುದಿಲ್ಲ. ತೀರ ಇಲ್ಲವೇ ಇಲ್ಲವೆನ್ನಲೂ ಬರುವಂತಿಲ್ಲ. 'ಭೋಜ ಮರಾಟಲಾಟ ಕಟಕಾನ್' ಎಂಬಲ್ಲಿ ಲಾಟದ ಹತ್ತಿರ ಮಹಾರಾಷ್ಟ್ರದ ಹೆಸರುಂಟು. ಹಾಗಾದರೆ ಅನೇಕ ಶಾಸನಗಳಲ್ಲಿ ಲಾಟ-ಕರ್ಣಾಟದ ಜೋಡಿ

* EI. III. p. 87. ‡ EI. IV. p. 261. + EI. XII. p. 24.

ಯನ್ನು ಹೇಳುವಾಗ ಮಹಾರಾಷ್ಟ್ರವು ಎಲ್ಲಿ ಹೋಯ್ತು? ಅದು ಕರ್ಣಾಟದ ಹೊಟ್ಟೆಯಲ್ಲಿಯೆ ಅಡಗಿದ್ದಿತೆಂಬುದು ಸ್ಪಷ್ಟವಿದೆ. ಹಿಂದಕ್ಕೆ 'ಬೃಹತ್ ಕರ್ಣಾಟ'ವು ವರ್ಧಾ ಟದ ವರೆಗೂ ವ್ಯಾಪಿಸಿದ್ದುದರಿಂದ ಮಹಾರಾಷ್ಟ್ರವು ಕರ್ಣಾಟದೊಳಗೆ ಹುದುಗಿಕೊಂಡಿದ್ದಿತೆಂಬುದು ಮೇಲೆಯೆ ಕಾಣುವಂತಿದೆ. ಆದುದರಿಂದಲೆ ತಾರಾತಂತ್ರಕಾರನು ಕರ್ಣಾಟವೆಂದರೆ ಮಹಾರಾಷ್ಟ್ರವೆಂದು ಹೇಳಿದ್ದಾನೆ.* ಗುಣಾಢ್ಯನ ಬೃಹತ್ಕಥೆಯಲ್ಲಿ ದಕ್ಷಿಣ ದೇಶದ ಅನೇಕಾನೇಕ ಕಥೆಗಳು, ಪರಂಪರೆಗಳು ಸಂಗ್ರಹಿಸಲ್ಪಟ್ಟಿವೆ. ಪೈಠಣದ ಸುತ್ತಣ ನಾಡಿನ ಕಥೆಗಳು ಆದರಲ್ಲಿ ಅಡಕವಾಗಿವೆ. ಆದುದರಿಂದ ಬೃಹತ್ಕಥೆಯೊಳಗಿನ ಈ ಭಾಗದ ವಿಷಯಕ ಉಲ್ಲೇಖಗಳು ಹೆಚ್ಚು ವಿಶ್ವಸನೀಯವಾದವುಗಳೆಂದು ಹೇಳಬಹುದಾಗಿದೆ. ಶೂದ್ರಕನೆಂಬ ರಾಜನು ವೀರವರನೆಂಬ ತನ್ನ ಸೇವಕನಿಗೆ ಕರ್ಣಾಟ–ಲಾಟಯುಕ್ತವಾದ ರಾಜ್ಯವನ್ನು ಒಪ್ಪಿಸಿದನೆಂದು ಬೃಹತ್ಕಥೆಯಲ್ಲಿ ಒಂದು ಕಥೆಯಿದೆ (೧೨. ೧೧. ೧೦೯). (ಲಾಟದೇಶೇ ತತೋ ರಾಜ್ಯಂ ಸ ಕರ್ಣಾಟಯುತೇ ನೃಪಃ) ಬೃಹತ್ಕಥೆಯು ಕ್ರಿಸ್ತಶಕದ ಆರಂಭಕಾಲದ ಪರಂಪರೆಯನ್ನು ಸೂಚಿಸುವ ಪ್ರಾಚೀನ ಗ್ರಂಥವು. ಈ ಬಗೆಯಾಗಿ ಕುಂತಲದ ಪ್ರಾಚೀನ ಪರಂಪರೆಯೂ ಲಾಟ–ಕರ್ಣಾಟಗಳ ನಿಕಟ ಸಂಬಂಧದ ಬೃಹತ್ಕಥೆ, ಶಿಲಾಶಾಸನಾದಿಗಳೊಳಗಿನ ಸ್ಪಷ್ಟವಾದ ಉಲ್ಲೇಖಗಳೂ ಸಂಪೂರ್ಣವಾಗಿ ಒಂದಕ್ಕೊಂದು ಪೋಷಕವಾಗಿವೆ. ಸ್ಟೆನ್ ಕೊನೊ ಪ್ರಭೃತಿ ಆಧುನಿಕ ಸಂಶೋಧಕರ ಅಭಿಪ್ರಾಯವೂ ಮೇಲ್ಕಾಣಿಸಿರುವಂತೆ ಇದಕ್ಕೆ ಬೆಂಬಲವನ್ನು ಕೊಡುತ್ತಿದೆ. ಆದುದರಿಂದ (ಕರ್ಣಾಟವು ಇಂದು ಎಷ್ಟೇ ಸೊರಗಿ ಕೊರಗಿರುವುದಾದರೂ) ಪ್ರಾಚೀನ ಕಾಲದಲ್ಲಿ ಮಹಾರಾಷ್ಟ್ರಕ್ಕೆ ಕರ್ಣಾಟದ ಹೊರಗೆ ಸ್ವತಂತ್ರವಾದ ಅಸ್ತಿತ್ವವೇ ಇದ್ದಿಲ್ಲ. ಕನ್ನಡದ ಒಡಲಲ್ಲಿಯೆ ಮೊದಲು ಆದರ ಸಮಾವೇಶವಾಗುತ್ತಲಿದ್ದಿತೆಂಬುದು ನಿಃಸಂದಿಗ್ಧವಾಗಿ ಸಿದ್ಧವಾಗುತ್ತದೆ.

ಈಗಣ ಗುಜರಾತದ ದಕ್ಷಿಣಭಾಗವು ಸುಮಾರಾಗಿ ಲಾಟವೆಂದು ಎಣಿಸಲ್ಪಡುತ್ತಲಿತ್ತು. ಮಹಿ ಮತ್ತು ತಾಪಿ ಹೊಳೆಗಳ ನಡುವಣ ಸೀಮೆಯು

* Nandolal Dey.

ಲಾಟ ಎಂದು ಬಲ್ಲರನು.† ಹಲ್ಯನ ಅಭಿಪ್ರಾಯವೂ ಸಾಮಾನ್ಯವಾಗಿ ಹೀಗೆಯೆ ಇದೆ.* ಲಾಟ ದೇಶವು ಖಾನದೇಶದ ವರೆಗೂ ಇದ್ದಿತೆಂದು ಪ್ರಾಚೀನ ಹಿಂದೂದೇಶದ ಪಟ್ಟಣ ದೇಶಗಳನ್ನು ವಿವರಿಸುವ ಒಂದುಕೋಶವು ಹೇಳುತ್ತದೆ. ಲಾಟದ ಸೀಮೆಗೆ ಹೊಂದಿಯೆ ಕರ್ಣಾಟವಿದ್ದಿತೆಂಬ ಪ್ರಾಚೀನ ಪರಂಪರೆಯನ್ನು ನೆನೆದುಕೊಂಡರೆ ಕನ್ನಡದ ಉತ್ತರ ಮೇರೆಯು ತಾಪಿ ನದಿ ಯೆಂದಂತಾಗುವುದು. ಖಾನದೇಶವು ಕರ್ಣಾಟದಲ್ಲಿಯೆ ಅಡಕವಾಗುವುದು.

ದ್ವಾರಕೆಯವರೆಗೆ ಕುಂತಲದೇಶವಿದ್ದಿತೆಂಬ ಪರಂಪರೆಯ ಬೆಳಕಿನಲ್ಲಿ ವಿಚಾರಿಸಿದರೆ, ಕರ್ಣಾಟ–ಲಾಟಗಳ ಜೋಡು ಉಲ್ಲೇಖಗಳ ರೀತಿಯನ್ನು ನೋಡಿದರೆ ಪೂರ್ವಕಾಲದಲ್ಲಿ ಲಾಟದೇಶವೂ ಕನ್ನಡಿಗರಿಗೆ ಸಂಬಂಧಪಟ್ಟುದೇ ಆಗಿರಬೇಕೆಂಬ ವಿಚಾರವು ಬಲಪಡುತ್ತದೆ. 'ಲಾಟ' ಎಂಬ ಹೆಸರು ಕೂಡ ಈ ಮಾತಿಗೆ ಬೆಂಬಲವನ್ನು ಕೊಡುವಂತೆ ತೋರುತ್ತದೆ. ಪಂಡಿತ ಭಗವಾನ ಲಾಲ ಇಂದ್ರಾಜಿಯವರ ಅಭಿಪ್ರಾಯದಂತೆ, ಅಲ್ಲಿ ನೆಲಸಿದ ಒಂದು ಜನಾಂಗ ದಿಂದ ಆ ನಾಡಿಗೆ 'ಲಾಟ' ಎಂಬ ಹೆಸರು ಬಂದಿದೆ.§ ಫ್ಲೀಟರಿಗೂ ಸುಮಾ ರಾಗಿ ಈ ಅಭಿಪ್ರಾಯವು ಮಾನ್ಯವಿದೆಯೆಂದು ಅವರು ಲಟ್ಟಲೂರಿನ ವಿಷ ಯಕ್ಕೆ ಚರ್ಚಿಸುವಾಗ ಕಂಡುಬರುತ್ತದೆ. Name of Lat country was determined from the name of some local tribe; perhaps the Lattas. ಹಾಗಾದರೆ ಲಾಟ ಎಂಬ ಹೆಸರು ಬರಲು ಕಾರಣವಾದ 'ಲಾಟ' ಜನಾಂಗವು ಆವುದಿರಬಹುದು ?

'ಲಾಟರು', ಡಾ. ಸೆನ್ ಕೊನೊ ಅವರು ಗುಜರಾತಿನ ಮೂಲಿಗರೆಂದು ಹೇಳುವ ದ್ರಾವಿಡ ಶಾಖೆಗೆ ಸಂಬಂಧಿಸಿದ ಜನಗಳೇ ಆಗಿರಬಹುದೆ? ತಮಿಳ ನಾಡಿನ ಚೋಳವಂಶದ ರಾಜರಿಗೆ ಲಾಟರಾಜರೆಂಬ ಒಂದು ಬಿರುದು ಇದ್ದುದು ಶಾಸನಗಳಿಂದ ಕಂಡುಬರುತ್ತದೆ. 'ಲಾಟ ರಾಜ' ವೀರ ಚೋಳ ಎಂಬ ಮಾತು ಆಗಾಗ ಕಾಣಿಸಿಕೊಳ್ಳುವುದು. ಇದರಿಂದ ಈ ಚೋಳವಂಶ ದವರು ಲಾಟ ದೇಶದಿಂದ ಬಂದಿರಬಹುದೆಂದು (ನನ್ನ ಊಹೆಯಲ್ಲ ಮತ್ತೆ!) ರಾವಸಾಹೇಬ ವಿ. ವೆಂಕಯ್ಯನವರು, ಸರಕಾರಿ ಶಾಸನ ಇಲಾಖೆಯ ಮುಖ್ಯಾ

† IA. XV. p. 198. * XII. p. 181.

§ Bom. Gazett. vol. I. part I. p. 7

ಧಿಕಾರಿಗಳು ಬರೆಯುತ್ತಾರೆ *

> The expression ' Lat Raj ' which is applied to Veer Chola and to his ancestors suggests that these chiefs may have immigrated from Lata (Gujarat).

ಆದುದರಿಂದ 'ಲಾಟ' ಎಂಬ ಜನಾಂಗವು ದ್ರಾವಿಡ ಕುಲದ್ದೆಂದು ಊಹಿಸಲು ಅಡ್ಡಿ ತೋರುವುದಿಲ್ಲ.

ಇನ್ನು 'ಲಾಟ' ಇದರ ಅರ್ಥವೇನಿರಬಹುದೆಂಬ ವಿಚಾರ. ಲಾಟ ಇದರ ಮೂಲರೂಪವು 'ಲಟ್ಟ' ಎಂದಿರುವ ಸಂಭವವು ಇಲ್ಲದಿಲ್ಲ. ರಾಷ್ಟ್ರಕೂಟರ ಶಾಸನಗಳಲ್ಲಿ ಅಡಿಗಡಿಗೆ ಬರುವ ಲಟ್ಟಲೂರು ಈಗಿನ ಲಾತೂರೆಂದು ಹಲವು ವಿದ್ವಾಂಸರು ಊಹಿಸಿದ್ದಾರೆ. 'ರಟ್ಟ' ಎಂಬ ಪದವು ಅಪಭ್ರಷ್ಟವಾಗಿ ಲಟ್ಟ-ಲಾಟ ಎಂದಾಗಿರಬಹುದೆಂದು ತೋರುತ್ತದೆ. ಸುವಿಖ್ಯಾತ ವಿದ್ವಾಂಸರಾದ ಶ್ರೀ. ಕೆ ಪಿ ಜಯಸ್ವಾಲರು ಹಸ್ತಿಗುಂಫೆಯ ಪ್ರಾಚೀನ ಶಾಸನದ ವಿಮರ್ಶೆಯನ್ನು ಮಾಡುವಾಗ ರಠಿಕ ಶಬ್ದದ ಮೇಲೆ ಒಂದು ಟಿಪ್ಪಣಿಯನ್ನು ಬರೆದಿರುವರು. ರಠಿಕ ಎಂಬ ಪದವು ಬೇರೆಬೇರೆ ಶಾಸನಾದಿಗಳಲ್ಲಿ ಬೆರೆಬೇರೆ ತೆರನಾಗಿ ಬರೆಯಲ್ಪಟ್ಟಿದೆ. ಗಿರಿನಾರ ಶಾಸನದಲ್ಲಿ ರಿಷ್ಟಿಕ, ಅಶೋಕನ ರಾಯಸಗಳಲ್ಲಿ ರಠಕ, ರಠಕ ಧೌಲಿ ಶಿಲಾಲೇಖದಲ್ಲಿ ಲಠಿಕ ಎಂದುಂಟು.§ (ಬಂಗಾಳದಲ್ಲಿ ಒಂದು ಪ್ರಾಚೀನ 'ಲಾಟ' ದೇಶವಿತ್ತು. ಅದರ ಹೆಸರಿನಲ್ಲಿ ಆಗಿರುವ ಬದಲಾವಣೆಗಳನ್ನು ಈ ಸಂದರ್ಭದಲ್ಲಿ ವಿಚಾರಿಸಬಹುದು. ಲಾಡ, ರಾಡ, ರಾಢ ಎಂದು ಮುಂತಾಗಿ ಅದರಲ್ಲಿ ವೈವಿಧ್ಯಗಳಾಗಿವೆ.) ರಠಿಕರೆ ರಟ್ಟರೆಂದು ಡಾ. ಆಳತೇಕರ ಮೊದಲಾದ ವಿದ್ವಾಂಸರು ಒಪ್ಪುತ್ತಾರೆ.‡ ಆದುದರಿಂದ ಲಾಟದೇಶದ ಮೂಲನಿವಾಸಿಗಳು ರಠಿಕ—ರಟ್ಟರೆಂದೂ ಅವರು ಮೂಲದಲ್ಲಿ ದ್ರಾವಿಡಪಂಗಡದವರೆಂದು ನಿರ್ಧರಿಸಬಹುದಾಗಿದೆ. ರಟ್ಟರೇ ರಾಷ್ಟ್ರಕೂಟರು ಎಂಬ ಬಗೆಗೆ ಯಾರೂ ಸಂದೇಹಪಟ್ಟುಕೊಳ್ಳುವ ಕಾರಣವಿಲ್ಲ. ಏಕೆಂದರೆ ರಾಷ್ಟ್ರಕೂಟರೇ ತಮ್ಮ ಶಾಸನಗಳಲ್ಲಿ, 'ರಟ್ಟವಂಶೋದ್ಭಃ' ಎಂದು ತಾವೇ

---

* EI. IV. p. 138. § EI. XX. p. 84. ‡ RK. p. 26.

ಹೇಳಿಕೊಂಡಿದ್ದಾರೆ. § ವಿನ್ಸೆಂಟ ಸ್ಮಿತ್‌ನು 'The indigenous tribes' ಎಂದು ರಾಷ್ಟ್ರಕೂಟರ ವಿಷಯಕ್ಕೆ ಹೇಳುತ್ತಾನೆ.* ಆದಕಾರಣ ಲಾಟದೇಶವು ರಾಷ್ಟ್ರಕೂಟರ ಮೂಲಸ್ಥಾನವೆನ್ನಲು ಅಡ್ಡಿಯಿಲ್ಲ. 'ಲಾಟ' ರು ಎಂದರೆ ರಾಠರು—ರಟ್ಟರು; ರಾಷ್ಟ್ರಕೂಟರು ಇವರೇ ಲಾಟದೇಶದ 'ಕುಟುಂಬಿ' ಗಳು (ರಾಷ್ಟ್ರಕೂಟರು. ತಮಗೆ ಕುಟುಂಬಿಗಳು ಎಂದುಕೊಂಡ ವಿಚಾರವು ಹಿಂದೆ ಬಂದಿದೆ). 'ಕೃಷೀವಳಂ, ಕರ್ಷಕಂ ಕುಟುಂಬಿಯೆನಿಕ್ಕುಂ' ಎಂದು ಅಭಿದಾನ ವಸ್ತುಕೋಶದಲ್ಲಿ ನಾಗವರ್ಮನು ಹೇಳಿದ್ದಾನೆ. ಕನ್ನಡದ ಇಂದಿನ ಕುಡುವರು (ಒಕ್ಕಲರು), ಮಹಾರಾಷ್ಟ್ರದ ಕುಳುಂಬಿಗಳು † ಮತ್ತು ಗುರ್ಜರದೇಶದ ಕಣಬಿಗಳು ಅಂದಿನ ರಟ್ಟರ ಪೀಳಿಗೆಯವರೆಂದೆ ಹೇಳಬಹುದು. 'ಕುಣಬಿ ಮಾಜೂನ ಮರಾಠಾ ಹೋತೊ' ಕುಳುಂಬಿ—ಕುಟುಂಬಿಯು ಮಲೆತು ಎಂದರೆ ಬಲಿಷ್ಠನಾಗಿ ಅವನೇ ಮರಾಠನೆಂದೆನಿಸಿ ಕೊಳ್ಳುತ್ತಾನೆ.) ಇದೊಂದು ಮರಾಠಿಯೊಳಗಿನ ಗಾದೆಯ ಮಾತು. ಈ ಗಾದೆಯಿಂದ ಮರಾಠರಲ್ಲಿ ಕುಟುಂಬಿಗಳು (ರಠಿಕರು) ಉಂಟೆಂದು ಸ್ಪಷ್ಟವಿದೆ. ಆದರೆ ಕಾಲಪ್ರವಾಹದಲ್ಲಿ ಹರಿಯುತ್ತ ಹೋಗಿ, ಪರಿಸ್ಥಿತಿಗನುಸರಿಸಿ ವೇಷ-ಭಾಷೆಗಳಲ್ಲಿ ಬದಲಾವಣೆಗಳಾಗಿ ಒಬ್ಬರೊಬ್ಬರ ಗುರುತು ಮರೆತಿದ್ದಾರೆ. ಹತ್ತುಗೆ ಹೊಂದಿಕೆಗಳು ಇಲ್ಲದಂತೆ ಆಗಿವೆ. ಆದರೂ ಮೂಲದಲ್ಲಿ ಇದು ಒಂದೇ ಜನಾಂಗ. ಮಹಾರಾಷ್ಟ್ರ ಮತ್ತು ಗುಜರಾತಿನಲ್ಲಿಯ (ಸ್ಟೆನ್ ಕೊನೊ ಅವರು ಹೇಳುವ) 'Dravidian substrata' ಎಂದರೆ ಇದೇ. ಮರಾಠಿ ಮತ್ತು ಗುಜರಾತಿ ಭಾಷೆಯೊಳಗಣ 'ದ್ರಾವಿಡ' ಅಂಶಕ್ಕೆ ಕಾರಣೀಭೂತರಾಗಿರುವವರು ಇವರೇ.

ಪ್ರಾಚೀನತಮ ಉಲ್ಲೇಖಗಳಲ್ಲಿ ರಾಷ್ಟ್ರಿಕರೊಡನೆ ಭೋಜಕರ ಹೆಸರ್ರು ಬಂದೇಬರುವುದುಂಟು. (ಇವಾಗ ಋಗ್ವೇದದೊಳಗಿನ ಯದು–ತುರ್ವಸ್ಯ ಗಳ ಜೋಡಿಯ ನೆನಪಾಗದೆ ಇರದು.) ಅಶೋಕನ ೫ ಮತ್ತು ೧೩ನೆಯ ಶಾಸನಗಳಲ್ಲಿ ಇದನ್ನು ಕಾಣಬಹುದು. ರಾಷ್ಟ್ರಿಕ ಮತ್ತು ಭೋಜಕರ

§ IA. XII, p. 218' EI. V. pp. 192. * EHI. p. 430

† 'ಕುಣಬಿ, ಕುಳುಂಬಿ—ಶೇತಕರಿ' ಎಂದು ಮಹಾರಾಷ್ಟ್ರ ಶಬ್ದಕೋಶ.

ಜೋಡು ಹೆಸರುಗಳ ಮೇಲಿಂದ ಅವೆರಡೂ ಸಮಾಜಗಳು ಕೂಡಿ ಬೆಳೆದುವು, ಹತ್ತಿರ ಹತ್ತಿರಿನವು ಎಂದು ಅರಿತುಕೊಳ್ಳಬಹುದಾಗಿದೆ. ಭೋಜಕರು ವಿದರ್ಭವನ್ನಾಳಿದರೆಂದು ಐತರೇಯ ಬ್ರಾಹ್ಮಣ, ಭಾರತ, ಪುರಾಣಾದಿಗಳಲ್ಲಿ ಸ್ಪಷ್ಟವಾದ ಉಲ್ಲೇಖಗಳಿವೆ.* ಭೋಜಕರು ಯದುವಂಶಕ್ಕೆ ಸಂಬಂಧಪಟ್ಟವರೆಂದು ಪುರಾಣಗಳಿಂದ ತಿಳಿಯುತ್ತದೆ. ಇವರು ವರಾಡದಲ್ಲಿ ಆಳುತ್ತಿದ್ದರು. ಭೋಜರಿಗೆ ಸಮೀಪದಲ್ಲಿಯೆ ರಾಷ್ಟ್ರಿಕರು; ಆದಕಾರಣ ವರಾಡದ ನೆರೆಯ ಲಾಟವು ರಾಷ್ಟ್ರಿಕರ ನಾಡೆಂದು ಇನ್ನೂ ಒಂದು ಬಗೆಯಿಂದ ಕಂಡು ಬಂದಿತು. ಡಾ. ವಿಮಲಚರಣ ಲಾ ಇವರು ಇವರನ್ನು ಕುರಿತು ಬರೆಯುವುದೇನೆಂದರೆ:†

> The Rashtrikas who were almost associated with the Bhojas must have occupied the adjoining tracts, and it may be assumed that they were located in the very region where the present Marathas have their habitat.

ವಾಲ್ಮೀಕಿ ರಾಮಾಯಣದಲ್ಲಿ 'ವಿದರ್ಭಾನ್ ಋಷಿಕಾನ್ ಚೈವ' ಎಂದಿದೆ. ಇಲ್ಲಿ ವಿದರ್ಭರು ಎಂದರೆ ಭೋಜಕರಾಯಿತು. ಋಷಿಕರೆಂದರೆ ರಾಷ್ಟ್ರಿಕರೆಂದು ಹೇಳಬಹುದು. 'ರಿಷ್ಟಿಕ' ಎಂದೂ ಇವರಿಗೆ ಕರೆದುದುಂಟು. ಅಂತು ರಾಮಾಯಣದಲ್ಲಿ ಕರ್ಣಾಟದ ಸ್ಪಷ್ಟವಾದ ಹೆಸರಿಲ್ಲದಿದ್ದರೂ ರಿಷ್ಟಿಕ(ಋಷಿಕ)ರ ರೂಪದಲ್ಲಿ 'ಲಾಟ—ಕರ್ಣಾಟ'ಗಳ ಸಂಯುಕ್ತ ಉಲ್ಲೇಖವು ಬಂದಂತಾಯಿತು.

ಇವರೆಲ್ಲ ಮೂಲದಲ್ಲಿ ಆರ್ಯೇತರ ಜನಾಂಗವೆಂಬುದು ಮಹಾಭಾರತ (೧.೮೫; ೩೫.೩೩) ಮತ್ತು ಮತ್ಸ್ಯಪುರಾಣದ (೩೪.೬೦) ಶ್ಲೋಕಗಳಿಂದ ಚೆನ್ನಾಗಿ ವ್ಯಕ್ತವಾಗುತ್ತಿದೆ. ಇವರಿಗೆಲ್ಲ ಮ್ಲೇಚ್ಛರು, ಹೀನರು ಎಂದು ಹೇಳಿದ್ದಾಗಿದೆ. ದಕ್ಷಿಣದಂತೆ ಗುಜರಾತಿಗೆ ಬರಿ ಹೋಗಿಬಂದರೂ ಬ್ರಾಹ್ಮಣನು ಪ್ರಾಯಶ್ಚಿತ್ತವನ್ನು ತಕ್ಕೊಳ್ಳಬೇಕೆಂದು ವಿಷ್ಣುಪುರಾಣದಲ್ಲಿದೆ. 'ದಾಸಾಃ ಯದು ತುರ್ವಶಶ್ಚ' ಎಂದು ಋಗ್ವೇದ (X. ೬೨.೧೦) ದಲ್ಲಿ ಹೇಳಿರುವು

---

* IC. Jan. '35 & IHT, p. 280 † IC, 1935, pp. 390-1

ದನ್ನು ನೆನೆದರೆ ಯದು–ತುರ್ವಸುಗಳ ಸಂಬಂಧಿಗಳೇ ಆದ ರಾಷ್ಟ್ರಿಕ–ಭೋಜಕರೂ ದಾಸರು ಎಂದರೆ ದ್ರಾವಿಡವರ್ಗದವರೆಂಬುದು ನಿಶ್ಚಿತವಾಗಿ ಗೊತ್ತಾಗುಗುತ್ತದೆ.*

ಧಾರವಾಡ, ಬೆಳಗಾಂವಿ ಜಿಲ್ಲೆಯಲ್ಲಿ 'ಲಾಡ' ಎಂಬ ಅಡ್ಡಹೆಸರಿನವರ್ರು ಉಂಟು. ಲಾಡರು ಲಾಟದೇಶದವರೆಂದು ತಿಳುವಳಿಕೆಯಿದೆ. ಲಾಟ ಎಂಬುದರ ಕೊನೆಯ ಟಕಾರವು ಡ ಕಾರದಿಂದ ಬಂದಿರುವ ಸಂಭವವೆ ಹೆಚ್ಚಾಗಿದೆ. ಏಕೆಂದರೆ ಪ್ರಾಚೀನ ಶಾಸನಗಳಲ್ಲಿ ' ಲಾಳ ' ಎಂಬ ಪ್ರಯೋಗವು ಹಲವೆಡೆಗೆ ಕಾಣಿಸಿ ಕೊಳ್ಳುತ್ತಿದ್ದು ಈ ಳಕಾರವು ಡ ಕಾರದ ಒಂದು ರೂಪವೆಂಬುದು ನಿಶ್ಚಿತವಿದೆ. ' ಜನ್ಮ ' ಎಂಬ ಶಬ್ದವು ಹೆಣ್ಣುಮಕ್ಕಳ ಬಾಯಲ್ಲಿ ಜಲ್ಮ ಎಂಬ ರೂಪವನ್ನು ಹೊಂದುವುದು. ' ನೋಟೀಸು ' ಲೋಟೀಸ ಎಂದು ಉಚ್ಚರಿಸಿದ್ದು ಕೇಳಲು ಸಿಕ್ಕುತ್ತದೆ ಹೀಗೆ ನಕಾರವು ಲಕಾರವಾಗಿ ಪರಿಣಮಿಸುವುದನ್ನು ನೋಡಿದರೆ ಲಾಟ ಎಂಬುದು ಮೊದಲು ' ನಾಟ ' ಎಂಬ ಹೆಸರಿನ ದೇಶವಾಗಿರಬೇಕೆಂದು ತೋರುತ್ತದೆ. ನಾಟ ಎಂಬುದು ನಾಡು ಶಬ್ದದ ಒಂದು ರೂಪವೆಂದು ಪುನ್ನಾಟ, ಕನ್ನಾಟಗಳ ಉದಾಹರಣದಿಂದ ನಿಶ್ಚಿತವಾಗಿದೆ. ಆದುದರಿಂದ ' ಲಾಟ ' ಎಂದರೆ 'ನಾಡು' ಎಂದ ಹಾಗಾಯ್ತು. ನಾಡು, ಬೀಡು, ಪಟ್ಟಿ (ಹಟ್ಟಿ) ಎಂಬುವು ಪ್ರಾದೇಶಿಕ ಶಬ್ದಗಳು. ಲಾಟವೆಂಬುದು ' ನಾಡು ' ಆಯ್ತು. ಇದಕ್ಕೆ ಹೊಂದಿಕೊಂಡಿರುವುದೇ 'ಹಾಟ ( ಕ )' ದೇಶವು. ನಾಸಿಕದ ತ್ರ್ಯಂಬಕೇಶ್ವರನು ಹಾಟಕೇಶ್ವರನೆಂದು ಪ್ರಸಿದ್ಧಿಯಿದೆ.§ ( ಮರ ) ಹಟ್ಟವು ಎಂದರೆ ವರಾಡವು ಇಲ್ಲಿಯೆ. ನಾಡು ಮತ್ತು ಹಟ್ಟಿ ಎಂಬ ಎರಡೂ ಹೆಸರುಗಳು ದ್ರಾವಿಡ ವರ್ಗದುವು. ಆದುದರಿಂದ ಇವೆರಡೂ ಪ್ರದೇಶಗಳ ಮೊದಲಿಗರು ದ್ರಾವಿಡ ಪಂಗಡದವರೇ ಇರಬೇಕೆಂದು ಸಿದ್ಧವಾಗುತ್ತಲಿದೆ.

ಸಂಗೀತದಲ್ಲಿ ಅನೇಕ ರಾಗಗಳಿಗೆ ಒಂದೊಂದು ದೇಶದ ಹೆಸರಿದೆ. ತಿಲಂಗ, ಕನ್ನಡ, ವರಾಳಿ (ವರಾಡ), ಅರಬಿ ಮೊದಲಾದುವು ಇದಕ್ಕೆ

* ಇದರ ಸಂಪೂರ್ಣ ವಿವರಣೆಗಾಗಿ ಕವೀಕ್ಷೆ. ಪುಟ ೩೯–೪೬.

§ ವಾಚಸ್ಪತ್ಯ; ಮತ್ತು ಕವೀಕ್ಷೆ. ಪುಟ ೮೪–೮೬.

ದೃಷ್ಟಾಂತ. ಇದರಂತೆ ' ನಾಟ ' ಎಂಬುದೊಂದು ರಾಗವುಂಟು. ' ಲಾಟ ', 'ರಾಟ' ಅಥವಾ 'ರಾಠ' ಈ ಬಗೆಯ ಹೆಸರು ರಾಗಮಾಲಿಕೆಯಲ್ಲಿ ಎಲ್ಲಿಯೂ ಕೇಳಬರುವುದಿಲ್ಲ. 'ನಾಟ' ಎಂಬ ರಾಗದ ಹೆಸರಿನ ಮೇಲಿಂದ ಅದು ಆವುದೊಂದು ದೇಶದ ಮೇಲಿಂದ ಬಂದ ಹೆಸರಾಗಿರಬೇಕೆಂಬುದರಲ್ಲಿ ಸಂದೇಹವಿಲ್ಲ. ಹಾಗಾದರೆ ಈ ದೇಶವು ಆವುದು? ಲಾಟವೇ ನಾಟವಾಗಿರುವ ಸಂಭವವು ಹೆಚ್ಚಾಗಿದೆ. ನಾಟ ಎಂಬುದು ನಾಡು ಶಬ್ದದಿಂದಾದ ಒಂದು ರೂಪವೆಂಬುದು ಕಂಡಿತ. 'ನಾಡು' (ನಾಟ) ಎಂಬ ಈ ದೇಶದ ಮೂಲನಿವಾಸಿಗಳೇ ನಾಟರು, ನಾಡವರು. ' ನಾಟಃ ಕರ್ಣಾಟ ದೇಶೇ ' ಎಂದು ಶಬ್ದ ರತ್ನಾಕರವು ಹೇಳುತ್ತದೆ.* ನಟರು (ನಾಟರು), ವ್ರಾತ್ಯರು, ಪತಿತರೆಂದು ಸ್ಮೃತಿಗಳಲ್ಲಿ ಹೇಳಿದೆ. ಆದುದರಿಂದಲೆ ನಟರ ನಾಡಿಗೆ—ಲಾಟ, ಸೌರಾಷ್ಟ್ರ ದೇಶಗಳಿಗೆ ಬಂದ ಬ್ರಾಹ್ಮಣನು ಪ್ರಾಯಶ್ಚಿತ್ತವನ್ನು ಪಡೆಯಬೇಕಾಗುತ್ತಿರಬೇಕಲ್ಲವೆ? ನಟ (ನಾಟ) ರೇ ನಾಡವರು—ರಾಷ್ಟ್ರಿಕರು ಎಂಬ ವಿಚಾರವು ಹಿಂದೆ ಬಂದುಹೋಗಿದೆ ( ಪುಟ ೯೭–೯೮ ). ಕನ್ನಡ ನಾಟರು—ಎಂದರೆ ನಾಡವರು (ರಾಷ್ಟ್ರಿಕರು) ಸೌರಾಷ್ಟ್ರದ ವರೆಗೆ ಇದ್ದುದರಿಂದಲೆ ಒಮ್ಮೆ ದ್ವಾರಕೆಯ ವರೆಗಣ ನಾಡು ಕುಂತಲವೆಂದು ಎಣಿಸಲ್ಪಡುತ್ತಿತ್ತು.

ಈ ತೆರನಾಗಿ ನಾಟ (ಲಾಟ)—ಕರ್ಣಾಟಗಳ ಅಖಂಡ ಸಂಬಂಧವುಂಟೆಂಬ ಸಂಗತಿಯು ಬೇರೆಬೇರೆ ದೃಷ್ಟಿಗಳಿಂದ, ಎಂತು ವಿಮರ್ಶಿಸಿದರೂ ದೃಢವಾಗುತ್ತಲೆ ಇದೆ. ಜೈನ ಮತ್ತು ವೀರಶೈವ ಪರಂಪರೆಗಳೂ ರಾಜಕೀಯ ಸಂಬಂಧಗಳೂ ನಾಟ—ಕರ್ಣಾಟಗಳ (ಒಂದು ಕಾಲಕ್ಕಿದ್ದ) ಅಭಿನ್ನ ಸ್ಥಿತಿಯನ್ನೇ ಬೆಳಕಿಗೆ ತರುತ್ತಲಿವೆ. ಮಹಾವೀರನ ಧರ್ಮವು ಲಾಟ-ಕರ್ಣಾಟಗಳಲ್ಲಿಯೇ ಏಕೆ ಇಷ್ಟು ಊರ್ಜಿತ ಸ್ಥಿತಿಗೆ ಬಂದಿರಬೇಕೆಂಬುದೊಂದು ವಿಚಾರಾರ್ಹವಾದ ವಿಷಯ. ಮಹಾವೀರನು ನಾಟ (ನಾಡವ) ರಲ್ಲಿ ಅವತರಿಸಿದ ಒಬ್ಬ ಬಂಟನೋ ತಿಳಿಯದು. ಬೌದ್ಧ ಗ್ರಂಥಗಳಲ್ಲಿ ಮಹಾವೀರನಿಗೆ 'ನಾಟ-ಪುತ್ತ' ಎಂದು ಹೇಳಿದ್ದುದರ ವಿಶೇಷವೇನೊ ಇನ್ನೂ ಬೆಳಕಿಗೆ ಬರಬೇಕಾಗಿದೆ. ಇದನ್ನು ಕುರಿತು, ಡಾಕ್ಟರ ವಿಂಟರನಿಟ್ಸರೂ ಇದನ್ನು ಬಿಡಿಸಿ ಹೇಳಿಲ್ಲ.§

---

* Cf, a name of the Karnat country.—Apte.

§ HIL· Vol. II· p. 424

Budhist texts frequently mention Nigantha Nattaputta.

ಇದರಲ್ಲಿ ನಿಗಂಥ ಎಂದರೆ ಬಂದಮುಕ್ತ ಎಂದರ್ಥವಾಯ್ತು. ಆದರೆ ಮಹಾವೀರನು 'ನಾಟಪುತ್ತ' ನು ಹೇಗೆ ಎಂಬುದು ಗೊತ್ತಾಗುವುದಿಲ್ಲ. ಇರಲಿ ಲಾಟ-ಕರ್ಣಾಟದಲ್ಲಿ ಹಿಂದಕ್ಕೆ ಜೈನಧರ್ಮವು ವಿಶೇಷ ಪ್ರಚಾರದಲ್ಲಿದ್ದಿತು. ಲಾಟ-ಕರ್ಣಾಟಗಳು ನಾಟರ ಆಗರ. ರಾಷ್ಟ್ರಕೂಟ ರಾಜರು, ವಿಶೇಷವಾಗಿ ಗಂಗರು ಜೈನಧರ್ಮಕ್ಕೆ ಬಹಳ ಪ್ರೋತ್ಸಾಹನವನ್ನು ಕೊಟ್ಟರು. ಲಾಟ-ಕರ್ಣಾಟಗಳ ಸಂಬಂಧಗಳು ಈಗ ಕಡಿದುಹೋಗಿದ್ದರೂ ಶ್ರವಣಬೆಳಗೊಳ, ಮೂಡುಬಿದಿರೆ, ಕಾರ್ಕಳ ಮೊದಲಾದ ಸ್ಥಳಗಳು ಗುಜರಾತಿನ ಸಾವಿರಾರು ಜೈನರನ್ನು ಈಗಲೂ ಆಕರ್ಷಿಸುತ್ತಲಿವೆ. ಕನ್ನಡ ವೀರಶೈವರ ಮಹಾಪುರುಷರಲ್ಲಿ ೧೨ನೆಯ ಶತಮಾನದ 'ಉದ್ಭಟದೇವ'ನೆಂಬ ಘೂರ್ಜರಾಧಿಪತಿಯ ಹೆಸರು ಇರಲು ಕಾರಣವೇನು ? ಸೌರಾಷ್ಟ್ರದ ಸೋಮನಾಥನು ದಕ್ಷಿಣಕ್ಕೆ ಬಂದು, ಅದೂ ಕರ್ಣಾಟದಲ್ಲಿಯೇ ಪುಲಿಗೆರೆ, ಸೋಮನಾಥಪುರಗಳಲ್ಲಿ ನೆಲಸಿದನು. ಏಕೆ ?*

ಲಾಟದೇಶದಲ್ಲಿದ್ದ ಪ್ರಾಚೀನ ಬ್ರಾಹ್ಮಣರ ಕೆಲವು ಹೆಸರುಗಳು ನೆನಪು ಇಡುವಂತಿವೆ. ಉದಾಹರಣಾರ್ಥವಾಗಿ 'ರಾಣಪಭಟ್ಟ ಸುತಾಯ ಪ್ರಭಾಕರ ಭಟ್ಟಾಯ'; 'ಶ್ರೀ ವೆನ್ನಪ ಭಟ್ಟ ಸುತಾಯ ಸಿದ್ಧಪ ಭಟ್ಟಾಯ', 'ಮಹಾದೇವಯ್ಯ ಸುತಾಯ ನಾಗಮಾರ್ಯಾಯ'. ಜಯಸಿಂಹನು ತನ್ನ ಅಣ್ಣ ಮೊದಲನೆಯ ವಿಕ್ರಮಾದಿತ್ಯನಿಂದ ಗುಜರಾತ ಪಡೆದನು. ಈತನ (ಜಯಸಿಂಹನ) ೨ನೆಯಮಗನ ಹೆಸರು 'ಮಂಗಲರಸರಾಜ!' ಇನ್ನು ಊರ ಹೆಸರುಗಳು; ಬಾರಡ ಪಲ್ಲಿಕಾ (ಬಾರಡೋಲಿ), ಕುಂಡೀರವಳ್ಳಿಕಾ ಈ ಊರುಗಳ ಹೆಸರಿನ ಕೊನೆಗೆ ಪಲ್ಲಿಕಾ ಎಂದರೆ 'ಪಳ್ಳಿ' (ಹಳ್ಳಿ) ಎಂಬ ಕನ್ನಡ ಮಾತು! ೨ನೆಯ ಧ್ರುವನ ಬಡೋದೆಯ ತಾಮ್ರಪಟದಲ್ಲಿ 'ಪೂಸಿಲಾವಳ್ಳಿ'

† Cf. 'ದಕ್ಷಿಣ ಸೌರಾಷ್ಟ್ರವೆನಿಪ ಶ್ರೀಮತ್ ಸ್ವಯಂಭೂ ಸೋಮನಾಥದೇವರು; ಹೊಯ್ಸಳ ಕಾಲದ (೧೨೧೮) ಶಾಸನ. ಕುಂದವಾಡಿನ ಸೋಮನಾಥನೀತ !

....EC. XI, Dg. 105

(ತ)ಸಿಲಾವಳ್ಳಿ, ವಿನ್‌ಹುಚವಳ್ಳಿ ಎಂಬೀ ಬಗೆಯ ಹೆಸರಿನ ಹಳ್ಳಿಗಳಿವೆ! ಶಾಸನದ ಕೊನೆಗೆ ಧ್ರುವರಾಜನ ಒಪ್ಪ ( ಸಹಿ ) ಕನ್ನಡದಲ್ಲಿ !

ಇಂತಿದು, ಲಾಟದೇಶದಲ್ಲಿ ಸಂಪೂರ್ಣವಾಗಿ ಕನ್ನಡ ವಾತಾವರಣವು ಸುಮಾರು ಹನ್ನೆರಡನೆಯ ಶತಮಾನದ ವರೆಗೂ ಇದ್ದುದು ಅನುಭವಕ್ಕೆ ಬರುತ್ತದೆ.

ರಾಷ್ಟ್ರಿಕ-ಭೋಜಕರು ಒಂದು ಜನಾಂಗವಂತೆ ನಡೆದವರು; ನಾಟ-ಹಾಟಗಳಲ್ಲಿ ಕೂಡಿ ಬೆಳೆದವರು. ಆದುದರಿಂದ ನಾಗಪೂರ ವಱ್ಹಾಟಗಳಲ್ಲಿ ಪ್ರಾಚೀನಕಾಲದಲ್ಲಿ ರಾಷ್ಟ್ರಿಕರು-ರಾಷ್ಟ್ರಕೂಟರು ಆಳಿದರೆಂದು ಶಾಸನಗಳಿಂದ ಕಂಡುಬಂದರೆ ಆಶ್ಚರ್ಯಪಡುವ ಕಾರಣವಿಲ್ಲ. ಕರ್ಣಾಟದ ಉತ್ತರದ ಮೇರೆಯು ದಕ್ಷಿಣಕ್ಕೆ ಸರಿದಂತೆ ಉತ್ತರದ ಕನ್ನಡಿಗರೂ ದಕ್ಷಿಣಕ್ಕೆ ಬಂದುದು ಅನುಭವಕ್ಕೆ ಬಾರದೆ ಇರದು. ಆದರೆ ಈ ವಿಷಯದಲ್ಲಿ, ಕನ್ನಡಿಗರ ಈ ಚಲನವಲನಗಳ ಸರಿಯಾದ ಕಲ್ಪನೆಯು ಇಲ್ಲದ ಡಾ. ಆಳತೇಕರರು ಸ್ವಲ್ಪ ದಿಗಿಲುಗೊಂಡಿದ್ದಾರೆ ' ಮಳಖೇಡಿನ ರಾಷ್ಟ್ರಕೂಟರ ಪೂರ್ವಜರು ವಱ್ಹಾಟದಲ್ಲಿ ಆಳಿದರೆಂದು ಶಾಸನಗಳು ಹೇಳುತ್ತವೆ. ಒಂದು ಕಾಲದಲ್ಲಿ ವಱ್ಹಾಟವೇ ರಾಷ್ಟ್ರಕೂಟರ ತವರ್ಮನೆಯಿದ್ದಂತೆ ಕಂಡುಬರುತ್ತದೆ. ರಾಷ್ಟ್ರಕೂಟರಂತು ಕನ್ನಡಿಗರು. ಆದರೆ ವಱ್ಹಾಟದಲ್ಲಿ ಕನ್ನಡಿಗರು ಎಲ್ಲಿಂದ ಬರಬೇಕು ?' ಎಂಬೀ ಬಗೆಯ ಸಂದೇಹಕ್ಕೆ ಒಳಗಾಗಿ ಡಾ. ಆಳತೇಕರರು ಪೇಚಾಡುತ್ತಿರುವುದು ಗೋಚರವಾಗುತ್ತಿದೆ. *

> We have shown already how the main line, thaf was later established at Malkhed has to be connected with the Rashtrakuta family ruling at Elichpur (Berar)............ If the home of the Malkhed Rashtrakutas were in Maharashtra it is difficult to explain how they could be using the script of Karnatak as their mother script........but if the family had origi-

* RK, p. 21.

> nally belonged to Maharashtra, its members deputed to rule over southern Gujarat (ಲಾಟ) could not be seen using for their sign-manual a script that was current neither in S. Gujarat nor in Maharashtra but in Karnatak.
>
> If we assume with Fleet and Vaidya that the hame of the Malkhed Rashtrakutas was either in Maharashtra or somewhere in central India, we cannot explain how they were using the Canarese script.

ಡಾ. ಆಳತೇಕರು ಈ ತೊಡಕಿನೊಳಗಿಂದ ಪಾರಾಗಲು ಒಂದು ಯುಕ್ತಿಯನ್ನು ಹೇಳುತ್ತಾರೆ. ಕರ್ಣಾಟದ ರಾಷ್ಟ್ರಕೂಟರು ವರ್‍ಹಾಡಕ್ಕೆ ಬಂದು ಆಳಿ ಅಲ್ಲಿ ತಮ್ಮ ಒಂದು ಶಾಖೆಯನ್ನು ಸ್ಥಾಪಿಸಿರಬೇಕು. ಎಂಬುದೇ ಡಾ. ಆಳತೇಕರರು ಮೇಲಣ ಶಂಕೆಗೆ ಹೇಳುವ ಸಮಾಧಾನ.

> This family may have later migrated to Elichpur or some other place near by in Berar ........and the immigration is quite possible.

ಆದರೆ ಡಾ. ಆಳತೇಕರರು ಹೇಳಿದ ಈ ಸಮಾಧಾನವು ಬಹಳ ಅಸಮಾಧಾನಕರವಾಗಿದೆ. ಡಾ. ಗ್ರಿಯರಸನ್ನರ ಅನುಭವವು ತೀರ ಭಿನ್ನವಾಗಿದೆ. ರಾಷ್ಟ್ರಕೂಟರು ಕನ್ನಡಿಗರು ( ದ್ರಾವಿಡ ಪಂಗಡದವರು ) ಎಂಬ ಬಗ್ಗೆ ಡಾಕ್ಟರ ಆಳತೇಕರರಿಗೆ ಸಂದೇಹವೆ ಇಲ್ಲವೆಂಬುದು ಅವರ ಗ್ರಂಥದಿಂದಲೆ ಗೊತ್ತಾಗುತ್ತದೆ. ಕನ್ನಡಿಗರು (ಡಾ. ಗ್ರೀಯರಸನ್ನರು ಹೇಳುವಂತೆ ದ್ರಾವಿಡರು ) ಐತಿಹಾಸಿಕ ಕಾಲದಲ್ಲಿ ಉತ್ತರದ ನಾಡುಗಳಿಗೆ ಹೋಗಿ ಅಲ್ಲಿ ಒಕ್ಕಲಾಗಿ ತಮ್ಮ-ತನವನ್ನು ಕಾಯ್ದು ಕೊಂಡುದು ಕಂಡುಬರುವುದೇ ಇಲ್ಲ. ಉತ್ತರಕ್ಕೆ ಹೋದ ಕನ್ನಡಿಗರು ಅಲ್ಲಿಯ ಜನಾಂಗಗಳಲ್ಲಿ ಒಂದಾಗೂಡಿ ಅಲ್ಲಿಯ ಭಾಷೆಗಳನ್ನೇ ಸ್ವೀಕರಿಸಿದ್ದುದು ಐತಿಹಾಸಿಕ ಆಧಾರಗಳಿಂದ ಸಿದ್ಧವಾದ ಸಂಗತಿಯು. ಈಗಲೂ ಇದೇ ಸ್ಥಿತಿಯಿದೆ. ಮಹಾರಾಷ್ಟ್ರ, ಗುಜರಾತಗಳ ಕಡೆಗೆ ಹೋದ ಕನ್ನಡಿಗರು ಕನ್ನಡವನ್ನು ಮರೆತುಬಿಡುವುದರ

ಲ್ಲಿಯೇ ಇಂದು ಹೆಮ್ಮೆ ಬಡುತ್ತಾರೆ. ಬಂಗಾಳದಲ್ಲಿ ಆಳಿದ ಸೇನರಾಜರು ತಾವು 'ಕರ್ಣಾಟ ಕ್ಷತ್ರಿಯ'ರೆಂದು ನೆನಪಿಟ್ಟು ಕೊಂಡುದು, ನಿಜ; ಆದರೆ ಕನ್ನಡವನ್ನು ನೆನಪಿಟ್ಟಂತೆ ಇಲ್ಲ. ಲಕ್ಷ್ಮಣಸೇನನು ತನಗೆ 'ರಾಯೇ' ಲಕ್ಷ್ಮಣಸೇನನೆಂದುಕೊಂಡಿದ್ದಾನೆ.* 'ರಾಯೇ' ( ರಾಜೇ ) ಎಂದು ಬರೆವುದು ಮಹಾರಾಷ್ಟ್ರ ಪದ್ಧತಿ. ಡಾ. ಗ್ರಿಯರಸನ್ನರು Linguistic Surwey of India ಎಂಬ ಗ್ರಂಥದ ಮುನ್ನುಡಿಯಲ್ಲಿ ಹೇಳಿರುವಂತೆ ಉತ್ತರದಲ್ಲಿ ಎಲ್ಲಿಯಾದರೂ ಕನ್ನಡ ಮೊದಲಾದ ದ್ರಾವಿಡ ವರ್ಗದ ಭಾಷೆಯನ್ನಾಡುವವರ ಪಂಗಡಗಳು ಇದ್ದರೆ, ಅವರು ದಕ್ಷಿಣದಿಂದ ಅಲ್ಲಿ ಒಕ್ಕಲಾಗಲು ಬಂದವರೆಂದು ಭಾವಿಸುವುದಕ್ಕಿಂತಲೂ, ಪೂರ್ವಕಾಲದಲ್ಲಿ ಆ ಭಾಗದಲ್ಲಿದ್ದ ದ್ರಾವಿಡ ವರ್ಗದ ಅವಶೇಷಗಳೆಂದು ಗ್ರಹಿಸುವುದೇ ಲೇಸು. ಬ್ರಾಹುಯಿ ಭಾಷೆಯ ಉದಾಹರಣವು ಸಾಕು.

ಆದುದರಿಂದ ಡಾ. ಅಳತೇಕರರು ಹೇಳುವಂತೆ ರಾಷ್ಟ್ರಕೂಟರು ಕರ್ನಾಟಕಕ್ಕೆ ಹೊರಗಿನವರಲ್ಲ. ಲಾಟ-ಕರ್ನಾಟದಿಂದ ನೀಲಗಿರಿಯ ವರೆಗಣ ನಾಡಿನಲ್ಲಿ ಹಬ್ಬಿಕೊಂಡ ಈ ನಾಡವರೆ ರಾಷ್ಟ್ರಿಕರು—ರಾಷ್ಟ್ರಕೂಟರು. ಆರ್ಯರ ವರ್ಚಸ್ಸಿನಲ್ಲಿ ಸಿಕ್ಕ ಲಾಟ-ಕರ್ನಾಟಗಳಲ್ಲಿ ಕನ್ನಡವು ಈಗ ಹೇಳಲು ಹೆಸರಿಲ್ಲದಂತಾಗಿದ್ದರೂ ಒಂದು ಕಾಲಕ್ಕೆ ಅದು ಕನ್ನಡರ ನೆಲೆವೀಡಾಗಿದ್ದಿತು ಎಂಬುದು ಸುಳ್ಳಲ್ಲ. ಡಾ. ಅಳತೇಕರರಿಗೆ ಈ ನಿಜಸ್ಥಿತಿಯ ಕಲ್ಪನೆಯಿಲ್ಲದುದರಿಂದ ಇವರು 'ಕನ್ನಡ ಮನೆಮಾತಾಗಿರುವ ರಾಷ್ಟ್ರಕೂಟರು ಕರ್ನಾಟದಲ್ಲಿ ಹೇಗೆ?' ಎಂದು ಗೊಂದಲದಲ್ಲಿ ಬಿದ್ದಿರುವರು!

ಲಾಟ ದೇಶದಲ್ಲಿದ್ದ ರಾಷ್ಟ್ರಕೂಟರೂ ( ಚಲುಕ್ಯರೂ ) ಹೊರನಾಡಿಗೆ (ಹೊರನಾಡಿನಿಂದ) ಬಂದು ನೆಲಸಿದವರಲ್ಲ. ಲಾಟ-ಕರ್ನಾಟಗಳು ಈ ಜನಗಳ ಬೀಡು. ಈ ವಿಷಯದಲ್ಲಿ ಡಾ. ಫ್ಲೀಟರ ಅಭಿಪ್ರಾಯವೇ ಸರಿ. ದಕ್ಷಿಣದಿಂದ ಉತ್ತರದಲ್ಲಿ ಬಂದು ನಿಂತು ತಮ್ಮ ಭಾಷೆ, ಲಿಪಿ, ಸಂಸ್ಕೃತಿಗಳ ಬಗ್ಗೆ ಹಟತೊಟ್ಟು ಅದಕ್ಕೇ ಅಂಟಿಕೊಂಡು ಅದನ್ನೇ ಬಳಕೆಯಲ್ಲಿ ತಂದ ಕನ್ನಡಿಗರ ಒಂದು ಉದಾಹರಣವೂ ಹಳೆಯ ಇತಿಹಾಸದಲ್ಲಿ ದೊರೆಯುವುದು ಅಸಾಧ್ಯವು

* EHI, p. 430.

ಬೇರೆ ಬೇರೆ ದೃಷ್ಟಿಯಿಂದ ಮೇಲೆ ಸಿದ್ಧಪಡಿಸಿರುವಂತೆ ಲಾಟ-ವರಾಟಗಳು ಮೂಲಕನ್ನಡಿಗರಿಗೆ ಸಂಬಂಧಪಟ್ಟವುಗಳಿದ್ದುದರಿಂದಲೆ ಅಲ್ಲಿಯ ರಾಷ್ಟ್ರ ಕೂಟಾದಿಗಳು ಅಲ್ಪಸ್ವಲ್ಪಾದರೂ ಕನ್ನಡಕ್ಕೆ ಸಂಬಂಧಪಟ್ಟವರಂತೆ ನಡೆದು ಕೊಂಡಿದ್ದಾರೆಂದು ಭಾವಿಸುವುದೇ ಹೆಚ್ಚು ಯುಕ್ತಿಯುಕ್ತವಾಗಿದೆ. ಏಕೆಂದರೆ ಹೊರಗಿನಿಂದ ಹೋಗಿ ನೆಲಸಿ ತನ್ನ ಕನ್ನಡವನ್ನು ಪ್ರಯತ್ನಪೂರ್ವಕವಾಗಿ ಕಾಯ್ದುಕೊಂಡ-ಒಂದೂ ಉದಾಹರಣವಿಲ್ಲ. ಬಂಗಾಳಕ್ಕೆ ಗುಜರಾತಿನಿಂದ ಅನೇಕ (ನಾಗರ) ಬ್ರಾಹ್ಮಣರು ಹೋಗಿ ನೆಲಸಿದರೆಂದು ಡಾ. ದೇವದತ್ತ ಭಂಡಾರಕರರು ವಿಶದಪಡಿಸಿದ್ದಾರೆ. ಇವರೆಲ್ಲ ಲಾಟದಿಂದ ಹೋದವರು. ಬಂಗಾಳದಲ್ಲಿಯೂ 'ಲಾಟ', 'ರಾಡ' ಎಂಬ ಹೆಸರು ತಲೆದೋರಲು ಇವರೇ ಕಾರಣರೊ ತಿಳಿಯದು.

> It is difficult to avoid the conclusion that the Nagar ( Lat ) Brahmins were settled in Bengal and Orissa. In fact these Brahmins were not the only caste from Lat that were settled in Bengal about that time (900 A. D.)

ಶ್ರೀ. ಜೋಗೇಂದ್ರಚಂದ್ರ ಘೋಷರ ಅಭಿಪ್ರಾಯದಂತೆ ಬಂಗಾಳದಲ್ಲಿ ೧೧ನೆಯ ಶತಕದಲ್ಲಿ ಕನ್ನಡಿಗರ ಕೊರತೆ ಇದ್ದಿಲ್ಲ. There was no dearth of them. ಬಂಗಾಳದಲ್ಲಿ ಕರ್ಣಾಟ ಕ್ಷತ್ರಿಯರಂತೆ ಕನ್ನಡ ಬ್ರಾಹ್ಮಣರೂ ಇದ್ದರೆಂದು ಬರೆದಿದ್ದಾರೆ.*

ಪಾಲರೆಂಬ ರಾಜರು ಬಂಗಾಳಿನಲ್ಲಿ ಆಳಿದರು. ಈ ರಾಜರಲ್ಲಿ ಧರ್ಮ ಪಾಲನನ್ನು ಬಿಟ್ಟರೆ ಉಳಿದ ಪ್ರತಿಯೊಬ್ಬ ರಾಜನ ಕಾಲದಲ್ಲಿಯೂ 'ಲಾಟ-ಕರ್ಣಾಟ' ದಿಂದ ಜನಗಳು ಬಂದು ಬಂಗಾಳಿನಲ್ಲಿ ನೆಲಸಿದ ಉಲ್ಲೇಖಗಳಿವೆ.§ ಆದರೆ ಇವರಲ್ಲಿ ಯಾರೂ ಕನ್ನಡಲಿಪಿಯನ್ನು ಇಟ್ಟುಕೊಂಡಿಲ್ಲ.

ಬಂಗಾಳದಲ್ಲಿ ಸೇನರೆಂಬ ಕರ್ಣಾಟ ಕ್ಷತ್ರಿಯರು ಆಳಿದಂತೆ ಮಿಥಿಲೆಯೊಲ್ಲಿ ನಾನ್ಯದೇವನೆಂಬ ರಾಜನು ಕರ್ಣಾದವನು ಆಳಿದನು. ಈತನು ತಾನು ಕರ್ಣಾಟಕುಲಭೂಷಣನೆಂದುಕೊಂಡಿದ್ದಾನೆ. ಒಂದು ಶಾಖೆ ನೇಪಾಳಿ

---

*IC. 1935;pp . —354356 § IA. I932, p, 47.

ನಲ್ಲಿಯೂ ಆಳಿತು. ಬಾದಾಮಿ ಎನೆಯ ಪುಲಿಕೇಶಿಯ ತಮ್ಮನಾದ ವಿಷ್ಣು ವರ್ಧನನು ಚೊಕ್ಕ ಕನ್ನಡಪಲ್ಲಿ ಹುಟ್ಟಿ ಬೆಳೆದವನು. ರಾಜಮಹೇಂದ್ರ (ಆಂಧ್ರ) ದಲ್ಲಿ ಹೋಗಿ ಅಣ್ಣನ ಪುಣ್ಯದಿಂದ ಅರಸನಾದನು. ಈ ಚಲುಕ್ಯ ಮನೆತನವೆ ತೆಲಗು ಸಾಹಿತ್ಯಕ್ಕೆ ಉತ್ತೇಜನಕೊಟ್ಟಿತು. ಚಲುಕ್ಯರ ಇನ್ನೊಂದು ಶಾಖೆ ಗುಜರಾತಿನಲ್ಲಿ (ಲಾಟ) ಆಳಿತು. ಗುಜರಾತಿ ಭಾಷೆಗೆ ಪೋಷಿಸಿದವರೇ ಇವರು! ಕರ್ಣಾಟದಿಂದ ಕನ್ನಡ ಸಾಹಿತಿಗಳನ್ನು ಒಯ್ದು ಪೋಷಿಸಿದವ ರಾರೂ ಇಲ್ಲ. ಆದರೆ ಇವರಲ್ಲಿ ಯಾರೂ ಕನ್ನಡಭಾಷೆ, ಲಿಪಿಗಳನ್ನು ಅಲ್ಲಿ ಜೀವಂತವಾಗಿ ಇರಿಸಲಿಕ್ಕೆ ಹವಣಿಸಿದ್ದದೂ ಕಂಡುಬರುವುದಿಲ್ಲ. ಬಂಗಾಳಿ ನಲ್ಲಿ ೧೧ನೆಯ ಶತಮಾನದ ಸುಮಾರಿಗೆ ತುಂಬ ಜನಗಳು ಕರ್ಣಾಟದಿಂದ ಹೋಗಿ ಬೇರೂರಿ ಇದ್ದುದು ನಿಶ್ಚಿತವಾಗಿ ಗೊತ್ತಾಗುತ್ತದೆ. ಒಬ್ಬ ಬಂಗಾಳಿ ಸಂಶೋಧಕರೇ ಬರೆಯುವುದೇನೆಂಬದೆ: *

> The Karnatakas had gained a prominent footing in the easfern part of northern India towards the close of the eleventh centary·

ಒಳ್ಳೆ ಪ್ರತಿಷ್ಠಿತ ಸ್ಥಾನವು ಸಿಕ್ಕಿದ್ದರೂ ಬಂಗಾಳ, ಮಿಥಿಲಾ, ನೇಪಾಳ ಮೊದಲಾದ ಯಾವಲ್ಲಿಯೂ ತಮ್ಮ ಲಿಪಿ, ಅಥವಾ ತಮ್ಮ ಭಾಷೆಯ ನೆನಪಿಡದ ಕನ್ನಡಿಗರು ಲಾಟದಲ್ಲಿ ಮಾತ್ರ ಮರೆಯಲಿಲ್ಲವೆಂದರೆ ಸರಿಕಾಣುವುದೆ? ಆದುದರಿಂದ ಇಲ್ಲಿ ಡಾ. ಗ್ರಿಯರಸನ್ನರು ಹಲವು ವರುಷಗಳ ಸೂಕ್ಷ್ಮವಾದ ನಿರೀಕ್ಷಣ, ತುಲನಾತ್ಮಕ ವಿಚಾರ ವಿಮರ್ಶೆಗಳ ತರುವಾಯದಲ್ಲಿ ಕಂಡು ಹಿಡಿದ ಸಾಮಾನ್ಯ ನಿಯಮವೆ ಸರಿಯೆಂದು ಹೇಳಬೇಕಾಗುತ್ತದೆ. ದಕ್ಷಿಣ ದಿಂದ ಉತ್ತರಕ್ಕೆ ಹೋಗಿ ನೆಲಸಿದ ದ್ರಾವಿಡವರ್ಗದ ಜನಗಳು ತಮ್ಮ ಭಾಷೆಗೆ ಅಂಟಿಕೊಂಡು ನಿಲ್ಲುವುದಿಲ್ಲ. ಹಾಗೆ ಅಂಟಿದ್ದುದು ಕಂಡರೆ ಅದು ಅವರ ನಾಡಾಗಿದೆಯೆಂದು ಊಹಿಸಲು ಅಡ್ಡಿಯಿಲ್ಲ. ಈ ಮೊದಲು ಹೇಳಿದ ಕಾರಣ ಗಳಿಗಲ್ಲದೆ ಈ ಕಾರಣದಿಂದಲೂ ಲಾಟವು ಕನ್ನಡ ನಾಟರ—ನಾಡವರ ಸೀಮೆ ಎಂದು ಕಂಡುಬರುತ್ತಿದೆ.

* IHQ. Dec. '31, p. 682

ಡಾ. ಅಳತೇಕರರು ಬಡೋಜೆ, ಗಾಲ್ವೇರಗಳ ಸಂಸ್ಥಾನಿಕರ ಹೋಲಿಕೆ ಯನ್ನು ಹೇಳಿ, ಇವರು ಹೇಗೆ ಮಹಾರಾಷ್ಟ್ರದಿಂದ ಹೊರಗೆ ಗುಜರಾತ, ಹಿಂದೀ ಪ್ರದೇಶಗಳಲ್ಲಿದ್ದರೂ ಮರಾಠಿಗೆ ಅಂಟಿಕೊಂಡಿರುವರೊ ಹಾಗೆಯೆ ರಾಷ್ಟ್ರಕೂಟರೂ ಲಾಟದಲ್ಲಿ ಕನ್ನಡ ಲಿಪಿಗೆ ಪ್ರಾಶಸ್ತ್ಯವನ್ನು ಕೊಟ್ಟಿರ ಬೇಕೆಂದು ತರ್ಕಿಸಲು ಹವಣಿಸಿದ್ದಾರೆ. ಆದರೆ ಡಾ. ಅಳತೇಕರರಿಗೆ ಆರ್ಯ ಭಾಷಾವರ್ಗ ಮತ್ತು ದ್ರಾವಿಡಭಾಷಾವರ್ಗದ ಪ್ರಸರಣ—ಆಕುಂಚನಗಳ ಗುಟ್ಟು ಗೊತ್ತಿಲ್ಲದೆ ಇರುವುದರಿಂದ ಅವರು ಈ ಬಗೆಯ ತಪ್ಪುತರ್ಕಸರಣಿಯ ಜೈಯಲ್ಲಿ ಸಿಕ್ಕುಬಿದ್ದಿರುವರು. ಮರಾಠನು ಹಿಂದೂದೇಶದ ಯಾವ ಮೂಲೆ ಯಲ್ಲಿಯೆ ಇರಲಿ, ತನ್ನ ನುಡಿಯನ್ನು ಬಿಡಲಾರ. ಗುಜರಾತಿ, ಹಿಂದಿಯ ಸ್ಥಿತಿಯೂ ಹೀಗೆಯೆ ಇದೆ. ನಮ್ಮಲ್ಲಿ ಪ್ರಾಂತಾಭಿಮಾನವು ಮಿತಿಮೀರಿದೆ ಎನ್ನುವ ಈ ಕಾಲಟಲ್ಲಿಯೂ ಹಿಂದೀಭಾಷೆಗೆ ಇರುವ ಮರ್ಯಾದೆ, ಮಹ ತ್ತ್ವವು ಕನ್ನಡಕ್ಕಿಲ್ಲ ! ನೃಪತುಂಗನು ಹೇಳುವ ' ಗೋದಾವರಿಯ ವರಂ ' ಇದ್ದ ಕನ್ನಡವು ಕುಗ್ಗಿ ಕಿರಿದಾಗಲು ಕಾರಣವೇನು ? ನಿಜಸ್ಥಿತಿಯು ಹೀಗಿರು ವಾಗ ಲಾಟದಲ್ಲಿ ರಾಷ್ಟ್ರಕೂಟರು ಅಭಿಮಾನದಿಂದ ಕನ್ನಡ ( ಲಿಪಿ ) ಉಳಿ ಸಿದ್ದರೆಂದು ತರ್ಕಿಸುವುದು ಸ್ವಲ್ಪ ವಿಚಿತ್ರವೇ ಸರಿ. ತಿರುಳ್ಗನ್ನಡ ಸೀಮೆಯ ಲ್ಲಿಯೇ ಯಾವ ಕನ್ನಡಿಗರಿಗೆ ತಮ್ಮ ಕನ್ನಡತನದ ಅರಿವು ಇದ್ದಿಲ್ಲವೊ ( ಇದ ಕ್ಕಾಗಿ ೨ನೆಯ ಪ್ರಕರಣ ನೋಡಿ ) ಅವರು ಲಾಟದಲ್ಲಿ ಕನ್ನಡ ( ಲಿಪಿ ) ಉಳಿ ಸಿದರೆಂದರೆ ಅಷ್ಟು ಸರಿದೋರುವುದಿಲ್ಲ. ಉತ್ತರದಲ್ಲಿ ಎಲ್ಲಿಯಾದರೂ ಕನ್ನ ಡವು ಉಳಿದಿದ್ದರೆ ಅದು ತನ್ನ ತಾನೆ, ಸ್ವಾಭಾವಿಕವಾಗಿ, ಅಬುದ್ಧಿಪುರಸ್ಸರ ವಾಗಿ ಉಳಿದಿದೆಯೆ ಹೊರತು ಪ್ರಯತ್ನದಿಂದಲ್ಲ.

ಆದುದರಿಂದ ಲಾಟ–ವರಾಟಗಳಲ್ಲಿ ಕನ್ನಡವೇ ಮನೆಮಾತಾಗಿರುವ ರಾಷ್ಟ್ರಿಕರು–ರಾಷ್ಟ್ರಕೂಟರು ಹೇಗೆ ಬಂದರೆಂದು ಸಂದೇಹದಲ್ಲಿ ಬೀಳುವ ಕಾರಣವಿಲ್ಲ. ಫ್ಲೀಟರು ಕಂಡುಹಿಡಿದಿರುವಂತೆ ಆ ನಾಡು ಈ ಜನಾಂಗದ ಮೂಲಸ್ಥಾನವೇ ಸರಿ. ವರ್ಹಾಟದಲ್ಲಿಯೂ ಅದರ ಸುತ್ತಣ ಸೀಮೆ ಯಲ್ಲಿಯೂ ಕಾಣುವ ಅನೇಕಾನೇಕ ಅವಶೇಷಗಳನ್ನು ವಿಚಾರಿಸಿದರೆ ಮೇಲಣ ನಿರ್ಣಯವು ಅನಿವಾರ್ಯವೆಂದು ಮನವರಿಕೆಯಾಗದೆ ಇರ ಲಾರದು.

'.... instead of the name Scytho-Dravidian given by Risley we may call the Marathi type Irano-Dravidian '

ಎಂದು ಶ್ರೀಯುತ ಎಸ್. ಕೆ. ದತ್ತರ ಅಭಿಪ್ರಾಯ.* ನಾಮದಾರ ಭಾಸ್ಕರರಾವ ಜಾಧವರಾಯರ ಮತದಂತೆ ಮರಾಠರು ಆರ್ಯ-ದ್ರಾವಿಡರು. ಶ್ರೀ. ದತ್ತರು ಇರಾಣರೆಂದು ಹೇಳುವ ಜನಗಳು ಆರ್ಯವರ್ಗಕ್ಕೆ ಸೇರಿದವರೇ. ಆದುದರಿಂದ ಶ್ರೀ. ದತ್ತ ಹಾಗೂ ಜಾಧವರಲ್ಲಿ ಭಿನ್ನಾಭಿಪ್ರಾಯಗಳಿಲ್ಲ. ಇನ್ನು ವಿಚಾರಿಸತಕ್ಕ ಒಂದು ಮುಖ್ಯಾಂಶವೆಂದರೆ: ಶ್ರೀ. ದತ್ತ ಮತ್ತು ಜಾಧವರು ಆರಿಯರಲ್ಲಿ ಸೇರಿಕೊಂಡಿರುವರೆಂದು ಹೇಳುವ ' ದ್ರಾವಿಡ 'ರು ಯಾರು ? ಇವರು ಕನ್ನಡಿಗರೇ ಎಂದು ಹಿಂದೆ ಹೇಳಿದೆ‡ ( ಪುಟ ೪೨ ). ಆದರೆ ಕನ್ನಡಿಗರಲ್ಲಿಯ ಯಾವ ಮುಖ್ಯಸಂಗಡವು ಮರಾಠ ಮತ್ತು ಗುಜರಾತಗಳಲ್ಲಿ ಅರಗಿ ಕರಗಿ ಹೋಯಿತೆಂಬ ಸಮಸ್ಯೆಯೂ ರಾಷ್ಟ್ರಿಕರಿಂದ ( ಎಂದರೆ ಕುಡುವ-ಕುಣಬಿ ಕಣಬಿಗಳಿಂದ ) ಬಗೆಹರಿದಂತಾಯ್ತು.

ವರ್ಹಾಟದಲ್ಲಿ ದೇಶಮುಖರು, ಪಾಟೀಲ ( ಗೌಡ )ರು ಪ್ರಮುಖರಾಗಿ ಇದ್ದಾರೆಂದು ಬೇರೆ ಹೇಳುವ ಕಾರಣವಿಲ್ಲ. ದೇಶಮುಖರು ಕುಣಬಿಗಳೆಂದು ರಸೆಲ್ಲರು ಬರೆಯುತ್ತಾರೆ.§ ಕುಣಬಿಯೇ ಕುಡುವೊಕ್ಕಲಿಗನು; ಎಂದರೆ ಕುಟುಂಬಿ; ರಾಷ್ಟ್ರಕೂಟರೆಂದರೆ ಕುಟುಂಬಿಗಳೆಂಬ ಮಾತನ್ನು ರಾ. ಬ. ಹೊಸಕೋಟಿ ಕೃಷ್ಣರಾಯರು ಸ್ಪಷ್ಟಪಡಿಸಿದ್ದಾರೆ. ಆದುದರಿಂದ ದೇಶಮುಖರೂ ಪಾಟೀಲರೂ ಕುಣಬಿಗಳಾಗಿರುವ ವರ್ಹಾಟವು ರಾಷ್ಟ್ರಿಕರ-ರಾಷ್ಟ್ರಕೂಟರ ನೆಲೆವೀಡಾಗಿದ್ದಿತೆಂಬುದು ಸ್ಪಷ್ಟವಿದೆ.

ವರ್ಹಾಟ ನಾಗಪೂರ ಕಡೆಯ ಆರಿಯ ಹೆಣ್ಣುಮಕ್ಕಳು 'ವಿಾ ಜಾತೋ' ಎನ್ನುವುದುಂಟು. ಕಾರಣವೇನು ? ಎಂದು ಶ್ರೀ. ವಾಮನರಾವ ದೇಶಪಾಂಡೆ

---

* AI, p. 37

‡ ಕವೀಕ್ಷ. ದಲ್ಲಿ ಕಳವರೂ-ಮರವರೂ ಒಂದು ಎಂಬ ದೃಷ್ಟಿಯಿಂದ- ಕರ್ಹಾಟ, ವರ್ಹಾಟಗಳ ಅಭಿನ್ನತೆಯನ್ನು ತೋರಿಸಿದ್ದಾಗಿದೆ. ಪುಟ ೮೭.

§ CIC, I, p. 358; Cf. 'ಕುಣಬಿ ವ್ಯಕ್ತೀಸ ಆದರಾನೇ ಸನ್ಮಾನಾನೆ ಸಂಬೋಧಣ್ಯಾಚೀ ಸಂಜ್ಞಾ, ' ಪಾಟೀಲ '—ಮಶಕೋ.

ಎಂಬ ಒಬ್ಬ ಮರಾಠಿ ಗೃಹಸ್ಥರು ತಮ್ಮ ಒಂದು ಕೊರೆಯನ್ನು ಕೇಳಿದ್ದರು.† ಇದು ಸಂಸ್ಕೃತದ ಪರಿಣಾಮ; ಸಂಸ್ಕೃತದಲ್ಲಿ 'ಅಹಂ ಗಚ್ಛಾಮಿ' ಎಂದು ಹೇಳುವರು. ಆರಿಯರ ಹೆಣ್ಣುಮಕ್ಕಳು 'ಮಿಾ ಜಾತೋ' ಎನ್ನುವರು, ಎಂದು ಆ ಕೊರೆಗೆ ಇನ್ನೊಬ್ಬರ ಉತ್ತರವು ಪ್ರಕಟವಾಯ್ತು. ಆದರೆ ಇನ್ನು ಕೆಲರಿಗೆ ಈ ಉತ್ತರದಿಂದ ಸಮಾಧಾನವಾಗದೆ ಮತ್ತೆ ಪ್ರಶ್ನೋತ್ತರಗಳಿಗೆ ಆರಂಭವಾಯ್ತು. 'ಮಿಾ ಜಾತೋ' ಎಂಬುದು ಸಂಸ್ಕೃತದಿಂದ ಆರಿಯ ಮಾತಿನಲ್ಲಿ ಬಂದ ರೂಢಿಯೆ ಆಗಿದ್ದರೆ, ಇದು ಮಹಾರಾಷ್ಟ್ರಬ್ರಾಹ್ಮಣ ಸ್ತ್ರೀಯರಲ್ಲಿ ಮುಖ್ಯವಾಗಿ ಇರಬೇಕಾಗಿತ್ತು. ಸಂಸ್ಕೃತದ ಪರಂಪರೆಯು ಬ್ರಾಹ್ಮಣರಲ್ಲಿ ಇರುವಷ್ಟು ಆರಿಯರಲ್ಲಿ ಇಲ್ಲ. ಆದರೂ ಬ್ರಾಹ್ಮಣ ಹೆಣ್ಣುಮಕ್ಕಳು 'ಮಿಾ ಜಾತೇ' ಎನ್ನುವರು; ಸಂಸ್ಕೃತದ ಗಾಳಿಯೂ ಸೋಂಕದೆ ಆರಿಯ ಸ್ತ್ರೀಯರು 'ಮಿಾ ಜಾತೋ' ಎನ್ನುವರು! ಇದೇನು ವಿಚಿತ್ರ! ಎಂಬ ಆಕ್ಷೇಪಣೆಗೆ ಸಂಸ್ಕೃತ ಪಕ್ಷಪಾತಿಗಳು ಉತ್ತರವನ್ನು ಕೊಡಲಾರದೆ ತಣ್ಣಗಾದರು! ಇದು 'ದ್ರಾವಿಡ' ಭಾಷೆಯ ಪರಿಣಾಮವೆಂಬುದು ನಿಶ್ಚಿತವಾಯ್ತು. ದ್ರಾವಿಡ ಭಾಷೆಗಳಲ್ಲಿ ಉತ್ತಮ ಪುರುಷದ 'ನಾನು ಹೋಗುತ್ತೇನೆ' ಎಂದು ಕ್ರಿಯಾಪದವು ಪುಲ್ಲಿಂಗ, ಸ್ತ್ರೀಲಿಂಗಗಳಲ್ಲಿ ಒಂದೇ ತೆರನಾಗಿದೆ. ಆದರೆ ಬ್ರಾಹ್ಮಣರ ಆರಿಯ ಮಾತಿನಲ್ಲಿ 'ಮಿೂ ಜಾತೊ', ಮತ್ತು 'ಮಿೂ ಜಾತೇ' ಎಂದು ಎರಡು ಬಗೆ ಯಾಗಿದೆ! ಆರಿಯ ಹೆಣ್ಣುಮಕ್ಕಳು ಮಾತ್ರ 'ಮಿಾ ಜಾತೋ' ಎಂದು ಹೇಳುವ ಕಾರಣವೇನು? ಗಂಡಸರಿಗಿಂತಲೂ ಹೆಂಗಸರಲ್ಲಿ ಪುರಾಣಪ್ರಿಯತೆ ಹೆಚ್ಚು. ಅವರಲ್ಲಿರುವ ಈ ಬಗೆಯ ಪರಂಪರಾಪ್ರೀತಿಯೆ ಜಗತ್ತಿನ ಬೇರೆ ಬೇರೆ ಸಂಸ್ಕೃತಿಗಳಲ್ಲಿ ಒಮ್ಮೆಲೆ ವಿಶೇಷಪ್ರಕಾರದ ವ್ಯತ್ಯಾಸಗಳು ಆಗದಿರುವುದಕ್ಕೆ ಮುಖ್ಯ ಕಾರಣವು, ಎಂದು ಮಾನವ ಸಮಾಜದ ಮದುವೆಯ ಇತಿಹಾಸವನ್ನು (History of Human Marriage) ಬರೆದ ವೆಸ್ಟರ್ ಮಾರ್ಕನು ವಿಶದಪಡಿಸಿದ್ದಾನೆ. ಆರಿಯ ಹೆಣ್ಣುಮಕ್ಕಳಲ್ಲಿ ದೃಢಮೂಲವಾಗಿರುವ 'ಮಿಾ ಜಾತೊ' ಎಂಬ ಈ ಮಾತಿನ ಕಾರಣವನ್ನು ಹೀಗೆ ಹೇಳುವರು: ಅವರು

† ವಿವಿಧ ಜ್ಞಾನವಿಸ್ತಾರ ೧೯೨೭, ' ಪರ್ಹಾಡಿ ಮರಾಠಿ

ಮೊದಲು ದ್ರಾವಿಡಸಂಗಡದಿಂದ ಬಂದವರು. ಆರೇ ಮಾತನ್ನು ಕಲಿತರೂ ಮೊದಲಿನ ಮಾತಿನ ರೀತಿಯನ್ನು ಬಿಟ್ಟುಕೊಡಲು ಆಗಲಿಲ್ಲ. ಮರಾಠರು ಆರ್ಯ–ದ್ರಾವಿಡರ ಮಿಶ್ರಣದಿಂದ ಆದವರೆಂದು ದೇಹಲಕ್ಷಣಗಳಿಂದ ನಿರ್ಧರಿಸಿರುವವರಿಗೆ, ಅವರ ಹೆಣ್ಣುಮಕ್ಕಳಲ್ಲಿ ಬೇರೂರಿರುವ 'ಮಿಾ ಜಾತೋ' ಎಂಬೀ ಬಗೆಯ ಮಾತಿನ ರೀತಿಗಳು ಇನ್ನೂ ಹೆಚ್ಚಿನ ಆಧಾರವನ್ನು ಪೂರೈಸಿ ಕೊಡುತ್ತಲಿವೆ.

ಸಾಂಗಲಿ, ಮಿರಜಿಯ ಆರಿಯ ಹೆಣ್ಣು ಮಕ್ಕಳ ಬಾಯಲ್ಲಿ 'ಮಿಾ ಜಾತೊ' ಎಂಬೀ ಬಗೆಯ ಮಾತು ಇದ್ದರೆ ಸೋಜಿಗಪಡಬೇಕಾದ ಕಾರಣವಿದ್ದಿಲ್ಲ. ಆದರೆ ಸಾಂಗಲಿ ಮಿರಜಿಯಲ್ಲಂತೂ ಸರಿಯೆ; ಖಾನದೇಶ–ವರ್ಹಾಡಗಳಲ್ಲಿಯೂ ಇದೇ ರೀತಿ ಇರುವುದಕ್ಕೆ ಕಾರಣವೇನು? ಖಾನದೇಶ ವರ್ಹಾಡಗಳಲ್ಲಿಯೂ ದ್ರಾವಿಡ ಮಿಶ್ರಣವುಂಟೆಂದು ಒಪ್ಪಿಕೊಳ್ಳಲೇಬೇಕಲ್ಲವೆ? 'ಮಿಾ ಜಾತೋ' ಎಂಬ ಒಂದು ಮಾತಿನಿಂದಲೇ ದ್ರಾವಿಡಮಿಶ್ರಣದ ಸಿದ್ಧಾಂತವು ಸ್ಥಾಪಿತವಾಗುತ್ತಿದೆಯೆಂದಲ್ಲ. ಇಂತಹ ಇನ್ನೂ ಹಲವು ಸಂಗತಿಗಳಿವೆ ಅವೆಲ್ಲವುಗಳ ವಿಸ್ತಾರವು ಇಲ್ಲಿ ಅಪ್ರಸ್ತುತ * ಆರಿಯ ಭಾಷೆ, ಸಂಸ್ಕೃತಿಗಳ ಅಭ್ಯಾಸವು ಈ ವಿಷಯಕ್ಕೆ ಸಾಕಷ್ಟು ಆಧಾರಗಳನ್ನು ಒದಗಿಸಿಕೊಡಬಲ್ಲುದಾಗಿದೆ. ಇದರಿಂದ ಒಂದು ಸಂಗತಿಯು ನಿಶ್ಚಿತವಾಗಿ ಗೊತ್ತಾಗುತ್ತದೆ: ಖಾನದೇಶ ವರ್ಹಾಡಗಳಲ್ಲಿ ಮೊದಲು ದ್ರಾವಿಡರು ತಲೆಯೆತ್ತಿ ಕೊಂಡಿದ್ದರು. ಅವರು ಆರ್ಯರ ಮಹಾ ಪ್ರವಾಹದಲ್ಲಿ ಕರಗಿ ಹೋದರೂ ಅದರ ಪರಿಣಾಮವು ಮರಾಠಿ ನಡೆನುಡಿ, ಜನಾಂಗಗಳಲ್ಲಿ ಚೆನ್ನಾಗಿಯೆ ಉಳಿದುಕೊಂಡಿದೆ. ಇದನ್ನೆ ನ್ಯಾಯಮೂರ್ತಿ ರಾನಡೆಯವರು 'The mixture of the two elements is best illustrated by the peculiarities of Marathi Lanquage' ಎಂಬಲ್ಲಿ ಒಪ್ಪಿಕೊಂಡಿದ್ದಾರೆ.

ಖಾನದೇಶ ವರ್ಹಾಡಗಳಕಡೆಗೆ ಉಳಿದು ಕೊಂಡಿರುವ ಕನ್ನಡ (ಸಂಶೋಧಕರು ಹೇಳುವ ದ್ರಾವಿಡ)ದ ಪ್ರಾಚೀನ ಕುರುಹುಗಳ ಬಹುಭಾಗದ ವಿಚಾರವು

* ಕೆಲವನ್ನು ಮಮೂ. ಪುಟ ೩೦–೩೫ ಓದಬಹುದು.

ಕಣ್ಮರೆಯಾದ ಕನ್ನಡ' ದಲ್ಲಿ ಬಂದಿದೆ. ಅದರೊಳಗಣ ಸ್ವಲ್ಪ ಭಾಗವನ್ನು ಹೊಸತಾಗಿ ಸಂಗ್ರಹಿಸಿದ ಹೆಚ್ಚಿನ ಸಂಗತಿಗಳೊಡನೆ ಇಲ್ಲಿಕೊಟ್ಟರೆ ಅಪ್ರಸ್ತುತ ವಾಗಲಾರದು.

'ನರ್ಮದಾ ಗೋದಾವರಿಗಳ ನಡುವಣ ನಾಡಿನಲ್ಲಿ ಒಂದಾನೊಂದು ಕಾಲಕ್ಕೆ ಕರ್ಣಾಟವು ಇದ್ದುದೇ ನಿಜ ವಾಗಿದ್ದರೆ ಅಲ್ಲಿ ಕೆಲವಾದರೂ ಕನ್ನಡ ಜನಾಂಗಗಳು ಇರಲೇಬೇಕಷ್ಟೆ ? ಬೇರೆ ಬೇರೆ ಪರಕೀಯ ಜನಾಂಗ ಗಳ ಆಘಾತಕ್ಕೆ ಈ ಭಾಗದೊಳಗಿನ ಎಷ್ಟೋ ತಂಡ ಗಳು ಈ ನಾಡಿನಿಂದ ಗುಳೆಕಟ್ಟಿಕೊಂಡು ಬೇರೆಡೆಗೆ ಹೋಗಿರಬಹುದು. ಆದರೆ ಮೊದಲು ನೆಲಸಿದ್ದವರಲ್ಲಿ ತೀರ ಒಬ್ಬನೂ ಉಳಿಯದಂತೆ ಎಲ್ಲರೂ ತಮ್ಮ ಬಾಳು ಬದಕುಗಳನ್ನೆಲ್ಲ ಕಿತ್ತುಕೊಂಡು ಹೋಗಿರುವುದಂತೂ ಅಸಂಭವವು. ಆದುದರಿಂದ ಇಲ್ಲಿ ಅಲ್ಪಸ್ವಲ್ಪ ಪ್ರಮಾಣ ದಲ್ಲಾದರೂ ಇನ್ನೂ ಕನ್ನಡದ ಕುರುಹುಗಳು ಉಳಿದಿರ ಬೇಕಲ್ಲವೆ? ಈ ಬಗೆಯ ಅವಶೇಷಗಳು ಏನಾದರೂ ಉಂಟೆ? ಇಂತಹ ಕೆಲವೊಂದು ಪ್ರತ್ಯಕ್ಷ ಪ್ರಮಾಣ ಗಳ ಬೆಂಬಲವಿಲ್ಲದ ಊಹೆಯು ಗ್ರಾಹ್ಯವೆನಿಸಲಾರದು.'

ಸ್ವಲ್ಪ ಕಣ್ದೆರೆದು ನೋಡಿದರೆ ಇಂತಹ ಪ್ರಮಾಣಗಳಿಗೆ ಕೊರತೆಯಿಲ್ಲ. 'ಹಳಬ' ರಂತಹ ಸಂದಿಗ್ಧ ಸ್ಥಿತಿಯೊಳಗಿನ ಜನಗಳನ್ನು ಲೆಕ್ಕಕ್ಕೆ ಹಿಡಿವಕಾರಣ ವಿಲ್ಲ. ಈ ಜನಾಂಗದ 'ಹಳಬ' ಎಂಬ ಹೆಸರಿನ ಹೊರತು ಇವರು ಕನ್ನ ಡಕ್ಕೆ ಸಂಬಂಧಪಟ್ಟವರೆಂಬುದಕ್ಕೆ ಸ್ಪಷ್ಟವಾದ ಹೆಚ್ಚಿನಆಧಾರಗಳೇನೂ ಇಲ್ಲ. ಆದರೂ ಒಂದೆರಡು ಸಂಗತಿಗಳು ವಿಚಾರಾರ್ಹವಾಗಿವೆ. ಹಳಬರೆಂಬವರು ಬೆಳಗಾಂವಿ ಜಿಲ್ಹೆಯಲ್ಲಿಯೂ ಹಳಪೈಕರು ಉತ್ತರಕನ್ನಡದಲ್ಲಿಯೂ ಉಂಟು. ಬೆಳಗಾಂವಿ ಜಿಲ್ಹೆಯಲ್ಲಿ ಓಲೆಕಾರರು ಹಳಬರೇ. ವರ್ಹಾಟ, ಮಧ್ಯಪ್ರಾಂತದ ಜಾತಿ ಜನಾಂಗಗಳನ್ನು ಹೇಳುವಾಗ ರಸೆಲ್ಲನು Halaba a village watch man ಎಂದಿದ್ದಾನೆ. ಇವರಿಗೆ ಕೊತವಾಲವೆಂಬ ಹೆಸರು ಈಗ ಬಂದಿದೆ. †

† CTC, Vol. I, p. 379.

ಹಳಬನು ‘ oldest resident in the couutry ’ ಎಂದಿರುವನು! ಇದು ಕನ್ನಡ ‘ ಹಳಬ ’ ಶಬ್ದದ ಭಾಷಾಂತರವೇ ಅಲ್ಲವೊ? ಕರ್ನಾಟಕದ ನೆರೆಯಲ್ಲಿರುವ ಹಳಬರು ಆರ್ಯವರ್ಗದವರಲ್ಲವೆಂದು ಎಲ್ಲರೂ ಒಪ್ಪುವರು. ಇವರ ಭಾಷೆ ಯಾವುದೆ ಒಂದು ವರ್ಗಕ್ಕೆ ಸೇರಿದುದೆಂದು ಹೇಳಲಿಕ್ಕಾಗುವುದಿಲ್ಲವೆಂದು ಡಾ. ಕೊನೊ ಅವರು ಅಭಿಪ್ರಾಯಪಟ್ಟಿದ್ದಾರೆ. ‘ It is a corrupt mixture of several languages: both Aryan and Dravidian. *

ತಮ್ಮ ಹಳೆಯ ಪರಂಪರೆಯನ್ನು ಒಂದಿಷ್ಟು ನೆನಪಿಡದ ಹಳಬರನ್ನು ಬಿಟ್ಟರೂ ಈ ಭಾಗದಲ್ಲಿರುವ ‘ ಕುರುಬ ’ ಜನಾಂಗವನ್ನು ಕಡೆಗಣಿಸಿ ನಡೆಯಲಾರದು. ಬಿಹಾರ, ಓರಿಸ್ಸಾ, ಛೋಟಾನಾಗಪೂರಗಳ ಕಡೆಗೆ ‘ ಕುರ್ಖ ’ ಎಂಬ ಹೆಸರಿನ ಜನಗಳುಂಟು. ‘ಕುರ್ಖ’ ಎಂದರೆ ಕುರುಬರೆಂದು ನಾವು ಕೇವಲ ಶಬ್ದಸಾಮ್ಯದಿಂದ ಊಹಿಸಿರುವೆವೆಂದು ಆಕ್ಷೇಪಿಸಬಹುದು. ಇವರಿಗೆ ಓರಾಓನರೆಂದೂ ಒಂದು ಹೆಸರಿದೆ. ‘ಕಿಸಾನ’ ರೆಂದು ಇತ್ತೀಚಿಗೆ ಕರೆವ ವಾಡಿಕೆಯಿದೆ. ಓರಾಓನ ( Oraon ) ಮತ್ತು ಕಿಸಾನ ಇವೆರಡರ ಅರ್ಥ ಹೊಲದ ಆಳು, ಕೃಷಕ. ಆದರೆ ‘ಕುರ್ಖ’ ಎಂದರೆ ಕುರುಬನೇ ಎಂದು ಹಲವು ಆಧಾರಗಳಿಂದ ಸಿದ್ಧಪಡಿಸಬಹುದು.

> The Oraons are identical with Dhangars ‡
> ( ಧನಗರ=ಕುರುಬ ),

ರಸೆಲ್ಲನು ಇದಕ್ಕೂ ಸ್ಪಷ್ಟವಾಗಿ ಹೇಳುತ್ತಾನೆ. †

> Dhanagar an alternative name for the tribe ( Kurkh ),

ಇವರಿಗೆ ‘ ಕುರ್ಖ–ಧನಗರ ’ ಎಂದು ಕರೆವ ರೂಢಿಯುಂಟಂತೆ! ಇಲ್ಲಿ? ‘ಕೂಡಲ–ಸಂಗಮ’ ದಂತೆ ದ್ವಿರುಕ್ತಿಯು ಮನನೀಯವಾಗಿದೆ

ಬಿಹಾರ, ಛೋಟಾನಾಗಪೂರಗಳಷ್ಟು ದೂರಿನ ನಾಡಿನಲ್ಲಿ ಕುರುಬರೆಲ್ಲಿ ಎಂದು ಶಂಕಿಸಬಹುದು. ಇವರು ತಾವು ಕರ್ಣಾಟದಿಂದ ಬಂದವರೆಂದು ( have come from Carnatic ) ಹೇಳುತ್ತಾರೆ. ಇವರ ಭಾಷೆ

---

* LSI. Vol. I, Part I. p. 144 and IA. Vol. XXXII. p. 92

‡ FRE. See oraons. † CTC. Vol. I. p. 69: 359.

ಕನ್ನಡಕ್ಕೆ ಸಮೀಪಿಸಿದ್ದೆಂದು ಡಾ. ಗ್ರಿಯರಸನ್ನರು ಕಂಡುಹಿಡಿದಿರುವರು. *
ಇವರು ಒಂದು ಕಾಲಕ್ಕೆ ಕೆಚ್ಚ ಕನ್ನಡಿಗರೆಂಬ ಬಗೆಗೆ ಸೆನಸ್ ರಿಪೋರ್ಟಿನವರೂ ಡಾಕ್ಟರ ಗ್ರಿಯರಸನ್ ಮೊದಲಾದವರೂ ಒಪ್ಪುವರು. ಈ ಜನಗಳು ಅಲ್ಪ ಸ್ವಲ್ಪ ಇಲ್ಲ. ಜನಸಂಖ್ಯೆ ಐದು ಲಕ್ಷಕ್ಕೆ ಮೀರಿದೆ ! ಕರ್ಣಾಟಕದ ಇಷ್ಟೊಂದು ಭಾಗವು ಕಣ್ಮರೆಯಾದಂತಾಗಲಿಲ್ಲವೆ ?

'ಕೊರಬು ಎಂಬವರ ಬಗ್ಗೆ ಮಹಾರಾಷ್ಟ್ರ ಶಬ್ದಕೋಶದಲ್ಲಿ ಹೀಗೆ ಹೇಳಿದೆ :

> ' ಗಾವಾಂತೀಲ ಏಕ ಬಲೂತೇದಾರ; ಹೀ ಧನಗರ
> ಜಾತ ಆಹೇ. ಕೊರಬೂಚೀ ಕಾಮೇ ಪುಷ್ಕಳ ಆಹೇತ.
> ಪೈಕೀ ( ? ಕಾಮದಾರ ) ಪ್ರವಾಶಾಚೆ ಬರದಾಸ್ತ
> ಠೇವಣೇ, ತ್ಯಾಚೀ ಓಝೀ ವಾಹಣೇ, ರಯತೇ
> ಪಾಸೂನ ಸರಕಾರ ದೇಣೆ ಘೇಣೇ ವಸೂಲ ಕರಣೇ

ಈ ಶಬ್ದವು ಕನ್ನಡ ಕುರುಬ ಅಥವಾ ಕುರುಂಬ ಎಂಬುದರಿಂದಲೇ ಬಂದುದೆಂದು ಆ ಕೋಶಕಾರರೇ ಹೇಳಿದ್ದಾರೆ. ಆದುದರಿಂದ ಈ ವರ್ಣನೆಯು ಕುರುಬನದೆ ಎಂದು ನಿಶ್ಚಿತವಾಗಿ ಹೇಳಬಹುದಾಗಿದೆ. ಮೇಲಣ ವರ್ಣನೆಯಿಂದ ವರ್ಹಾಟದೊಳಗಿನ ಕೊರಬನು ಕರ್ಣಾಟದೊಳಗಿನ ಕುರುಬ ಜಾತಿಯು ಓಲೆಕಾರ ಅಥವಾ ಹಳಬನೇ ಆಹುದೆಂದು ಗ್ರಾಮಾಧಿಕಾರಿಗಳ ಕುಲ, ಕೆಲಸಗಳನ್ನು ಬಲ್ಲವರಿಗೆ ಬೇರೆ ಹೇಳುವ ಕಾರಣವೇ ಇಲ್ಲ.

ವರಾಟದ ಗೌಡ, ನಾಡಗೌಡ, ( ದೇಶಮುಖ )ರು ಕುಡುವರು ( ' ಕುಳುಂಬಿ ' ಗಳು ); ಎಂದರೇ ಒಕ್ಕಲರು. ಈ ಭಾಗದ ಓಲೆಕಾರರು ' ಕುರುಬರು '; ' ಹಳಬರು '; ಈ ಮೂರೂ ಅಚ್ಚ ಕನ್ನಡದ ಪದಗಳು.

ಇಷ್ಟಾದರೂ ವರ್ಹಾಟದ ಕನ್ನಡತನದ ಬಗ್ಗೆ ಸಂದೇಹಪಟ್ಟು ಕೊಳ್ಳುವವರಿರಬಹುದು; ಹಾಗಾದರೆ ಇನ್ನೂ ಕೆಲವು ಜಾತಿಗಳನ್ನು ನೋಡಿ:

---

* LSI· Vol· IV, p, 446; and ಕವೀಕ್ಷ. ಪುಟ ೧೫.

'ಒಕ್ಕಲಿಗ', ಎಂದೆ ಹೆಸರು ಹೇಳಿ ಇವರ ಬಗ್ಗೆ ರಸೆಲ್ಲನು ಬರೆಯುವುದು ಏನೆಂದರೆ:*

A Canarese caste of cultivators of which a few representatives were returned from Nagapur.

ಹಳಬರಾಯಿತ್ತು, ಕೊರಬುಗಳಾಯಿತ್ತು, ಕುಳುಂಬಿಗಳಾಯಿತ್ತು, ಅಥವಾ ಒಕ್ಕಲಿಗರಾಯಿತ್ತು. ಇವರಿಗೆ ಕನ್ನಡಿಗರೆನ್ನಬಹುದೆಂದು ಎನಿಸುತ್ತದೆ. ಆದರೆ ಇವರಲ್ಲಿ ಕನ್ನಡ ಮಾತು ಏಕೆ ಉಳಿದಿಲ್ಲ? ಕುರ್ಬರಲ್ಲಿ ಕನ್ನಡ ಮಾತಿನ ಅವಶೇಷಗಳೇನೊ ಅಲ್ಪ ಸ್ವಲ್ಪ ಉಳಿದುದನ್ನು ಸಂಶೋಧಕರು ಹೇಳುತ್ತಾರೆ. ಆದರೂ ಈ ನಾಡು ಕನ್ನಡಕ್ಕೆ ಸಂಬಂಧಪಟ್ಟದ್ದೇ ನಿಜವಿದ್ದರೆ ಕನ್ನಡನುಡಿಯು ಇನ್ನೂ ಹೆಚ್ಚು ಜೀವಂತ ಸ್ವರೂಪದಲ್ಲಿ ಇಲ್ಲಿ ಇರಬೇಕಾಗಿದ್ದಿತಲ್ಲವೆ? ನಿಜ. ಈ ಪ್ರಶ್ನೆಗೆ ಒಂದೇ ಉತ್ತರ: ಕನ್ನಡಿಗರಿಗೆ ಕನ್ನಡದವಿಷಯದಲ್ಲಿ ಉಂಟಾಗಿದ್ದ ಅನಾದರವೇ ಇದೆಲ್ಲಕ್ಕೂ ಮೂಲಕಾರಣ. ಆರ್ಯೀಕರಣಕ್ಕೆ ಮೈಗೊಟ್ಟು, ಮನಗೊಟ್ಟು ಕನ್ನಡವನ್ನು ಕಡೆಗಣಿಸಿ, ಕೊನೆಗಾಲದಲ್ಲಿ ಕರ್ಣಾಟಸ್ಥರಿಗೆ—ಅಥವಾ ಹೊಯ್ಸಳ ಕರ್ಣಾಟರಿಗೆ ಕನ್ನಡದ ಎಚ್ಚರವುಂಟಾಯಿತ್ತು. ಅಲ್ಲಿಯವರೆಗೂ ಕನ್ನಡವು ಸವೆದು ಸವೆದು, ಕರಗಿ, ಕೊರಗಿ ಕಣ್ಮರೆಯಾಗುವ ಹೊತ್ತು ಬಂದಿದ್ದಿತು. 'ತಿರುಳ್ಗನ್ನಡ'ವೇ ಹುರುಳಿಲ್ಲದಾಗಿ ಬಿಟ್ಟ ಕಾಲದಲ್ಲಿ ಲಾಟ—ವರ್ಹಾಟಗಳಲ್ಲಿ ಕನ್ನಡವು ಹೇಳಹೆಸರಿಲ್ಲದಂತಾಗಿದ್ದರೆ ಸೋಜಿಗವೇನು? ಅಲ್ಲಿ ಈಗ ಉಳಿದಿರುವ ಪ್ರಾಚೀನ ಕೆಲವು ಕುರುಹುಗಳಿಂದ ಮೊದಲಿನ ಕನ್ನಡದ ಸ್ಥಿತಿಗತಿಗಳನ್ನು ಕಲ್ಪಿಸಿಕೊಳ್ಳಬೇಕಾಗಿದೆ.

ಇಂತಹ ವಿಪರೀತ ಪರಿಸ್ಥಿತಿಯಲ್ಲಿಯೂ ಕನ್ನಡವು ಇನ್ನೂ ಜೀವಂತ ಭಾಷೆಯಾಗಿರುವ—ಮನೆಮಾತು ಕನ್ನಡವೇ ಆಗಿರುವ ಕೆಲವು ಜಾತಿಗಳು ವರ್ಹಾಡದಲ್ಲುಂಟು! ಇಂತಹರಿಗೆಲ್ಲ 'ಹೊರಗಣಿಂದ ಬಂದು ನೆಲಸಿದವರು' ಎಂದು ಹೇಳಿ ಕೆಲರು ಒಂದು ಮಾತಿನಲ್ಲಿ ಎಲ್ಲ ಕೆಲಸ ಬಗೆಹರಿಸುವರು. ಸುಮ್ಮನೆ ಹೆಚ್ಚಿನ ವಿಚಾರ ವಿಮರ್ಶೆಗಳಲ್ಲಿ ತಲೆಹಾಕಿ ಯಾರು ಶ್ರಮ ವಹಿಸಬೇಕು!

* CTC, Vol. I, p. 417; ಕಪರೀಕ್ಷೆ. ಪುಟ ೮೮

ವರ್ಹಾಟದಲ್ಲಿ ಕನ್ನಡವೇ ಮನೆಮಾತು ಇರುವ ಕುರುಂಬರಿದ್ದಾರೆ; ಹೊಲೆಯರಿದ್ದಾರೆ.

ಕುರುಂಬರು

( ಚಂದಾದಲ್ಲಿ )

| | |
|---|---|
| ಕ್ರಿ. ಶ. ೧೮೯೧ | ೨೩೨೦ |
| ಕ್ರಿ. ಶ. ೧೯೦೧ | ೨೧೫೧ |

ಹೊಲೆಯರು

( ಶಿವುಣ, ನಾಗಪೂರ, ಭಂಡಾರಾ, ಬಾಲಘುಟ್ಟಗಳಲ್ಲಿ )

| | |
|---|---|
| ಕ್ರಿ. ಶ. ೧೮೯೧ | ೩೬೧೪ |
| ಕ್ರಿ. ಶ. ೧೯೦೧ | ೩೪೬೪ |

ಕುರುಬರೆಂದು ಈಗ ಹೇಳುವ ಜನಕ್ಕೇ ಹಿಂದಿನಕಾಲದಲ್ಲಿ ಕುರುಂಬರು ಎಂಬ ಹೆಸರು ಇತ್ತು. ೧೩ನೆಯ ಶತಮಾನದಲ್ಲಿ ವ್ಯಾಕರಣ ಬರೆದ ಕೇಶಿರಾಜನು ಕನ್ನಡದಲ್ಲಿ ಕೆಲವು ನಿತ್ಯಬಿಂದುಗಳುಳ್ಳ ಶಬ್ದಗಳೆಂದೂ ಕೆಲವು ವಿಕಲ್ಪ ಬಿಂದುಗಳುಳ್ಳ ಶಬ್ದಗಳೆಂದೂ ಎರಡು ವರ್ಗಗಳನ್ನು ಕಲ್ಪಿಸಿದ್ದಾನೆ. * ಕದಂಪು, ಕದಪು; ಕರುಂಕೆ; ಕರುಕೆ; ಕಣಂಜು, ಕಣಜು; ಮುಸುಂಕು; ಮುಸುಕು; ಎಂಬಿವೇ ಮೊದಲಾದುವು ವಿಕಲ್ಪ ಬಿಂದುಗಳ ಉದಾಹರಣಗಳು. ನಿತ್ಯಬಿಂದುಗಳೆಂದು ಕೇಶಿರಾಜನು ಹೇಳಿದ ತುರುಂಬು, ಕುಸುಂಬೆ, ತೋಂಟ ಕುರುಂಬ ಇವೆ ಮೊದಲಾದುವುಗಳೆ ತಮ್ಮ ಬಿಂದುವನ್ನು ಸಂಪೂರ್ಣವಾಗಿ ಕಳೆದುಕೊಂಡಿರುವಾಗ ವಿಕಲ್ಪವಾಗಿದ್ದವುಗಳ ಮಾತು ಏತಕ್ಕೆ? ಇಂದಿನ ಕನ್ನಡಿಗರು ಬಿಂದುವನ್ನು ಬಿಟ್ಟಿರುವರಾದರೂ ಹಳಬರು ಹಾಗೆ ಮಾಡಿಲ್ಲ; ಕೇಶಿರಾಜನ ಮಾತು ಮೀರಿಲ್ಲ. ವರ್ಹಾಡ ಮತ್ತು ನೀಲಗಿರಿಯಲ್ಲಿರುವವರು 'ಕುರುಂಬ' ಎಂಬ ಹೆಸರನ್ನೇ ಈವರೆಗೆ ಉಳಿಸಿಕೊಂಡು ಬಂದಿದ್ದಾರೆ! ಇವರೆ ಕರ್ಣಾಟದ 'ಹಳಬ' ರು; ಮೊದಲಿಗರು; ಮೂಲಿಗರು. ಕನ್ನಡದ ಮೊದಲಿನ ಸ್ಥಿತಿಯ ಅನೇಕಾನೇಕ ಅವಶೇಷಗಳು (ಈಗಿನ ಕನ್ನಾಡು ಮತ್ತು ನುಡಿಗಳ ಪೂರ್ವಸ್ಥಿತಿದರ್ಶವಾಗಿ) ವರ್ಹಾಟ (ದೇಶ) ಮತ್ತು (ವರ್ಹಾಟ) ಭಾಷೆ

---

* ಶಮದ ಪುಟ ೨೯.

ಗಳಲ್ಲಿ ಸಿಕ್ಕುತ್ತಿರುವುದು ಏನನ್ನು ಸೂಚಿಸುವುದು?† ವರ್‍ಹಾಟವು ಕನ್ನಡದ ಅಂಗವಾಗಿದ್ದಿತೆಂದೆ ಅಲ್ಲವೆ? ಕುರುಂಬ ಶಬ್ದವು ೧೩ನೆಯ ಶತಮಾನದ ಮುಂದಿನ ಕಾಲದಲ್ಲಿ ಬಿಂದುವನ್ನು ಕಳೆದುಕೊಂಡು 'ಕುರುಬ' ಎಂಬೀ ತೆರನಾಗಿ ಬಳಕೆಯಲ್ಲಿ ಉಳಿದಿದೆ. ಆದುದರಿಂದ ನೀಲಗಿರಿ ಮತ್ತು ವರ್‍ಹಾಟದಲ್ಲಿರುವ ಕುರು(ಂ)ಬರು ಆ ಭಾಗದಲ್ಲಿ ೧೩ನೆಯ ಶತಮಾನಕ್ಕೆ ಮೊದಲಿನಿಂದಲೆ ಇದ್ದವರು, (ಬೇಕಾದರೆ ಹೋದವರು ಎನ್ನಿ) ಎಂದು ಊಹಿಸಲು ಅಡ್ಡಿಯೇನು? ೧೩ನೆಯ ಶತಮಾನದ ತರುವಾಯ ಆ ನಾಡಿಗೆ ಈ ಜನಗಳು ಹೋಗಿದ್ದರೆ ಕುರುಂಬ ಎಂಬ ಹೆಸರು ಅವರಿಗೆ ಇರುವ ಸಂಭವವೇ ಇಲ್ಲ. ಕುರುಬ ಎಂದೇ ಅವರ ಹೆಸರು ಇರಬೇಕಾಗಿತ್ತು.

೧೩ನೆಯ ಶತಮಾನದ ಮೊದಲಾದರೂ ಕನ್ನಡ ಕುರು(ಂ)ಬರು ವರ್‍ಹಾಟದ ಕಡೆಗೆ ಹೋಗಲು ಕಾರಣವೇನು? ಕರ್ಣಾಟದಲ್ಲಿ ಹುಲ್ಲಿನ ಅಡವಿಗಳು ಇದ್ದಿಲ್ಲವೆಂದೊ? ಎತ್ತ ಕರ್ಣಾಟ! ಎತ್ತ ವರ್‍ಹಾಟ! ಆಗಲಿ; ಕುರು(ಂ)ಬರು ಅಲೆವ ತಂಡದವರು, ಹೋಗಿರಬಹುದೆನ್ನುವ. ಆದರೆ (ನಾಗಪುರದ ಕಡೆಗೆ ಇರುವ ಅಥವಾ ಇದ್ದರೆಂದು ರಸೆಲ್ಲರು ಹೇಳುವ) ಕನ್ನಡ ಒಕ್ಕಲಿಗರು ಹೇಗೆ ಇಲ್ಲಿ? ಒಕ್ಕಲಿಗರು ಚರವೃತ್ತಿಯವರಲ್ಲ. ಒಕ್ಕಲಿಗರನ್ನೂ ಬಿಡಬಹುದು. 'ಹೊಲೆಯ' ರು (ಮಹಾರ ಅಲ್ಲ) ವರ್‍ಹಾಟಕ್ಕೆ ಬಂದುದೇಕೆ? ಸಾಮಾನ್ಯವಾಗಿ ಆವುದೊಂದು ಸ್ಥಳದ ಭಾಷೆ ಆವುದೆಂದು ನಿರ್ಧರಿಸುವಾಗ ಅಲ್ಲಿಯ ಹರಿಜನರ ಭಾಷೆ ಯಾವುದೆಂದು ನೋಡಬೇಕೆಂದು ಬಲ್ಲವರು ಹೇಳುವುದುಂಟು. ವರ್‍ಹಾಟದಲ್ಲಿ ಮನೆಮಾತು ಕನ್ನಡವೇ ಇರುವ ಹೊಲೆಯರು ಏಕೆ? ವರ್‍ಹಾಟದಲ್ಲಿ ಹೊಲೆಯರು ಇರುವ ಕೆಲವು ಊರುಗಳಲ್ಲಿ ಶೇವುಣ ಎಂಬುದೂ ಒಂದಿದೆ. ಈ ಶೇವುಣವು ದೇವಗಿರಿ ಯಾದವರ ಮೂಲಸ್ಥಾನ. ದೇವಗಿರಿ ಯಾದವರಲ್ಲಿ ಕೊನೆಯ ೨-೩ ರಾಜರನ್ನು ಬಿಟ್ಟು ಉಳಿದವರೆಲ್ಲ ಕನ್ನಡವನ್ನೇ ಓಲಗದ ಭಾಷೆಯಾಗಿ ಸ್ವೀಕರಿಸಿದ್ದರೆಂಬುದು ಇತಿಹಾಸದಿಂದ ಕಂಡು ಬರುತ್ತದೆ.

† ಇದರ ಇನ್ನೂ ಹೆಚ್ಚಿನ ವಿವರಣೆಯು 'ಕನ್ನಡವು ಮರಾಠಿಗೆ ಇತ್ತ ಸಾಂಸ್ಕೃತಿಕ ಋಣ' ಎಂಬ ಪ್ರಬಂಧದಲ್ಲಿ ಬರಲಿದೆ.

ಗ್ರಿಯರಸನ್‌ರು ಈ ಜನಗಳ ಕನ್ನಡ ಭಾಷೆಯನ್ನು ಕುರಿತು ಬರೆವಾಗ ಹೇಳುವುದೇನೆಂದರೆ: *

Kurumvar a wild pastoral tribe in Chanda who speak a dilect of Kanarese....this dialect is as specimens clearly show a form of Kanarese.

The Golari-Holiya is a dialect of Kanarese and is especially closely related to the form which that language assumes in Bijapur.

ಇದು ವಿಜಾಪುರದ ಕನ್ನಡಕ್ಕೆ ಬಹಳ ಸಮೀಪಿಸಿದ್ದೆಂದು ಹೇಳಿರುವರಲ್ಲದೆ ನೀಲಗಿರಿಯಲ್ಲಿರುವ ಬಡಗರು ಮತ್ತು ತೋಡರ ಮಾತಿನಲ್ಲಿರುವಂತೆ ಹಳಗನ್ನಡದ ಹಲವು ರೂಪಗಳೂ ಉಂಟೆಂದು ಅಭಿಪ್ರಾಯಪಟ್ಟಿದ್ದಾರೆ. ( It has preserved old forms like the dialect of Badagas. )

ಒಂದು ಕಾಲಕ್ಕೆ ಕನ್ನಡದ ಅಂಗವೆ ಆಗಿದ್ದ ಈ ನಾಡಿನಲ್ಲಿ ಕನ್ನಡ ಹೆಸರಿನ ಹಳ್ಳಿಪಳ್ಳಿಗಳು ಇರಬೇಕಲ್ಲವೆ? ಗೋದಾ ತೀರದಲ್ಲಿ ಮುಧೋಳ ಎಂಬ ಒಂದೂರಿದೆ. ಮುಧೋಳ ಎಂಬುದರ ಪೂರ್ವರೂಪವು 'ಮುದುವೊಳಲು'; ಇದನ್ನು ಜಂಬುಕಂಡಿಯ ಹತ್ತಿರಿನ ಮುಧೋಳ ( ಮುದುವೊಳಲ) ಆಧಾರದಿಂದ ನಿರ್ಧರಿಸಬಹುದಾಗಿದೆ. ಶ್ರೀ. ರಾಜಪುರೋಹಿತರು ಪುಣೆಯ ಕೇಸರಿ ಪತ್ರಿಕೆಯಲ್ಲಿ ಬರೆದ ಒಂದು ಲೇಖನದಲ್ಲಿ ಉದ್ಧರಿಸುವ ಒಂದು ಮಾತು ಬಹಳ ಮಹತ್ವದ್ದಿದೆ.

ವಿದ್ಯಾಲಯಂ ಇತಿ ಪ್ರಸಿದ್ಧಂ ತದ್ದೇಶವಾಸಿನಃ
ಬೀಜ್ಜಳ ಬೀಡುಃ ಇತಿ ವದಂತಿ.

ವಿದ್ಯಾಲಯವೆಂಬ ಪಟ್ಟಣಕ್ಕೆ ಆ ನಾಡಿನವರು ಬಿಜ್ಜಳ ಬೀಡು ಎಂದು ಕರೆವರಂತೆ! ಬೀಡು ಎಂಬುದು ಕನ್ನಡ ಶಬ್ದ. ಬೀಡು ಎಂದು ಊರಿಗೆ ಕನ್ನಡದ ನಾಮಕರಣಮಾಡುವ ಆ ನಾಡಿಗರ ಭಾಷೆಯು ಆವುದಿರಬಹುದು? ಕನ್ನಡದಿಂದ ಬೇರೆ ಇರುವ ಸಂಭವವೇ ಇಲ್ಲ. ಇಷ್ಟೆಲ್ಲ ಏಕೆ? ಪ್ರತ್ಯಕ್ಷ

* LSI, IV, p, 386, 395, etc.

'ಕನ್ನಡ' ಎಂಬ ಊರೇ ಅಲ್ಲಿದೆ. ಔರಂಗಾಬಾದ ಜಿಲ್ಲೆಯಲ್ಲಿ ಕನ್ನಡ ಎಂಬ ಹೆಸರಿನ ಊರಿದ್ದು ಅದೇ ಹೆಸರಿನ ತಾಲ್ಲೂಕೂ ಉಂಟು. ತಾಲ್ಲೂಕಿನ ಹೆಸರು 'ಕನ್ನಡ' ಎಂದು ಇರುವಂತೆ ಈ ಪ್ರದೇಶದ ಸುತ್ತಣ ನಾಡಿಗೆಲ್ಲ ಒಂದಾನೊಂದು ಕಾಲದಲ್ಲಿ 'ಕನ್ನಡ' ಎಂದೇ ಹೆಸರಿದ್ದಿತೆಂದು ಊಹಿಸಲೂ ಒಂದು ಬಲವಾದ ಕಾರಣವಿದೆ.

ಲಾಟ–ಕರ್ಣಾಟಗಳು ಸಂಯುಕ್ತರಾಜ್ಯವಾಗಿದ್ದುವೆಂಬ ಬೃಹತ್‌ಕಥೆಯೊಳಗಿನ ಉಲ್ಲೇಖವು ಸರಿಯಿದ್ದರೆ, ಲಾಟ–ಕರ್ಣಾಟಗಳನ್ನು ಕೂಡಿಯೆ ಹೇಳುವ ಶಾಸನಗಳ ಪ್ರಾಚೀನ ಪರಂಪರೆಯಲ್ಲಿ ಏನಾದರೂ ಅರ್ಥವಿದ್ದರೆ, ನಾಟ(ಲಾಟ)ವು 'ಕರ್ಣಾಟ ದೇಶೀ' ಎಂದು ಶಬ್ದರತ್ನಾಕರದಲ್ಲಿರುವ ಮಾತು ಸುಳ್ಳಿರದಿದ್ದರೆ, ಅಥವಾ ನಾಟವೂ ಕರ್ಣಾಟವೂ ಒಂದು ಎಂದು ಶ್ರೀ. ಆಪ್ಟೆ ಪ್ರಭೃತಿ ಕೋಶಕಾರರು ಯಾವ ಆಧಾರಗಳ ಮೇಲೆ ಅವಲಂಬಿಸಿ ಹೇಳುವರೊ ಅವು ವಿಶ್ವಸನೀಯವೆಂದರೆ ಈ 'ಕನ್ನಡ' ತಾಲ್ಲೂಕಿನ ಸುತ್ತಣ ಇನ್ನೂ ವಿಸ್ತೃತವಾದ ಪ್ರದೇಶವೆಲ್ಲವೂ ಪುರಾತನ ಕಾಲದಲ್ಲಿ ಕನ್ನಡ ಎಂಬ ದೇಶವಾಗಿ ಇರುವ ಸಂಭವವು ಇಲ್ಲದಿಲ್ಲ. ಇಂತಹ 'ಕನ್ನಡ' ಎಂಬ ಹೆಸರಿನ ಐದು ಬೇರೆ ಊರುಗಳು ಇಂದೂರ ಸಂಸ್ಥಾನದಲ್ಲಿದ್ದುದು ಬೆಳಕಿಗೆ ಬಂದಿದೆ. ಅಲ್ಲದೆ ನಾಸಿಕ, ಖಾನದೇಶದತ್ತ ಇರುವ ಅಚ್ಚ ಕನ್ನಡಿಯ ಊರ ಹೆಸರುಗಳೇ ಹಲವಿವೆ. ಇವುಗಳ ವಿವರಣೆ ಕಂನಾಡ ಕತೆಯಲ್ಲಿ ಬಂದಿದೆ.

ಈ ಪರಂಪರೆಯ ಅರಿವು ಇಲ್ಲದ ಹಲವರು ವರ್‍ಹಾಟ ಖಾನದೇಶಗಳ ಕಡೆಗೆ ಇರುವ ಕುರುಂಬರೆ ಮೊದಲಾದ ಕನ್ನಡಿಗರು ಹೊರಗಣಿಂದ ಅಲ್ಲಿ ಬಂದವರೆಂದು ಊಹಿಸುವರು—ಹಟ ಹಿಡಿವರು! ಆದರೆ ಮರಾಠಿ, ಗುಜರಾತಿ ಭಾಷೆ ಹಾಗೂ ಸಂಸ್ಕೃತಿಗಳ ತುಲನಾತ್ಮಕ ಅಭ್ಯಾಸಿಗಳು ಈ ನಾಡುಗಳಲ್ಲಿ ಮೊದಲು ದ್ರಾವಿಡರು ವಾಸವಾಗಿದ್ದರೆಂದು ಎದೆತಟ್ಟಿ ಹೇಳುವರು. ಮನುಷ್ಯನ ಮುಖಲಕ್ಷಣ ಕಣ್ಣು ಕೂದಲುಗಳ ಬಣ್ಣ ಆಕಾರಗಳಿಂದ ಜನಾಂಗಗಳ ಕುಲಗೋತ್ರಗಳನ್ನು ನಿರ್ಧರಿಸುವ ಮಾನವ-ವಂಶಶಾಸ್ತ್ರರು ಈ ಮಾತಿಗೆ ಬೆಂಬಲವನ್ನೀಯುವರು. ಇದೆಲ್ಲ 'ದ್ರಾವಿಡ', 'ದ್ರಾವಿಡ' ಎಂಬ ಹೆಸರಿನಿಂದ ನಡೆದ ಸ್ಥೂಲ ವ್ಯಾಪಾರವೇ ಆಯ್ತು. ಈ ಆರಿಯರಲ್ಲಿ, ಗುರ್ಜರರಲ್ಲಿ ಬೆರೆತುಕೊಂಡು ಇರುವ, ಕರಗಿ ಹೋಗಿರುವ 'ದ್ರಾವಿಡ'ರು ಇಂತಹ

ರೆಂದು ಬೆರಲಿಟ್ಟು ತೋರಿಸುವರಾರೂ ಇಲ್ಲ.

ಆದರೆ ಪರ್ನಾಟದ ಕನ್ನಡ ಒಕ್ಕಲಿಗರು, ಕುರು(ಂ)ಬರು ಮೊದಲಾದ ಪಂಗಡಗಳು ಅಲ್ಲಿಯ ಪುರಾತನ ದ್ರಾವಿಡ ಶಾಖೆಯು ಅವಶೇಷಗಳಾಗಿ ನಮ್ಮ ಕಣ್ಣಿಗೆ ಬೀಳುತ್ತಿರುವಾಗ ಅವರಿಗೆಲ್ಲ ಹೊರಗಣಿಂದ ಇಲ್ಲಿ ಬಂದವರೆಂದು ಹೇಳುವುದು ಮಾತ್ರ ಬಹಳ ವಿಚಿತ್ರವಾಗಿದೆ!

ಕನ್ನಡ-ತಾಲ್ಲೂಕಿನ ನೆರೆಹೊರೆಯಲ್ಲಿ ಕನ್ನಡ ಎಂಬ ಹೆಸರಿನ ಗೋವಳರು ಉಂಟೆಂದು ಆ ಭಾಗದ ಗ್ಯಾಝೆಟಿಯರುಗಳಿಂದ ಕಂಡುಬಂದಿದೆ. (ಹಿಂದೆ ಪುಟ ೧೪೪ ನೋಡಿ). ಆದರೆ ಇವರು ಈ ಭಾಗಕ್ಕೆ ಹೊರನಾಡಿನಿಂದ ಬಂದು ನೆಲಸಿದವರೆಂಬುದು ಸಾಧಿಸುವ ವಿಪರೀತ ಪ್ರಯತ್ನವು ಕಂಡು ಬರುತ್ತಲಿದೆ! ಸೀಮೆಯ ಹೆಸರು 'ಕನ್ನಡ'; ಅಲ್ಲಿಯ ಕೆಲವು ಗೋವಳ ತಂಡಗಳ ಹೆಸರು 'ಕನ್ನಡ'. ಆದುದರಿಂದ ಈ ಕನ್ನಡ ಗೋವಳರು ಇದೇ ಸೀಮೆಯ ಮೊದಲಿಗರು ಎಂದು ನಿರ್ಧರಿಸಲು ಆತಂಕವೇನು ? ಖಾನದೇಶ ಗ್ಯಾಝಿಟಿಯರಿನಲ್ಲಿ ಬಂದ ಕನ್ನಡ ಗೋವಳರ ವರ್ಣನೆಯು ಹಿಂದೆ ಬಂದಿದೆ. ಅಹಮ್ಮದನಗರ ಭಾಗದಲ್ಲಿಯೂ ಇವರುಂಟೆಂತೆ! ನಾಸೀಕ ಜಿಲ್ಲೆಯಲ್ಲೂ ಸಾಕಷ್ಟು ಇದ್ದಾರೆ! ನಾಸೀಕ ಜಿಲ್ಲೆಯ ಗ್ಯಾಝಿಟಿಯರಿನಲ್ಲಿ ಇವರನ್ನು ಕುರಿತು ಬರೆದಿರುವುದು ಏನೆಂದರೆ:

> The cattle breeding tribes the Kanadas···· who formed a fair proportion of the people···· mainly depend on their herds and flocks····the Kanadas were remarkably well off· Some Kanada hamlets with not more than three or four houses had as many as 500 cattle and 500 goats. (p- 232)

ವೀರಗಲ್ಲುಗಳು ಕನ್ನಡರ ವೈಶಿಷ್ಟ್ಯವೆಂದು ಪುರಾತನ ತಮಿಳ ಸಾಹಿತ್ಯದಿಂದಲೆ ವ್ಯಕ್ತವಾಗುತ್ತದೆ. ( ಹಿಂದೆ ಪುಟ ೧೫೨ ನೋಡಿ). ವಡುಕರು ನಟ್ಟುಕಲ್ಲುಗಳನ್ನು ಪೂಜಿಸುವವರೆಂದು ತಮಿಳ ಕಾವ್ಯಗಳಿಂದ ಗೊತ್ತಾಗುತ್ತದೆ. ಕರ್ಣಾಟದಲ್ಲಿ ವೀರಗಲ್ಲುಗಳಿಲ್ಲದ ಭಾಗವೇ ಇಲ್ಲ. ಮಹಾರಾಷ್ಟ್ರದವರಿಗೆ

ವೀರಗಲ್ಲುಗಳು ಅಪರಿಚಿತ, ಏಕೆಂಬರೆ ಮರಾಠಿ ಭಾಷೆಯಲ್ಲಿ 'ವೀರಗಲ್ಲು' ಎಂಬುದಕ್ಕೆ ಸಮಾನಾರ್ಥಕ ಶಬ್ದವೇ ಇಲ್ಲ ! ಆದರೂ ಮಹಾರಾಷ್ಟ್ರದೇಶದಲ್ಲಿ ವೀರುಗಲ್ಲುಗಳಿರುವ ಸ್ಥಳಗಳನ್ನು ಕೊಟ್ಟಿದೆ.

> 'Memorial' stones are found all over the district and are specially near the Sahydries
>
> Shivar has a remarkable group of memorial stones. (p. 647)
>
> One group of unusually large stones occur at Chousale.
>
> Some times rude insriptions are carved under figures !

ಶಿವರ, ಚೌಸಾಲೆ ಎಂಬಲ್ಲಿ ಈ ಕಲ್ಲುಗಳು ವಿಶೇಷವಾಗಿವೆಯಂತೆ. ಇವುಗಳಲ್ಲಿ ಕೆಲವುಗಳ ಮೇಲೆ ಅಕ್ಷರಗಳನ್ನು ಕೊರೆದುದುಂಟೆಂದು ಸಾಹೇಬರು ಹೇಳುತ್ತಾರೆ. ಆದರೆ ಅದು ಯಾವ ಭಾಷೆಯೆಂಬುದರ ಬಗ್ಗೆ ಮಾತ್ರ ಮೌನ! ಈ ವೀರಗಲ್ಲುಗಳು ಯಾವ ಜನಾಂಗದ ಸೊತ್ತು, ಎಂಬುದನ್ನು ಕಂಡುಹಿಡಿಯಲು ಶ್ರಮಪಡಬೇಕಾಗಿಲ್ಲ. " ಯಾ ದಗಡನಾ ವೀರ ಗಳ ಮ್ಹಣತಾತ " ಎಂದು ಮಹಾರಾಷ್ಟ್ರ ಸಂಶೋಧಕರು ಹೇಳುವ ' ವೀರ ಗಳ ' ಎಂಬ ಮಾತಿನಿಂದಲೆ ಇವು ಆರಿಯವಲ್ಲ, ಎಂಬುದು ಸ್ಪಷ್ಟವಾಗುತ್ತದೆ. ನಾಸೀಕ ಗ್ಯಾಝಿಟಿಯರಿನಲ್ಲಿ ಈ ಕಲ್ಲುಗಳನ್ನು ಪೂಜಿಸುವವರು ' ಕುಣಬಿ ', ' ಕೋಳಿ ' ( ಅಂಬಿಗರು ) ಮೊದಲಾದ ಜಾತಿಯವರೆಂದು ಹೇಳಿದ್ದಾರೆ ! ಮರಾಠರು ಆರ್ಯ–ದ್ರಾವಿಡ ಸಂತತಿಯೆಂದು ಮೇಲೆ ವಿವರಿಸಿದೆಯಷ್ಟೇ. ಕನ್ನಡಿಗರ ವೀರಗಲ್ಲಿನ ಅಲ್ಪ ಸ್ವಲ್ಪ ಅನುಕರಣವು ಆರಿಯರಲ್ಲಿಯೂ ಆರಂಭವಾಗಿದ್ದುದು ಕಂಡುಬರುತ್ತದೆ. ಆದರೆ ಆರ್ಯ ಜನಾಂಗದಲ್ಲಿ ( ಹಿಂದೂದೇಶದಲ್ಲಿ ಅಥವಾ ಹಿಂದೂದೇಶದ ಹೊರಗೆ ) ಯಾವ ಶಾಖೆಯವರೂ ಈ ಬಗೆಯ ವೀರಗಲ್ಲುಗಳನ್ನು ನಡಿಸಿ ಪೂಜಿಸುವ ರೂಢಿಯಿಲ್ಲದೆ ಇದ್ದುದರಿಂದ ಆರಿಯರು ಇದನ್ನು ಕನ್ನಡಿಗರಿಂದಲೇ ಎತ್ತಿಕೊಂಡ ನಡತೆಯೆಂದು ಹೇಳಬಹುದಾಗಿದೆ. ಮತ್ತೂ ಒಂದು ಮಾತೆಂದರೆ ಕನ್ನಡಿಗರ ವೀರಗಲ್ಲಿನ ಒಂದು ವಿಶಿಷ್ಟ ಪಡಿಯಚ್ಚು ಇದೆ. ಕರ್ಣಾಟದ ದಕ್ಷಿಣ ತುದಿಯಲ್ಲಿ ಸಿಕ್ಕುವ ವಿಶಿಷ್ಟ ಪ್ರಕಾರದ ವೀರಗಲ್ಲಿ

ನಂತಹ ನಟ್ಟ ಕಲ್ಲುಗಳೇ ಉತ್ತರದಲ್ಲಿ ನಾಸೀಕ ಮೊದಲಾದ ಕಡೆಗೆ ಸಿಕ್ಕು ತ್ತಿವೆ. ಈ ವರೆಗೆ ಬೆಳಕಿಗೆ ಬಂದಿರುವ ಸಾವಿರಾರು ವೀರಗಲ್ಲುಗಳಲ್ಲಿ ಆರೆ ಲಿಪಿಯವು ಎಷ್ಟು ಹುಡುಕಿದರೂ ಹತ್ತು—ಹದಿನೈದಿಗಿಂತ ಹೆಚ್ಚು ದೊರೆತಿಲ್ಲ!

ಇಂತಿವೆಲ್ಲ ಕಾರಣಗಳಿಂದ ಈ ವೀರಗಲ್ಲುಗಳ ಸಂಪ್ರದಾಯವು ಕನ್ನಡಿಗ ರದೇ ಆದ ಒಂದು ವೈಶಿಷ್ಟ್ಯವೆಂದು ಹೇಳಲು ಅಡ್ಡಿಯಿಲ್ಲ. ಹಾಗಾದರೆ ನಾಸೀಕ ಖಾನದೇಶಗಳ ಕಡೆಗಿರುವ ಈ ವೀರಗಲ್ಲುಗಳು ಯಾರವು ? ಖಾನ ದೇಶದ ಹತ್ತರದಲ್ಲಿರುವ ಈ ವೀರುಗಲ್ಲುಗಳಿಗೆ ಈ ಭಾಗದಲ್ಲಿಯೇ ಇರುವ ಕನ್ನಡ ಕುಣಬಿಗಳು ( ಒಕ್ಕಲರು ), ಗೋವಳರು ಮತ್ತು ಕುರುಬರು ಇವರೇ ಕಾರಣರೆಂದೆನ್ನ ಬಹುದೆ ? ಔರಂಗಾಬಾದ ಜಿಲ್ಲೆಯ ಒಂದು ತಾಲ್ಲೂ ಕಿನ ಸೀಮಾ ವಿಭಾಗಕ್ಕೂ ‘ ಕನ್ನಡ ’ ಎಂಬ ಹೆಸರು ಬರಲು ಈ ಭಾಗದಲ್ಲಿದ್ದ ಪ್ರಾಚೀನ ‘ ಕನ್ನಡ ’ ಗೋವಳರೇ ಕಾರಣರಾಗಿರಬಹುದೇ ? ಆದುದರಿಂದಲೇ ಈ ಪ್ರದೇಶವು ಒಂದುಕಾಲಕ್ಕೆ ‘ ಕನ್ನಡ ’ ವಾಗಿದ್ದಿತೆಂದು ನಿರ್ಧರಿಸಬಹುದೆ ?

ಈ ಸೀಮೆಗೆ ಇರುವ ಖಾನದೇಶವೆಂಬ ಪುರಾತನದ ಹೆಸರು, ಇದು ಮೊದಲು ಕನ್ನಡದ ಸೀಮೆಯೆ ಆಗಿದ್ದಿತು, ಎಂದೆನ್ನಲು ಒತ್ತಾಯಪಡಿ ಸುತ್ತಲಿದೆ. ಮುಂಬೈ ಇಲಾಖೆಯಲ್ಲಿ ‘ಖಾನದೇಶ’ ಎಂಬುದು ಒಂದು ಜಿಲ್ಲೆ, ಎಂಬ ಕಲ್ಪನೆಯಿದ್ದರೂ ಆದು ಜಿಲ್ಲೆಗಿಂತ ದೊಡ್ಡ ಸೀಮೆ. ಆದುದ ರಿಂದಲೇ ಇದು ‘ದೇಶ’; ಇದನ್ನು ಇಬ್ಭಾಗಮಾಡಿ ಪೂರ್ವಖಾನದೇಶ ದಕ್ಷಿಣ ಖಾನದೇಶ ಎಂಬ ಎರಡು ಜಿಲ್ಲೆಗಳನ್ನು ಮಾಡಿದ್ದುಂಟು. ಮೊದಲಿನ ಒಂದು ಕನ್ನಡ ಜಿಲ್ಲೆಯನ್ನು ತುಂಡರಿಸಿ ದಕ್ಷಿಣ ಕನ್ನಡ, ಉತ್ತರ ಕನ್ನಡ, ಎಂದು ವಿಭಾಗಿಸಿದಂತೆ. ಹಲವು ಮಾತುಗಳಲ್ಲಿ ಕನ್ನಡ ಜಿಲ್ಲೆ ಮತ್ತು ಖಾನದೇಶ ಗಳಲ್ಲಿ ಸಾಮ್ಯವಿದೆ. ಈ ಸೀಮೆಗಳಿಗೆ ಬಂದಿರುವ ವಿಶೇಷ ಪ್ರಕಾರದ ಹೆಸರು ಗಳಿಗೆ ಕಾರಣವೇನು? ಎಂಬುದು ವಿಚಾರಾರ್ಹವಾಗಿದೆ. ಸಾಮಾನ್ಯ ವಾಗಿ ಜಿಲ್ಲೆಗಳಿಗೆ ಹೆಸರು ಕೊಟ್ಟುದು ಅವುಗಳ ಮುಖ್ಯ ಸ್ಥಳಗಳಿಂದ. ಧಾರ ವಾಡ, ನಗರ, ಪುಣೆ ಮುಂತಾದವುಗಳೆ ಇದಕ್ಕೆ ನಿದರ್ಶನ. ಈ ದೃಷ್ಟಿಯಿಂದ ವಿಚಾರಿಸಿದರೆ ಪೂರ್ವ ಮತ್ತು ಪಶ್ಚಿಮ ಖಾನದೇಶಗಳಿಗೆ ಜಳಗಾಂವ, ಧುಳೆ

ಎಂಬ ಹೆಸರುಗಳು ಇರಬೇಕಾಗಿತ್ತು. ಅಥವಾ ಕೃಷ್ಣಾ, ಗೋದಾವರಿ ಜಿಲ್ಲೆಗಳಂತೆ ನದಿಯ ಮೇಲಿಂದಲೂ ಕೆಲವು ಜಿಲ್ಲೆಗಳಿಗೆ ಹೆಸರು ಬಂದುದುಂಟು. ಆದರೆ ಖಾನ ಎಂಬ ಹೆಸರಿನ ನದಿಯೂ ಇಲ್ಲಿ ಇಲ್ಲ !

ಹಾಗಾದರೆ ಖಾನದೇಶವೆಂದರೇನು ? ಖಾನರ ದೇಶವೆಂದು ಅರ್ಥ ಮಾಡಬೇಕೆ ? ಖಾನರು ಅಲ್ಪಸಂಖ್ಯಾಕರು. ೧೦೦ಕ್ಕೆ ೭ರಷ್ಟೂ ಇಲ್ಲವಂತೆ ! ಖಾನರ ದೇಶವಲ್ಲದಿದ್ದರೂ ಖಾನರು ಆಳಿದ ದೇಶ ! ಆದುದರಿಂದ ಈ ಹೆಸರು ಎಂದು ಕೆಲರ ತರ್ಕ ! ಖಾನದೇಶದ ಗ್ಯಾಝೆಟಿಯರಿನಲ್ಲಿ ಇದರ ಅಲ್ಪಸ್ವಲ್ಪ ಚರ್ಚೆಯನ್ನು ಮಾಡಿದ್ದುಂಟು. ಅಬುಲ್ ಫಜಲನು ಐನೆ ಅಕಬರಿಯಲ್ಲಿ ಇದೆ ಬಗೆಯಾದ ವ್ಯುತ್ಪತ್ತಿಯನ್ನು ಹೇಳಿದ್ದಾನೆ. ಆದರೆ ' ಖಾನ ' ಎಂಬ ಹೆಸರು ಮುಸಲ್ಮಾನರು ಈ ಪ್ರಾಂತಕ್ಕೆ ಬರುವಮೊದಲಿನಿಂದಲೇ ಇದ್ದಿತೆಂದು ಫೆರಿಸ್ತನು ಹೇಳುತ್ತಾನೆ ಅಬುಲ್ ಫಜಲನು ದಿಲ್ಲಿಯಲ್ಲಿ ಕುಳಿತು ಈ ನಾಡಿನ ವಿಚಾರವಾಗಿ ಬರೆದವನು. ಫೆರಿಸ್ತನು ಅಹಮ್ಮದನಗರ ನಿಜಾಮುಶಹರ ಓಲಗದಲ್ಲಿ ಇತಿಹಾಸ ಲೇಖಕನಾಗಿದ್ದವನು. ಖಾನದೇಶ ಪ್ರಾಂತದ ನೆರೆಯಲ್ಲಿ—ಖಾನದೇಶದಲ್ಲಿಯೆ ಇದ್ದವನಾದ್ದರಿಂದ ಅಬುಲ್ ಫಜಲನಿಗಿಂತ ಈತನಿಗೆ ಇಲ್ಲಿಯ ಇತಿಹಾಸ-ಪರಂಪರೆಗಳ ಹೆಚ್ಚು ಪರಿಚಯವು ಇರುವುದು ಸ್ವಾಭಾವಿಕ.

ಇತ್ತೀಚಿನ ಸಂಶೋಧಕರಿಗೂ ಅಬುಲ್ ಫಜಲನ ಅಭಿಪ್ರಾಯವು ಮಾನ್ಯವಿಲ್ಲ. ಆದರೆ ನಿಜವಾದ ವ್ಯುತ್ಪತ್ತಿಯು ಏನೆಂಬುದೂ ಅವರಿಗೆ ತಿಳಿದಿಲ್ಲ. ಕರ್ನಲ್ ಸಾಯಿಕ್ ಎಂಬವನಿಗೆ ' ಖಾನ' ಎಂಬುದು ಮೂಲಶಬ್ದವೆನಿಸುವುದಿಲ್ಲ. ಕರ್ನಲ್ ಸಾಹೇಬರಿಗೆ ಇದು ಇಕ್ಕಟ್ಟಾದ ಕಣಿವೆಯ ನಾಡು ಎನಿಸಿ, ಅವರು ಖಿಂಡ-ಖಂಡ (ಕಂಡಿ) ಗಳಿರುವ ನಾಡು; ಆದುದರಿಂದ ಖಾನದೇಶವೆಂದು ಹೇಳುವರು. ಆದರೆ ಅಮ್ಮಳನೇರಿಯ ಸಬ್‌ಜಜ್ಜರಾಗಿದ್ದ ಶ್ರೀ. ಮರಾಠೆಯವರು, ಪ್ರಾಚೀನ ಖಾಂಡವವನವಾಗಿದ್ದುದರಿಂದ ಈ ಪ್ರದೇಶಕ್ಕೆ ಅದರಿಂದಲೇ ಖಾನದೇಶವೆಂಬ ಹೆಸರು ಊಹಿಸುತ್ತಾರೆ. ವಿಲ್ಸನನು ಖಂಡ ಜನಾಂಗ ದೇಶವಾಗಿರಬೇಕೆಂದು ಊಹಿಸುತ್ತಾನೆ. ಈ ಖಂಡರು ಮಹಾಭಾರತ ಕಾಲದ ಖಾಂಡವರೆ ಆಗಿರಬೇಕೆಂದೂ ಕೃಷ್ಣನ ನೆರವಿನಿಂದ ಅರ್ಜುನನು ಸುಟ್ಟ ಖಾಂಡವ ವನವು ಇಲ್ಲಿಯೆ ಇದ್ದಿತೆಂದೂ ಅವರ ಅಭಿ

ಪ್ರಾಯ. ಸಿಂಕ್ಲೇಅರ ಸಾಹೇಬರೂ ಸುಮಾರಾಗಿ ಇದೇ ಮತದವರಾಗಿದ್ದಾರೆ. ಸಿಂಕ್ಲೆಅರ ಎಂಬವನು ಇದು ಕನ್ಹದೇಶ ಎಂದು ಅರ್ಥ ಮಾಡುವನು. ಕನ್ಹ ಎಂಬುದೇ ಮುಂದೆ ಖಾನ ಎಂದಾಗಿರಬೇಕೆಂದು ಈತನ ವಿಚಾರ.*

ಸರಿ. ನಮ್ಮ ಅಭಿಪ್ರಾಯದಂತೆ ಶ್ರೀ. ಮರಾಠೆ, ಮಿ. ವಿಲ್ಸನ್ ಮತ್ತು ಸಿಂಕ್ಲೆಅರರು ಸತ್ಯದ ಬಹಳ ಸಮೀಪದಲ್ಲಿ ಸುಳಿದಾಡುತ್ತಲಿದ್ದಾರೆ. ಆದರೆ ಸರಿಯಾದ ಸಂಗತಿಯು ಇನ್ನೂ ಅವರ ಗಮನಕ್ಕೆ ಬಂದಿಲ್ಲ. ಖಾಂಡವವನವು ಉತ್ತರಾಪಥದಲ್ಲಿ ಇಂದ್ರಪ್ರಸ್ಥಕ್ಕೆ ಸಮೀಪದಲ್ಲಿ ಇರಬೇಕೆಂದು ತೋರುತ್ತದೆ. ನಿಜವಾಗಿ ದ್ವಾರಕೆ ಅಥವಾ ಮಥುರಾ ವೃಂದಾವನದ ಸುತ್ತಣ ನಾಡಿಗೆ ಕನ್ಹ (ಕೃಷ್ಣ)ನ ದೇಶವೆಂದು ಹೆಸರಿರಬೇಕಾಗಿದ್ದಿತು. ಆದುದರಿಂದ ಪ್ರಸ್ತುತ ಈ ಪ್ರದೇಶವು 'ಕನ್ಹ'ನ ದೇಶವಲ್ಲ; ಕನ್ನರ ದೇಶವೆಂಬುದೇ ನಿಜ. 'ಕನ್ನ' ಎಂಬ ಜನಾಂಗವು ಪೂರ್ವಕಾಲದಲ್ಲಿ ದಕ್ಷಿಣಾಪಥದಲ್ಲಿ ವ್ಯಾಪಿಸಿಕೊಂಡಿದ್ದುದನ್ನು ಹಿಂದಿನ ಅಧ್ಯಾಯಗಳಲ್ಲಿ ವಿವರಿಸಲಾಗಿದೆ. ಶ್ರೀಶೈಲದ ಹತ್ತರಿನದು ಕಣ್ಣನ್ನ ವಿಷಯವಾಯ್ತು; ಸೊಲ್ಲಾಪುರದ ನೆರೆಹೊರೆಯ ಸೀಮೆಯು ಕನ್ನವಾಡ ವಾಯ್ತು; ಇನ್ನೂ ಎಷ್ಟೋ ಭಾಗವು ಕನ್ನನಾಡು ಎಂದಾಯ್ತು; ಆದುದರಿಂದ ಇದೀಗ ವರ್ಹಾಟದ ಹತ್ತರಿನ ಈ ಸೀಮೆಯು ಕನ್ನ ದೇಶವೇ ಆಗಿರಬೇಕೆಂಬುದು ನಿಶ್ಚಿತ. ಈ ಪ್ರಾಚೀನ ಕನ್ನದೇಶದ ಇಂದಿನ ಅವಶೇಷವೇ ಮೇಲೆ ಹೇಳಿದ 'ಕನ್ನಡ' ತಾಲ್ಲೂಕು. ಖಾನದೇಶದ ವರೆಗೂ ಲಾಟ ದೇಶವಿದ್ದಿತೆಂದು ಪ್ರಾಚೀನ ಉಲ್ಲೇಖಗಳಿಂದ ಸಿದ್ಧವಾಗಿದೆ. ಲಾಟ–ಖಾನದೇಶಗಳ ಈ ಜೋಡಿಯೆ ಪ್ರಾಚೀನ 'ಲಾಟ–ಕರ್ಣಾಟ' ಗಳ ಸಂಯುಕ್ತ ಹೆಸರಿಗೆ ಮೂಲ ಕಾರಣವಾಗಿರಬೇಕು.

ಮರಾಠಿ ಭಾಷೆಯಲ್ಲಿರುವ ಕನ್ನಡ ಧಾತುಗಳ† ಮತ್ತು ಮೂಲ ಮರಾಟ ಜನಾಂಗದಲ್ಲಿರುವ ಕನ್ನಡ ರಕ್ತಸಂಬಂಧದ ಸಮಸ್ಯೆಯು ಸರಿಯಾದ ಅರ್ಥವಾಗಬೇಕಾಗಿದ್ದರೆ ಮೂಲ ಮಹಾರಾಷ್ಟ್ರದ ಎಂದರೆ ವರ್ಹಾಟದ ನೆರೆಯಲ್ಲಿಯೆ ಕರ್ಣಾಟವೂ ಇರಲೇಬೇಕು. ಅದುವೆ ಈ ಕನ್ನದೇಶ—ಖಾನದೇಶ. ನಾಸಿಕ, ನಗರ ಮತ್ತು ಖಾನದೇಶಗಳಲ್ಲಿರುವ ಕನ್ನಡ ಗೋವಳರ

---

* Khandesh Gazett·

† ಮುಮೂ. ಪುಟ ೩೦

ಹಾಗು ಮರ್ಹಾಟದಲ್ಲಿ ಮತ್ತು ಅದರ ನೆರೆಯಲ್ಲಿರುವ ಕನ್ನಡ ಕುರುಬರೇ ಮೊದಲಾದ ಕೆಚ್ಚ ಕನ್ನಡಿಗರ ಆಗು–ಹೋಗುಗಳನ್ನು ವಿಚಾರಿಸಿದರೂ ಈ ಜನಗಳ ಮೊದಲಿನ ನೆಲೆವೀಡು ಇಲ್ಲಿಯೆ ಕೆಲಬಲದಲ್ಲಿ ಎಲ್ಲಿಯಾದರೂ ಇರಲೇ ಬೇಕೆಂಬುದೂ ಸ್ಪಷ್ಟ. ಗುಜರಾತಿಗೆ ಅಂಟಿಕೊಂಡೇ ಎಲ್ಲಿಯಾದರೂ ಕನ್ನಡರ ಸೀಮೆಯು ಇಲ್ಲದೆಯೆ ಗುಜರಾತಿ ಭಾಷೆಯಲ್ಲಿ ಕನ್ನಡ ಮಾತಿನ ಪಡಿನೆಳಲು ಕಾಣುತ್ತಿದೆಯೆಂದು ಮಿ. ಮಾಸ್ಟರ, I. C. S, ಮೊದಲಾದವರು ಹೇಳುವುದೂ ಗುಜರಾತಿನ Substrata ದ್ರಾವಿಡವಾಗಿದ್ದಿತೆಂದು ಡಾ. ಕೊನೆ ಮೊದಲಾದವರು ಪ್ರತಿಪಾದಿಸುವುದೂ ಅರ್ಥವಿಹೀನ.

ಇಂತಿವೆಲ್ಲ ಕಾರಣಗಳಿಂದ ಇಂದಿನ ಖಾನದೇಶವೆ ಮುಂಚಿನ ಕನ್ನದೇಶ. ಕನ್ನರ ದೇಶ, ಎಂಬುದು ನಿಃಸಂದಿಗ್ಧ. ಇಂತಿದು ವಿಂಧ್ಯದಿಂದ ನೀಲಗಿರಿಯವರೆಗೆ ಹಬ್ಬಿದ್ದ ಪುರಾತನ ಕಾಲದ ಕನ್ನಾಡು. ಇದುವೆ ಕನ್ನರ ನೆಲೆವೀಡು.

—( ಓಂ )—

ಶಾಂತಿಃ ಶಾಂತಿಃ ಶಾಂತಿಃ

# ಸಂದರ್ಭ ಗ್ರಂಥಗಳು

( ಅವುಗಳ ಸಂಕ್ಷೇಪದೊಡನೆ )


ಅಭಿಧಾನ ವಸ್ತು ಕೋಶ
ಅಭಿಲಷಿತಾರ್ಥ ಚಿಂತಾಮಣಿ
ಋಗ್ವೇದ
ಕಂಠೀರವ ದಸರಾ ಸಂಚಿಕೆ ( ೧೯೩೮ )
ಕಣ್ಮರೆಯಾದ ಕನ್ನಡ — ಕ ಕ.
ಕರ್ಣಾಟಕ ಕರ್ನಾಟಕ
( ಈ ರೂಪಗಳಲ್ಲಿ ಯಾವುದು ಸಾಧು ) — ಕರ್ಣಾ–ಕರ್ನಾ.
ಕರ್ಣಾಟಕ ಸಾಹಿತ್ಯಪರಿಷತ್ಪತ್ರಿಕೆ — ಕಸಾಪ.
ಕರ್ಣಾಟದ ವೀರಕ್ಷತ್ರಿಯರು — ಕವೀಕ್ಷ.
ಕನಕದಾಸರು — ಕದಾ.
ಕನ್ನಡ ಕವಿಚರಿತೆ — ಕ ಚ.
ಕನ್ನಡದ ಕತೆ.
ಕರ್ನಾಟಕ ಸಾಮ್ರಾಜ್ಯ — ಕಸಾಮ್ರಾ.
ಕವಿರಾಜ ಮಾರ್ಗ
ಜಯಕರ್ನಾಟಕ — ಜ ಕ.
ಜ್ಞಾನೇಶ್ವರಿ
ತುರುಕರ ಪಂಚಮರ ಇತಿಹಾಸ — ತು ಪಂ ಇ.
ಪ್ರಬುದ್ಧ ಕರ್ಣಾಟಕ — ಪ್ರ ಕ,
ಮನುಸ್ಮೃತಿ
ಮರಾಠಿ ಭಾಷಾ, ಉಗಮ ವ ವಿಕಾಸ — ಮ ಭಾ.
ಮರಾಠಿ ಭಾಷೇಚಿ ಘಟನಾ — ಮಘ.
ಮರಾಠಿ ವಾಙ್ಮಯಾಚಾ ಇತಿಹಾಸ — ಮ ವಾ ಇ.
ಮಹಾರಾಷ್ಟ್ರದ ಮೂಲ — ಮ ಮೂ.
ಮಹಾರಾಷ್ಟ್ರ ಶಬ್ದಕೋಶ — ಮಶಕೋ.
ಮಹಾರಾಷ್ಟ್ರ ಸಾರಸ್ವತ — ಮ ಸಾ.
ಮಹಾರಾಷ್ಟ್ರ ಸಾಹಿತ್ಯ ಪತ್ರಿಕಾ — ಮಸಾಪ.
ರಾಧಾ ಮಾಧವ ವಿಲಾಸ ಚಂಪೂ ( ಮುನ್ನುಡಿ )
ರುದ್ರಾಧ್ಯಾಯ
ವಾಚಸ್ಪತ್ಯ ಕೋಶ
ವಿವಿಧ ಜ್ಞಾನವಿಸ್ತಾರ
ಶಬ್ದ ಮಣಿದರ್ಪಣ — ಶಮದ.
ಶಬ್ದಾನುಶಾಸನ — ಶಸ.
ಶಿವರಹಸ್ಯ — ಶಿರ.
ಸಂಸ್ಕೃತ ನಾಟಕಗಳು
ಹರಿಕಥಾಮೃತಸಾರ

---

Ancient India & South Indian History & culture. AI&STHC.
Ancient Indian Historical Traditions — IHT.
Andhra Historical Society Journal — AHSJ.
Aryanisation of India — IA.
Assam Research Society Journal — ARSJ.
Dr. Bhandarkar Commemoration Volume — BCV.
Annals of Bhandarkar Oriental Research Institute — BORI
Bombay Gazetteers — BG.
Bombay Branch of Royal Asiatic Society Journal — BRASJ.

Castes & Tribes of Central Provinces CTC.

Castes and tribes of Mysore CTM.

Castes and Tribes of South India CTS.

Charmichael Lectures 1918 CL.

A Comparative Grammar of Dravidian Languages CGDL.

Early History of India EHI.

Encyclopedia of Religion and Ethics ERE.

Epigraphia Carnatica EC.

Epigraphia Indica EI.

Gujarat & its Literature GL.

Historical Inscriptions in South India HISI.

History of Dharmashastras HDS.

History of Kannada Language KL.

History of Tamils HT.

Indian Antiquary IA.

Indian Culture (Calcutta) IC.

Indian Historical Quarterly IHQ.

Journal of Bombay Historical Society JBHS.

Kadamb Kul KK.

Karnatak Historical Review KHR.

Linguistic Survey of India Vol. I & IV. LSI.

Mysore Gazetteers MG.

(Annual, Reports of Mysore Archaeological Department MAR.

(Annual) Report on South Indian Epigraphy MER.

Inscriptions of Madras Presidency MPI.

Mythic Society Journal MSJ.

Origin and Development of Bengali Language, OBDL

Pre Aryan & Pre Dravidian in India PAPD.

Rashtrakutas & their Times RK.

Some Contributions of South India to Indian Culture SCS.

Studies in Tamil Literature and History STL.

Tamil Lexicon

Telugu Dictionary

Telugu Literature (Heritage of India Series) TL.

Vedic Index Vol. I & II.

ಇದೇ ಲೇಖಕರ

# ಬೇರೆ ಪುಸ್ತಕಗಳು.



| | | |
|---|---|---|
| ಕನ್ನುಡಿಯ ಹುಟ್ಟು | .... | ೧—೧೨—೦ |
| ಕನ್ನಾಡ ಕತೆ | .... | ೩—೦—೦ |
| ಕನ್ನುಡಿಯ ಜೀವಾಳ | .... | ೩—೦—೦ |
| ಶಿವರಹಸ್ಯ | .... | ೧—೪—೮ |
| ಕರ್ಣನ ಮೂರು ಚಿತ್ರ | .... | ೧—೪—೦ |
| ಅಗ್ನಿವಿದ್ಯೆ | .... | ೦—೯—೦ |
| ದಾರಿಯ ಬುತ್ತಿ | .... | ೦—೪—೦ |
| ಸನಾತನ ಧರ್ಮ | .... | ೦—೪—೦ |
| ಯಕ್ಷಪ್ರಶ್ನೆ ಅಥವಾ ಬರಲಿರುವ ಸಮಾಜ | .... | ೩—೦—೦ |

ದೊರೆಯುವ ಸ್ಥಳ:

**ಸಮಾಜ ಪುಸ್ತಕಾಲಯ,**

ಭಗತಸಿಂಗ ಬೀದಿ,

ಧಾರವಾಡ.